ಜುಲೈ ೧೯೯೫

# ಕಸ್ತೂರಿ

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ



ಯಂಡಮೂರಿ ವೀರೇಂದ್ರನಾಥ್ ಅವರ

## 'ಯಶಸ್ಸಿನತ್ತ ಪಯಣ'

ಪುಸ್ತಕ ವಿಭಾಗ

ರೂ. ೬-೦೦

# "ದೊಂಬರಾಟವಯ್ಯಾ...."



(ಕೃಪೆ: ನ್ಯಾಶನಲ್ ಜಿಯಾಗ್ರಫಿಕ್)



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ಎ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಯಶಸ್ಸಿನತ್ತ ಪಯಣ
ಹೊರಟಿರುವ ಯುವೋತ್ಸಾಹ
('ಕಸ್ತೂರಿ'ಯ ಸಂಗ್ರಹದಿಂದ)

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.


## ಚಿಂತನ

"ಮಳೆ ಬಂದು ಬೆಳೆ ಬೆಳೆದು ಇಳೆ ತಣಿಯಲೆಂದು
ತಿಳಿಗೊಳಗಳುಕ್ಕುಕ್ಕಿ ತುರುಗಳು ಕರೆಯಲೆಂದು"

–ಎಂದಲ್ಲ ಮೊನ್ನೆ ಜೂನ್ ಮೂರರ ದಿನ ಮುಧೋಳದಲ್ಲಿ ಸಾಹಿತ್ಯ ಸಮ್ಮೇಳನಾಧ್ಯಕ್ಷ ನಾಗೇಗೌಡರು ಆಶಯ ವ್ಯಕ್ತಪಡಿಸಿದರಷ್ಟೇ. 'ಸರ್ವೇ ಜನಾಃ ಸುಖಿನೋಭವಂತು' ಎಂಬ ಸಂಸ್ಕೃತೋಕ್ತಿಯ ಆಶಯವೂ ಇದೇ. ನಮ್ಮ ಎಲ್ಲಾ ಜಾನಪದ ರಂಗಪ್ರಕಾರಗಳಲ್ಲಿಯೂ ಕೊನೆಯಲ್ಲಿ ಜಗನ್ನಿಯಾಮಕನಲ್ಲಿ ಇಡುವ ಮೊರೆ ಕೂಡ ಇದೇ ಆಗಿದೆ.

ಆದರೆ, ವರುವರುಷವೂ ತಡವಾಗುತ್ತಿರುವ ಮಳೆಗಾಲ ಈ ಸಲ ಇತ್ತ ಕಡೆ ಇಣುಕುವ ಗೋಜಿಗೂ ಹೋಗಿಲ್ಲ. ಶ್ರೀನಗರದಂಥ ಶ್ರೀನಗರದಲ್ಲಿ ೩೫ ಡಿಗ್ರಿ ಸೆಲ್ಸಿಯಸ್‌ನಷ್ಟು ಉಷ್ಣತೆಯಂತೆ. ರಾಜಸ್ಥಾನದಲ್ಲಂತೂ ಇನ್ನೂ ೧೫ ಡಿಗ್ರಿಯಷ್ಟು ಹೆಚ್ಚಿಗೆಯೆ. "ಛೆ, ಪಾಪಿಷ್ಠರು ಹೆಚ್ಚಾಗಿದ್ದಾರೆ. ಆದಕ್ಕೇ ಹೀಗೆ," ಎಂಬ ಅಭಿಪ್ರಾಯ ಇಂಥ ಸಂದರ್ಭಗಳಲ್ಲೆಲ್ಲ ಕೇಳಿ ಬರುವುದು ಸಾಮಾನ್ಯ.

ಹಾಗಾದರೆ ಈ ಪಾಪಿಷ್ಠರು ಯಾರು? ಪ್ರಕೃತಿಯ ಸಮತೋಲನವನ್ನು ಏರುಪೇರು ಮಾಡಿದ, ಮಾಡುತ್ತಿರುವ ನಾವೆಲ್ಲರೂ ಪಾಪಿಷ್ಠರೆ. ಹಸಿರು ವನವನ್ನು ಒಣ ಬಯಲಾಗಿಸಿ ಮಹಲುಗಳನ್ನು ಕಟ್ಟಿಕೊಳ್ಳುವ ದುಷ್ಟ ಇಷ್ಟಗಳೆಲ್ಲ ಪಾಪಯೋಚನೆಗಳೆ. ಇನ್ನಷ್ಟು ಮತ್ತಷ್ಟು ಎಂದು ಭೂಮಿಯನ್ನು ಬಗೆಬಗೆದು ನೋಡಿ, ಏನಾದರೂ ಸಿಕ್ಕೀತೇ ಎಂದು ಆಶೆಪಡುವ ತುಚ್ಛ ಇಚ್ಛುಕರು ನಾವು. ಕಾಡನ್ನು ಕಡಿದು ಕೊಳ್ಳೆಯಿಕ್ಕಿ ನಮ್ಮನ್ನು ಸೂರ್ಯನ ಪ್ರಖರತೆಯಿಂದ ಪಾರುಗಾಣಿಸುವ ಓಝೋನ್ ಪದರವನ್ನೇ ಛಿದ್ರಗೊಳ್ಳುವಂತೆ ಮಾಡಿದವರು ನಾವು. ಇದ್ದುದನ್ನು ಹದಗೆಡಿಸಿಟ್ಟು ಆಮೇಲೆ ಅದನ್ನು ಸರಿಪಡಿಸಲೋ ಅದಕ್ಕೊಂದು ಪರ್ಯಾಯ ವ್ಯವಸ್ಥೆ ಹುಡುಕಲೋ ತಿಣುಕಾಡಿ ವೈಜ್ಞಾನಿಕ ಸಿದ್ಧಿ ಎಂಬ ಹೆಮ್ಮೆ ಹೊತ್ತುಕೊಳ್ಳುವವರು.

ಮೊನ್ನೆ ಯಾರೋ ಹೇಳುತ್ತಿದ್ದರು. ತಾನಸೇನ ಮೇಘ ಮಲ್ಹಾರ ಹಾಡಿದರೆ ಮಳೆ ಬೀಳುತ್ತಿತ್ತು ಎಂದು. ಈಗೆಲ್ಲಿದ್ದಾರೆ ತಾನಸೇನರು? ಈಗಿರುವವರೆಲ್ಲ ಅಪಾಚೆ ಇಂಡಿಯನ್ನರು.

ಆದರೂ, "ನಿಲ್ಲಿ ಮೋಡಗಳೇ.... ಒಂದಷ್ಟು ಮಳೆಯ ಸುರಿಸಿ," ಎಂದು ಕೇಳಿಕೊಳ್ಳುತ್ತದೆ ಪ್ರತಿ ಜೀವಿಯ ಮನಸ್ಸು. ಹೌದು. ಹೀಗೆ ಕೇಳಿಕೊಳ್ಳುವ ಮನಸ್ಸೇ ಮನುಷ್ಯಮನಸ್ಸು.

• ವ್ಯವಸ್ಥಾಪಕ ಸಂಪಾದಕ

# ಸಹ ಚಿಂತನ

ಜೂನ್ ಸಂಚಿಕೆಯಲ್ಲಿ ಪ್ರಕಟವಾದ ಅಟಲ್ ಬಿಹಾರಿ ವಾಜಪೇಯಿಯವರೊಂದಿಗಿನ ಸಂದರ್ಶನ ಸ್ವಾರಸ್ಯಕರವಾಗಿತ್ತು. ಆದರೆ ಇತ್ತೀಚಿನ ಸಮಸ್ಯೆಗಳ ಬಗ್ಗೆ ಹೆಚ್ಚಿನ ಒತ್ತು ಈ ಸಂದರ್ಶನದಲ್ಲಿ ಕಾಣದಿರುವುದೊಂದು ಕೊರತೆಯೆನಿಸಿತು.

ಬೆಟ್ಟದಪುರ — ಎಮ್. ಮಹದೇವ

ಅಟಲ ಬಿಹಾರಿ ವಾಜಪೇಯಿಯವರ ಸಂದರ್ಶನ ತುಂಬಾ ಚೆನ್ನಾಗಿತ್ತು. ನಿಜವಾಗಿಯೂ ಅವರು ಒಬ್ಬ ಅಪರೂಪದ ವ್ಯಕ್ತಿಯೇ ಸರಿ. ಆದರೆ ಕಸ್ತೂರಿಯು ಅವರನ್ನು ನೇರವಾಗಿ ಸಂಪರ್ಕಿಸಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು. ಕಸ್ತೂರಿಯಲ್ಲಿ ಇಂಥ ವ್ಯಕ್ತಿಗಳ ಸಂದರ್ಶನಗಳು ಆಗಾಗ ಮೂಡಿ ಬರುತ್ತಿರಲಿ.

ಧಾರವಾಡ — ಎಸ್.ಎ. ಮುರಾಳ

**(ವ್ಯಾವಹಾರಿಕ ಕಾರಣಗಳಿಂದಾಗಿ ನೇರ ಸಂದರ್ಶನ ಸಾಧ್ಯವಾಗದಾಗ ಮಾತ್ರ 'ಕಸ್ತೂರಿಯು ಇತರ ಮೂಲಗಳಿಂದಾಯ್ದ ಸಂದರ್ಶನಗಳನ್ನು ಅವಲಂಬಿಸುತ್ತದೆ. -ಸಂ.)**

"ಅಟಲ್" ಎಂಬ ಹೆಸರಿನಲ್ಲಿಯೇ ಇತರರನ್ನು ಮುಗ್ಧರನ್ನಾಗಿಸುವ ಮಾಂತ್ರಿಕ ಶಕ್ತಿ ಇದೆ. ದೂರದರ್ಶನದ ಕೆಲ ಕಾರ್ಯಕ್ರಮಗಳಲ್ಲಿ ಅವರ ವಾಕ್‌ಚಾತುರ್ಯದ ಸವಿಯನ್ನು ಆನಂದಿಸಿದ್ದೇನೆ. ದೇಶ ಸೇವೆಗಾಗಿ ಬ್ರಹ್ಮಚಾರಿಯಾದ ಅವರ ಮನಃಸ್ಥೈರ್ಯ ಅನುಪಮವಾದದ್ದು.

ನಿಲೋಗಲ್ — ಶಿವರಾಜ ಕರಡ್ಡಿ

ಬೆಳಗಾಂವಿ — ರೂಪಾ ಮರಿಗೇರಿ

ನವಲಗುಂದ — ಸಿದ್ಧಲಿಂಗೇಶ ಸಂ. ಹಂಡಿಗಿ

ಕಾರ್ಕಳ — ಕೆ. ದಯಾನಂದ ಪೈ

## ಒಂದಡಿ ಅಗಲ!

'ಒಂದಡಿ ಅಗಲದ ನೋಟೂ ಇತ್ತು!' (ಜೂನ್ ೯೫) ಎಂಬ ಲೇಖನದಲ್ಲಿ 'ವೃಷಭೇಂದ್ರಯ್ಯ' ಹಣದ ಹುಟ್ಟು ಬೆಳವಣಿಗೆಯ ಕುರಿತು ವಿವರಿಸಿದ್ದಾರೆ. ಧನ್ಯವಾದಗಳು.

ಮಡಿಕೇರಿ — ಬಿ.ಎ. ಕೃಷ್ಣಭಗವಾನ

## ಸುಂದರಿಯರ ಪಾಡು!

'ಭಿಕ್ಷೆ ಬೇಡಿದ ರಾಷ್ಟ್ರ ಸುಂದರಿ, ಜೇಲು ಸೇರಿದ ವಿಶ್ವ ಸುಂದರಿ!' (ಜೂನ್ ೯೫) ಅಚ್ಚರಿದಾಯಕ ಮಾಹಿತಿಯ ಲೇಖನ.

ಚಿಕ್ಕೋಡಿ — ಆನಂದ ರ. ನಾಯಿಕ

## ಸಬೀರ್ ಶೇಖ್

'ಹಿಂದುತ್ವವಾದಿ ಮುಸ್ಲಿಂ ಶಿವ ಸೈನಿಕ' (ಜೂನ್ ೯೫) ಎಂ. ದೀಪಾರವರ ಲೇಖನ ಓದಿದೆ. ಆಶ್ಚರ್ಯದ ಜೊತೆಗೆ ಖುಷಿಯೂ ಆಯಿತು. ಇಂದಿನ ಕಾಲದಲ್ಲಿ ಹಿಂದು-ಮುಸ್ಲಿಂ ಎಂದು ಫಿತೂರಿ ನಡೆಸುವವರಿಗೆ ಸಬೀರ್ ಶೇಖ್ ಕಣ್ತೆರೆಸಬಲ್ಲ ವ್ಯಕ್ತಿ.

ಕುಷ್ಟಗಿ — ಸುರೇಶ ಡಿ. ಸಿನ್ನೂರು

ಅಂಕೋಲಾ — ಸಂತೋಷನಾಯ ಶೆಟಗೇರಿ

## ಸೇಡಿಯಾಪು

'ಕಸ್ತೂರಿ'ಯ ಮೇ ತಿಂಗಳ ಸಂಚಿಕೆಯಲ್ಲಿ ಡಾ. ಶ್ರೀಕೃಷ್ಣ ಭಟ್ಟ ಅರ್ತಿಕಜೆ ಬರೆದ ವ್ಯಕ್ತಿ ಚಿತ್ರ ಓದಿದೆ.

ಸೇಡಿಯಾಪು ಅವರನ್ನು ಅನಕೃರವರು 'ಶಬ್ದನಿಧಿ' ಎಂದು ಕರೆದರು ಎಂಬುದನ್ನು ಓದಿದಾಗ ನನಗೆ ಒಂದು ಘಟನೆ ಸ್ಮರಣೆಗೆ ಬಂತು. ಸೇಡಿಯಾಪು ಅವರ ಅಭಿಮಾನಿಯಾದ ನಾನು ಸುಮಾರು ೨೫ ವರ್ಷಗಳ ಹಿಂದೆ ಅವರಿಗೊಂದು ಪತ್ರ ಬರೆದೆ. ಉತ್ತರ ಬಂತು. ಅದರಲ್ಲಿ ನಾನು ಪ್ರಯೋಗಿಸಿದ ಒಂದು ಶಬ್ದ "ಕುಲಾಂಕುಶ"ದ ಬಗೆಗೆ ಅವರು ಪತ್ರದ ಕೆಳಗೆ ಒಂದು ಷರಾ ಸೇರಿಸಿದ್ದರು: ಕುಲಾಂಕುಶ ಅಲ್ಲ ಕೂಲಂಕಷ.

ಈಗ್ಗೆ ಹದಿನೈದು ವರ್ಷಗಳ ಹಿಂದೆ ನನ್ನ ಮಗ ಅವರಿಗೊಂದು ಪತ್ರ ಬರೆದಿದ್ದ. ಅವನೂ ಅದೇ ಶಬ್ದವನ್ನು ಕಾಕತಾಳೀಯವಾಗಿ ಹಾಗೆಯೆ ಉಪಯೋಗಿಸಿದ್ದ- ಉತ್ತರದಲ್ಲಿ ಸೇಡಿಯಾಪು ಆತನಿಗೂ ತಿದ್ದುಪಡಿ ಸೂಚಿಸಿ ಬರೆದಿದ್ದರು. ಅವರು ಶಬ್ದ ನಿಧಿ ಹೌದು. ಶಬ್ದದ ಸ್ವಚ್ಛತೆ, ಭಾಷೆಯ ಶುದ್ಧತೆ ಅವರಿಗೆ ಪ್ರಿಯವಾದ ವಿಚಾರ.

ಇಡಿಯ ಲೇಖನದಲ್ಲಿ ಅವರ ಗುಣ ವಿಶೇಷವೊಂದನ್ನು ಲೇಖಕರು ಬರೆಯಲುಬಿಟ್ಟಿದ್ದಾರೋ

ಅಥವಾ ಗಮನಿಸಲಿಲ್ಲವೋ ತಿಳಿಯದು. ಬಾಲ್ಯದಲ್ಲಿಯೇ ಸಮೀಪ ದೃಷ್ಟಿಯ ದಪ್ಪ ಕನ್ನಡಕದ ಸೇಡಿಯಾಪು ಅವರು ಇತ್ತೀಚಿನ ವರ್ಷಗಳಲ್ಲಿ ಪೂರ್ಣ ದೃಷ್ಟಿಯನ್ನು ಕಳೆದುಕೊಂಡಿದ್ದಾರೆ. ಆದರೂ ಚಿಂತನೆಗೆ, ಬರವಣಿಗೆಗೆ ಅದರಿಂದ ಚ್ಯುತಿಬಂದಿಲ್ಲ. ಪಾದೆಕಲ್ಲು ವಿಷ್ಣುಭಟ್ಟರು ಅವರ ಬರವಣಿಗೆಗೆ ಲೇಖನಿಯಾಗಿ ಶ್ರಮವಹಿಸುತ್ತಿದ್ದಾರೆ.

ಎರಡೂ ಕಣ್ಣುಗಳಲ್ಲಿ ದೃಷ್ಟಿ ಕಳೆದುಕೊಂಡು, ಇತ್ತೀಚೆಗೆ ಹೆಂಡತಿಯನ್ನೂ ಕಳೆದುಕೊಂಡು, ಮಗ ಮತ್ತು ಸೊಸೆಯ ಆರೈಕೆಯಲ್ಲಿ ದಿನ ಕಳೆಯುವ ಅವರು, "ಅಯ್ಯೋ ನನಗೆ ದೃಷ್ಟಿಯಿಲ್ಲವಲ್ಲ, ಅಯ್ಯೋ ನನ್ನ ಆರೋಗ್ಯ ಸರಿಯಿಲ್ಲವಲ್ಲ" ಎಂದು ಯಾರೊಡನೆಯೂ ಹೇಳಿದವರಲ್ಲ. ಯೋಗಕ್ಷೇಮ ಮಾತಾಡುತ್ತಾರೆ, ಬಂದವರು ಸಾಹಿತ್ಯ ಪ್ರಿಯರಾದರೆ ಸಾಹಿತ್ಯ ಚರ್ಚೆ ನಡೆಸುತ್ತಾರೆಯೆ ಹೊರತು ತಮ್ಮ ಸಂಕಷ್ಟಗಳನ್ನು ಅನ್ಯರ ಕಿವಿಗೆ ಎರೆದು ಹಿಂಸಿಸಿದವರು ಅಲ್ಲವೇ ಅಲ್ಲ. ಅವರು ಸ್ಥಿತಪ್ರಜ್ಞರು.

ಸಂಪಾಜೆ ಸರವು ರಾಮಭಟ್ಟ

## ದೇವನೊಲಿದ ಜೀವ

ಮೇ ತಿಂಗಳ ಸಂಚಿಕೆಯ ಪುಸ್ತಕ ವಿಭಾಗದಲ್ಲಿ ನಾ. ಕಸ್ತೂರಿಯವರ "ದೇವನೊಲಿದ ಜೀವ" ಪುಸ್ತಕದ ಸಂಕ್ಷಿಪ್ತ ಸಂಗ್ರಹ ಓದಿದಾಗ ಭಗವಾನ್ ಸಾಯಿಬಾಬಾರ ನೆನಪಿನ ಅಲೆಗಳು ಬಹಳ ದಿನಗಳ ನಂತರ ಮತ್ತೆ ಎದ್ದಂತಾಯಿತು. ಎಪ್ಪತ್ತರ ದಶಕದಲ್ಲಿ ಸತ್ಯಸಾಯಿಬಾಬಾ ಅವರ ಕುರಿತಂತೆ ಪರ ಹಾಗೂ ವಿರೋಧವಾಗಿ ಎದ್ದ ವಾದ-ವಿವಾದಗಳು ಗುಂಗನ್ನೇ ಹಿಡಿಸಿಬಿಟ್ಟಿದ್ದವು.

ಡಾ. ಭಗವಂತಂ, ಡಾ. ವಿ.ಕೃ.ಗೋಕಾಕ, ಡಾ. ಎ.ಎಸ್. ಅಡಕೆ, ಡಾ. ರಾ. ಯ. ಧಾರವಾಡಕರ, ನಾ. ಕಸ್ತೂರಿ ಮುಂತಾದ ಪ್ರಚಂಡರೆಲ್ಲ ಬಾಬಾ ಅವರ ಶಿಷ್ಯರೆನ್ನಿಸಿದ್ದರೆ, ಡಾ. ಕೋವೂರ, ಡಾ. ಎಚ್. ನರಸಿಂಹಯ್ಯ, ಬೀಚಿ ಮೊದಲಾದವರೆಲ್ಲ ಸಾಯಿಬಾಬಾರ ವ್ಯಕ್ತಿತ್ವದಲ್ಲಿ ಪೊಳ್ಳನ್ನು ಹುಡುಕಿ ತೋರಿಸಲು ಯತ್ನಿಸುತ್ತಿದ್ದರು. ಇದೇ ಸಂದರ್ಭದಲ್ಲಿ ಶ್ರೀ ಚಂದ್ರಶೇಖರ ಪಾಟೀಲರಂಥವರು ನಾಟಕಗಳಂಥ ಸಾಹಿತ್ಯ ಮಾಧ್ಯಮದ ಮೂಲಕ ಬಾಬಾರನ್ನು ಛೇಡಿಸಲು ಯತ್ನಿಸುತ್ತಿದ್ದರು. ಆ ಸಮಯದಲ್ಲಿ ಶ್ರೀ ಭಗವಾನ್ ಸಾಯಿ ಅವರನ್ನು ನಂಬಲೂ ಆಗದೇ ಬಿಡಲೂ ಆಗದೇ ನಮ್ಮಂತಹ ಅನೇಕ ತರುಣರು ತೊಳಲುತ್ತಿದ್ದುದು ಸಹಜವಾಗಿತ್ತು. ಆಗ ಧಾರವಾಡವಂತೂ ಸತ್ಯಸಾಯಿಯವರ ಪರ-ವಿರೋಧಿಗಳ ಗದ್ದಲದಿಂದ ತುಂಬಿಹೋಗಿತ್ತು, ಒಂದೆಡೆ ಸಾಯಿ-ಸಂಸ್ಥೆಗಳು ಬಾಬಾರವರ ಭಜನೆ, ಆರತಿಗಳನ್ನು ನಡೆಸುತ್ತಿದ್ದರೆ, ಮತ್ತೊಂದೆಡೆ ಅವರ ಕುರಿತ ಪ್ರಹಸನಗಳು ತಲೆ ಕೆಡಿಸುತ್ತಿದ್ದವು. ಆಶ್ಚರ್ಯವೆಂದರೆ ಈ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಎಲ್ಲವೂ ಶಾಂತವಾಗಿ ಹೋಗಿದೆ. ಈಗ ಮತ್ತೆ ನಾ. ಕಸ್ತೂರಿ ಅವರ ಪುಸ್ತಕದ ಅವತರಣಿಕೆಗಳನ್ನೋದಿ ನನ್ನ ನೆನಪುಗಳು ತಾಜಾ ಆದವು. ಅದಕ್ಕಾಗಿ 'ಕಸ್ತೂರಿ'ಗೆ ಧನ್ಯವಾದಗಳು.

ಬಾಗಲಕೋಟ ಚಿದಂಬರ ಇನಾಮದಾರ

ಕೆ. ಬಿ. ಪ್ರಭುಪ್ರಸಾದ್ ಅನುವಾದಿಸಿದ 'ದೇವನೊಲಿದ ಜೀವ' ಓದಿದೆ. ನಾ. ಕಸ್ತೂರಿಯವರು ಕನ್ನಡ ಸಾಹಿತ್ಯಕ್ಕೆ ತಮ್ಮದ್ದೇ ಆದ ವಿಶಿಷ್ಟಕೊ

(ಆರನೇ ಪುಟಕ್ಕೆ)

ಜೂನ್ ೧೯೫೧ರ ಸಂಚಿಕೆಯ ೧೪೪ನೆಯ ಪುಟದಲ್ಲಿ ಕೆ.ವಿ. ನಾಗವಂದರ ಹೆಸರಿನಲ್ಲಿ ಪ್ರಕಟವಾಗಿರುವ 'ಭುಜಗಳು' ಎಂಬ ಕವಿತೆಯು ಸಂಯುಕ್ತ ಕರ್ನಾಟಕ 'ಸಾಪ್ತಾಹಿಕ ಸೌರಭ'ದಲ್ಲಿ ೬-೩-೯೪ರಂದು ಕಾಣಿಸಿಕೊಂಡ ತಮ್ಮ ಇದೇ ಹೆಸರಿನ ಕವಿತೆಯ ಕತ್ತರಿಸಿದ ಭಾಗ ಎಂಬುದನ್ನು ಹಾರೂಗೇರಿಯ ಕಲ್ಲೇಶ್ ಕುಂಬಾರ ಅವರು ಆಧಾರ ಸಹಿತ ನಮ್ಮ ಗಮನಕ್ಕೆ ತಂದಿದ್ದಾರೆ. ನಾವು ಇಂಥ ಕೃತಿಚೌರ್ಯವನ್ನು ಖಂಡಿಸುತ್ತೇವೆ.

— ಸಂಪಾದಕ

# ಅಂತರಂಗ






## ಚಿಗುರು ಚಿಂತೆ

ಕಾಯದೆ ಎಂದರೆ ಒಂದು ಕತ್ತೆ ಅದನ್ನು ಹೇಗೆ ಬೇಕಾದರೂ ದುಡಿಸಿಕೊಳ್ಳಬಹುದು.

-ಶಾಂತಿನಾಥ ದೇಸಾಯಿ

ಸಾಹಿತಿಯು ತನ್ನನ್ನು ತಾನೇ ಪ್ರೀತಿಸಿಕೊಳ್ಳುತ್ತಾನೆ. ರಾಜಕಾರಣಿಯು ಇನ್ನೊಬ್ಬ ರಾಜಕಾರಣಿಯನ್ನು ದ್ವೇಷಿಸುತ್ತಾನೆ.

-ಅನಾಮಿಕ

ನಿನ್ನ ಬಳಿ ಎರಡು ರೊಟ್ಟಿಗಳಿದ್ದರೆ ಒಂದನ್ನು ಕೊಟ್ಟು ಹೂವನ್ನಾಗಲಿ ಸುಂದರ ಕಲಾಕೃತಿಯನ್ನಾಗಲಿ ಕೊಂಡುಕೋ

-ಚೀನಾ ದೇಶದ ಉಕ್ತಿ

ಸ್ವ ಶಕ್ತಿಯೇ ಗೌರವಕ್ಕೆ ಸಾಧನ.

-ಕಥಾಸರಿತ್ ಸಾಗರ

ವರ್ಣಿಸಲಸದಳ ಎನ್ನುವಷ್ಟು ಆಕೆ ಸುಂದರಿಯಾಗಿದ್ದದ್ದೇ ನಿಜವಾದರೆ ಆಕೆಯನ್ನು ವರ್ಣಿಸಿ ಸುಮ್ಮನೆ ವೇಳೆಯನ್ನು ಹಾಳುಮಾಡಿಕೊಳ್ಳಲು ಯಾರು ತಾನೆ ಇಷ್ಟಪಡುತ್ತಾರೆ?

-ಎಂಆರ್‌ಎಸ್

### ಪುಸ್ತಕ ವಿಭಾಗ

ಯಂಡಮೂರಿ ವೀರೇಂದ್ರನಾಥ್
ಬರೆದ

**ಯಶಸ್ಸಿನತ್ತ ಪಯಣ**

ಸಂಗ್ರಹಾನುವಾದ:
ಆರ್.ವಿ. ಕಟ್ಟೀಮನಿ, ತಡಕಲ್



### ಆರೋಗ್ಯದಂಗಳ

**ಮೂತ್ರಪಿಂಡ ಕಸಿ:
ಏನು? ಏಕೆ?**

• ಡಾ. ಶಿವಾನಂದ ಕುಬಸದ

(ಮೂರನೇ ಪುಟದಿಂದ)
ಡುಗೆ ನೀಡಿದ ಹಿರಿಯ ಸಾಹಿತಿಯಾಗಿದ್ದರೆನ್ನುವ ಕಾರಣಕ್ಕೆ ಹಾಗೂ Living God ಹೆಚ್ಚು ಕಡಿಮೆ ಅವರದೇ ಆದ ಆತ್ಮಕ್ಕತೆಯಾಗಿರಬಹುದಾದ ಕಾರಣಕ್ಕೆ ಈ ಪುಸ್ತಕ ಓದುವ ಕುತೂಹಲ ಹುಟ್ಟಿಸುತ್ತದೆ.

ಬೆಂಗಳೂರು ಈರಪ್ಪ ಎಂ. ಕಂಬಳಿ

ಪವಾಡಗಳನ್ನು ಪ್ರಮಾಣಿಸದೇ ನಂಬಬಹುದೇ? ಅದಿರಲಿ, ಸಾಯಿಬಾಬಾ ಅವರು ಇಲ್ಲಿಯತನಕ ಅಂಗೈ ಆಕಾರಕ್ಕಿಂತಲೂ ಸಣ್ಣ ವಸ್ತುಗಳನ್ನು ಮಾತ್ರ ಸೃಷ್ಟಿಸಿರುವುದೇಕೆ? ಕಲ್ಲಂಗಡಿ ಗಾತ್ರದ ವಸ್ತುಗಳನ್ನು ಸೃಷ್ಟಿಸಿಲ್ಲ ಏಕೆ? ಇಂತಹ ಪವಾಡ ಪುರುಷರಿಗೆ ರೋಗಿಗಳನ್ನು ಗುಣಪಡಿಸುವುದು ಸಾಧ್ಯವಿಲ್ಲವೆ? ಕೋಟಿಗಟ್ಟಲೇ ಹಣ ಸುರಿದು ಅತ್ಯಾಧುನಿಕ ಆಸ್ಪತ್ರೆಯನ್ನು ಕಟ್ಟುವ ಅಗತ್ಯ ಎನಿತ್ತು?

ಧಾರವಾಡ ಎಂ.ವಿ. ನಾರಾಯಣ

## ಮೈಸೂರಿನ ರೈಲ್ವೆ ಮ್ಯೂಸಿಯಂ

ಮೈಸೂರು ನಗರದಲ್ಲಿ ಹಲವಾರು ದಶಕಗಳಿಂದ ಇದ್ದರೂ ರೈಲ್ವೆ ಮ್ಯೂಸಿಯಂಅನ್ನು ನೋಡದ ನಾನು ಶ್ರೀಮತಿ ಟಿ.ಎಸ್. ಲಲಿತಾರ (ಮೇ ೯೫) ಲೇಖನ ಓದಿದ ಮೇಲೆ ನೋಡಿಕೊಂಡು ಬಂದೆ. ಲೇಖನವನ್ನೋದಿದ ಮೇಲೆ ನನ್ನ ಹಾಗೆ ಹಲವರಲ್ಲಿ ಮ್ಯೂಸಿಯಂ ನೋಡಬೇಕೆಂಬ ಆಕಾಂಕ್ಷೆ ಹುಟ್ಟಿದ್ದರೆ ಆಶ್ಚರ್ಯವಿಲ್ಲ. ಸುಂದರ ಚಿತ್ರಗಳೊಡನೆ ಕಣ್ಣಿಗೆ ಕಟ್ಟುವ ಹಾಗೆ ಮ್ಯೂಸಿಯಂನ ವಿವರ ನೀಡಿರುವ ಅವರಿಗೂ, ಪ್ರಕಟಿಸಿದ ನಿಮಗೂ ಧನ್ಯವಾದಗಳು.

**ಮೈಸೂರು ಎಚ್. ಆರ್. ಚಂದ್ರವದನರಾವ್**

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಆನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೩೯ ಜುಲೈ ೧೯೭೫ ಸಂಚಿಕೆ: ೧೧

# ದೇಶ ಭಕ್ತಿ

ಸ್ವಾಮಿ ವಿವೇಕಾನಂದರಿಗೆ ಭಾರತದ ಬಗ್ಗೆ ಅಪಾರ ಅಭಿಮಾನ ಮತ್ತು ಭಕ್ತಿ. ಓರ್ವ ವ್ಯಕ್ತಿಗೆ ಇದು ಸರಿಬರಲಿಲ್ಲ. ಅವನು ಒಮ್ಮೆ ಅವರನ್ನು ಕೇಳಿದ, "ಸ್ವಾಮಿಗಳೇ! ಸನ್ಯಾಸಿಗಳು ದೇಶದ ಸೀಮೆಯನ್ನೂ ದಾಟಿ ಇಡೀ ವಿಶ್ವವನ್ನೇ ತಮ್ಮದೆಂದು ತಿಳಿಯಬೇಕು. ಆದರೆ ನೀವು ಮಾತ್ರ ಭಾರತದ ಬಗ್ಗೆ ಮಾತ್ರ ಮೆಚ್ಚುಗೆಯ ಮಾತಾಡುತ್ತೀರಲ್ಲ?"

ಆಗ ಸ್ವಾಮೀಜಿ ಉತ್ತರಿಸಿದರು: "ಗೆಳೆಯಾ, ಯಾವನು ತನ್ನ ತಾಯಿಯ ಪಾಲನೆ ಪೋಷಣೆಯನ್ನು ಚೆನ್ನಾಗಿ ಮಾಡುವುದಿಲ್ಲವೋ, ಅವನು ಮತ್ತೊಬ್ಬರ ತಾಯಿಯ ಪಾಲನೆ ಪೋಷಣೆಯನ್ನೇನು ಮಾಡಬಲ್ಲ? ಅದರಂತೆಯೇ ಯಾರಿಗೆ ತಮ್ಮ ದೇಶದ ಬಗ್ಗೆ ಪ್ರೀತಿ, ಭಕ್ತಿ ಇಲ್ಲವೋ, ಆತನಿಗೆ ಇಡೀ ವಿಶ್ವದ ಬಗ್ಗೆ ಪ್ರೀತಿ, ಭಕ್ತಿ ಇರುವುದಾದರೂ ಹೇಗೆ?"



ಸ್ವಾಮಿ ವಿವೇಕಾನಂದರ ಶಿಷ್ಯರು ಆಗಾಗ ಅವರಿಗೆ ಭಗವದ್ಗೀತೆಯ 'ನಿಷ್ಕಾಮ ಕರ್ಮ'ದ ಬಗ್ಗೆ ತಿಳಿಸಿಕೊಡಬೇಕೆಂದು ಕೇಳುತ್ತಲೇ ಇದ್ದರು. ಅವರು ಹೀಗೆ ಕೇಳಿದಾಗಲೆಲ್ಲ ಸ್ವಾಮೀಜಿ, 'ಕಾಲಕೂಡಿ ಬಂದಾಗ ತಿಳಿಸಿಕೊಡುತ್ತೇನೆ' ಎಂದು ಹೇಳುತ್ತಲೇ ಬಂದರು. ಒಮ್ಮೆ ಸ್ವಾಮಿ ವಿವೇಕಾನಂದರು ತಮ್ಮ ಈ ಶಿಷ್ಯರನ್ನು ಕರೆದುಕೊಂಡು ಒಂದು ಆಟದ ಬಯಲಿಗೆ ಹೋದರು. ಅಲ್ಲಿ ಅನೇಕ ಕ್ರೀಡಾಪಟುಗಳು ತಮ್ಮ ತಂಡಕ್ಕೆ ಗೆಲುವು ತಂದು ಕೊಡಲು ತುಂಬಾ ಪ್ರಯತ್ನಿಸುತ್ತಿದ್ದರು. ಸ್ವಾಭಾವಿಕವಾಗಿಯೆ ಒಂದು ತಂಡಕ್ಕೆ ಗೆಲವು ದೊರೆಯಲಿಲ್ಲ. ಆದರೂ ಆ ತಂಡದ ಜನರ ಮುಖದ ಮೇಲೆ ನಿರಾಶೆಯ ಛಾಯೆಯೂ ಕಂಡುಬರಲಿಲ್ಲ. ಸ್ವಾಮಿಗಳು ತಮ್ಮ ಶಿಷ್ಯರಿಗೆಲ್ಲ ಈ ಕ್ರೀಡಾಪಟುಗಳನ್ನು ತೋರಿಸುತ್ತ, 'ಮಕ್ಕಳೇ ನೋಡಿರಿಲ್ಲಿ, ಇದೇ ಗೀತೆಯ 'ನಿಷ್ಕಾಮ-ಕರ್ಮಯೋಗ;' ಇದೇ ಗೀತೆಯ ಗುಟ್ಟು. ನಾವೂ ಇದೇ ಬಗೆಯ ಕ್ರೀಡಾ ಮನೋಭಾವನೆಯಿಂದ ಬಾಳಬೇಕು. ಜೀವನದಲ್ಲಿ ನಿರ್ಲಿಪ್ತರಾಗಿರಬೇಕು.'

ಸಂಗ್ರಹ: **ವೆಂಕಟೇಶ ಗಂಗಾವತಿ**

• ಹೇಮಚಂದ್ರ ಅಕ್ಕಿ

**ಆನೆಗಳನ್ನು ಅವುಗಳ ನಿಜ ನೆಲೆಯಲ್ಲೇ ನೋಡುವುದು ಒಂದು ಅಪೂರ್ವ ಅನುಭವ**

# ಸಕ್ರೆ ಬಯಲು: ಆನೆಗಳ ರೆಸಿಡೆನ್ಸಿಯಲ್ ಸ್ಕೂಲು....

**ಕಾ**ಡಾನೆಗಳನ್ನು ಹಿಡಿದು ಪಳಗಿಸುವ ಆನೆಗಳ "ರೆಸಿಡೆನ್ಸಿಯಲ್ ಟ್ರೇನಿಂಗ್ ಸ್ಕೂಲ್" ಅಥವಾ "ಆನೆಗಳ ಊರು" ಅನ್ನಬಹುದಾದ ಸಕ್ರೆ ಬಯಲಿಗೆ ಹೋಗಲು ನಿಮಗೆ ಏನೇನೂ ಕಷ್ಟವಿಲ್ಲ. ಶಿವಮೊಗ್ಗದಿಂದ ಕೇವಲ ೧೪ ಕಿ.ಮೀ. ದೂರವಿರುವ ಗಾಜನೂರು ದಾಟಿ ಬಸ್ಸಿನಲ್ಲೇ ತುಂಗಾ ಡ್ಯಾಮ ನೋಡುತ್ತಾ ಸುತ್ತ ಕಾಡು ಇರುವ ಗುಡ್ಡದ ಕೆಳಗೆ ಇಳಿದರೆ "ಸಕ್ರೆ ಬಯಲು- ಎಲಿಫೆಂಟ್ ಕ್ಯಾಂಪ್" ಎಂಬ ಬೋರ್ಡು ಕಾಣುತ್ತದೆ. ಸುಮಾರು ಒಂದೆರಡು ಸಾವಿರ ಜನಸಂಖ್ಯೆಯ, ಶೇಕಡಾ ೮೦ ರಷ್ಟು ಮುಸ್ಲಿಂ ಮಾವುತರೇ ಇರುವ, ಬೋರ್ಡಿಲ್ಲದ ಒಂದೇ ಹನೀಫನ ತಿಳಿ ಚಹಾದ ಅಂಗಡಿಯಿರುವ, ಸಣ್ಣ ಹಳ್ಳಿಯನ್ನು



ತಲುಪುತ್ತೀರಿ. ಶಿವಮೊಗ್ಗದಿಂದ ತೀರ್ಥ ಹಳ್ಳಿಯ ಕಡೆಗೆ ಹೋಗುವ ಯಾವುದೇ ಖಾಸಗಿ ಬಸ್ಸಿನಲ್ಲಿ ಕುಳಿತರೂ ನಿಮ್ಮನ್ನು ಕೇವಲ ಎರಡು ರೂಪಾಯಿ ಯಲ್ಲಿ ತಂದು ಇಲ್ಲಿ ಇಳಿಸುತ್ತಾರೆ. ಇಳಿದ ತಕ್ಷಣ



ಸುತ್ತಲೂ ಸಣ್ಣ ಗುಡ್ಡಗಳ ತುಂಬಾ ಗಿಡಗಳು, ಬಿದಿರಿನ ಕಾಡು ನೋಡಿದರೆ ನಿಮಗೆ ಎಲ್ಲಿಲ್ಲದ ಸಂತೋಷ. ಫಾರೆಸ್ಟ್ ರೇಂಜರೊ, ಕಾಂಟ್ರಾಕ್ಟರ್ ನಜೀರ್ ಸಾಹೇಬರೊ, ಮಾವುತರೊ ಹೊಟೇಲ್ ಹತ್ತಿರ ಸಿಗುತ್ತಾರೆ. ನೀವು ಸ್ವಲ್ಪ ವಿಚಾರಿಸಿದರೆ ಸಾಕು, ಆನೆಗಳ ಬಗ್ಗೆ ಕಾಡುಗಳ- ಕಾಡು ಪ್ರಾಣಿಗಳ ನಾಶದ ಬಗ್ಗೆ, ದೇಶ-ಧರ್ಮ-ಲೀಡರು ಗಳ ಬಗ್ಗೆ ಮಾತು ಶುರುವೇ. ಭಾರತದ ಎಲ್ಲ ಕಡೆ ಧರ್ಮಯುದ್ಧಗಳು ನಡೆಯುತ್ತಿರುವಾಗ ಇಲ್ಲಿ ಹಿಂದು ಯಾರು, ಮುಸ್ಲಿಮ್ ಯಾರು ಎಂದು ಗೊತ್ತೇ ಆಗುವುದಿಲ್ಲ. ನಜೀರ್ ಸಾಹೇಬರೇ ಕುಡಿಸಿದ ಎರಡನೇ ಚಹವನ್ನು ಹೀರಿ ನಾನು ಸಮೀಪದ ತುಂಗಾ ಡ್ಯಾಮಿನ ಹಿಂದೆ ನಿಂತ ಜಲಾಶಯದ ಕಡೆ ಹೊರಟೆ. ಮಧ್ಯಾಹ್ನವಾಗಿ ದ್ದರೂ ಅಲ್ಲಿ ಕೆಲವು ಪಕ್ಷಿಗಳಿದ್ದವು. ಸಾಕಷ್ಟು ಪಕ್ಷಿಗಳನ್ನು ನೋಡಬೇಕೆಂದರೆ ಮುಂಜಾನೆಯ ಹೊತ್ತಿನಲ್ಲಿ ಬರಬೇಕೆಂದುಕೊಂಡೆ. ದಂಡೆಯಲ್ಲಿ ಕೆಲವು ಮಹಿಳೆಯರು ಬಟ್ಟೆ ಒಗೆಯುತ್ತಿದ್ದರೆ, ಕೆಲವು ಮಕ್ಕಳು ಈಜುತ್ತಾ ಆಟವಾಡುತ್ತಿದ್ದರು.

ಜಲಾಶಯದ ಸುತ್ತಲೆಲ್ಲ ಕಾಡು. ಹಸಿರು ಗಿಡ, ಬಿದಿರು, ಗುಡ್ಡಗಳ ಮೇಲೆ ಬಣ್ಣ ಬಣ್ಣದ ಎಲೆಗ ಳಿರುವ ಗಿಡಗಳು ಮುತ್ತುಗ ಮರ, ಗಿಡದಲ್ಲಿ ತುಂಬಿ ತುಳುಕುತ್ತಿರುವ ಕಡು ಕೆಂಪು ಗುಲಾಬಿ ಬಣ್ಣದ ಹೂಗಳನ್ನು ನೋಡಿದಾಗ ನೀವು ನಿಮ್ಮ ಜಾತಿ-ಮತ, ದುಃಖಗಳನ್ನು-ನೆನಪುಗಳನ್ನು, ಸ್ವಾರ್ಥ-ಸಿಟ್ಟುಗಳನ್ನು ಮರೆತೇ ಬಿಡುತ್ತೀರಿ. ಮನ ಸ್ಸಿಗೆ ಒಂದು ತರಹದ ಶಾಂತಿ, ಸಂತೋಷ ಸಿಗುತ್ತದೆ. ಜಲಾಶಯದಲ್ಲಿ ಸತ್ತು ನಿಂತ ಹಳೆಯ ಗಿಡಗಳು ನೈಸರ್ಗಿಕ ಶಿಲ್ಪಗಳ ಹಾಗೆ ಕಂಡವು. ಅವುಗಳ ಮೇಲೆ ಬೆಳ್ಳಕ್ಕಿ, ಬ್ರಾಹ್ಮಣ ಗರುಡ, ನೀರು

ಕಾಗೆ, ನಾರಾಯಣ ಪಕ್ಷಿಗಳ ಸಮೂಹವನ್ನು ದುರ್ಬೀನಿನಲ್ಲಿ ನೋಡಿದಾಗ, "ನಾನು" ಅಲ್ಲಿರಲೇ ಇಲ್ಲ.

ಆದರೆ ರಸ್ತೆಯಲ್ಲಿ ಬಸ್ಸು ಹೋಗುವ ಸಪ್ಪಳ, ಕರ್ಕಶವಾಗಿ ಹಾರ್ನ್ ಮಾಡಿದ ಧ್ವನಿಯಿಂದ ನಾನು ಎಚ್ಚೆತ್ತು ರಸ್ತೆಯ ಕಡೆ ಹೊರಟೆ. ಈ ಜಲಾಶಯದಲ್ಲಿ, ಆನೆಗಳು ನೀರು ಕುಡಿಯುವುದನ್ನೂ ಸ್ನಾನ ಮಾಡುವುದನ್ನೂ ನಾನು ಮೊದಲು ಸಾಕಷ್ಟು ಸಲ ನೋಡಿದ್ದೇನೆ. ಇವತ್ತು ಒಂದೂ ಆನೆ ಇರದ್ದರಿಂದ ಬೇಸರವಾಗಿ ಮುಂದೆ ಹೊರಟೆ. ರಸ್ತೆಯ ಮೇಲೆ ಕೆಲವು ವಿದ್ಯಾರ್ಥಿಗಳಂತೆ ಕಾಣುವ ಯುವಕರನ್ನು ನೋಡಿದೆ. ಅವರು ನನ್ನ ಸಂಗಡ ಶುದ್ಧ ಕನ್ನಡದಲ್ಲಿಯೂ ತಮ್ಮ ತಮ್ಮೊಳಗೆ ಉರ್ದುವಿನಲ್ಲಿಯೂ ಮಾತನಾಡುವುದನ್ನು ಕೇಳಿದೆ. ನಾನು ಅವರೊಂದಿಗೆ ಉರ್ದುವಿನಲ್ಲೇ ಮಾತನಾಡಿ ನನ್ನ ಪರಿಚಯ ಮಾಡಿಕೊಂಡಾಗ, ಅವರು "ಬಾಳೆಹೊನ್ನೂರಿನಿಂದ ಒಂದು ಸಲಗವನ್ನು ಹಿಡಿದು ತಂದಿದ್ದಾರೆ. ನೋಡ ಬನ್ನಿ" ಎಂದರು. ಪ್ರೀತಿಯಿಂದ ಕರೆದರಲ್ಲ! ಪ್ರೀತಿಗೆಲ್ಲಿಯ ಜಾತಿ?

ರಸ್ತೆಯ ಮಗ್ಗುಲಲ್ಲೆ ಹಿಂದೂ ಪುರಾಣಗಳಲ್ಲಿನ ಸ್ತ್ರೀ ನಾಮಧಾರಿಗಳಾದ ೩೭ ಆನೆಗಳ ಪಟ್ಟಿ ಇರುವ ಫಲಕವನ್ನು ನೋಡುತ್ತಾ ಮುಂದೆ ಹೋದೆ. ಪ್ರಾಣಿಗಳನ್ನು ಕೂಡಾ ಮನುಷ್ಯ ಹಿಂದೂ ಮುಸ್ಲಿಂ ಎಂದು ವಿಂಗಡಿಸಿ ಬಿಟ್ಟಿದ್ದಾನೆ! ಸ್ವಲ್ಪ ಮುಂದೆ ಖೆಡ್ಡಾ ರೀತಿಯ ಮರದ ದಿಮ್ಮಿಗಳ ಸಣ್ಣ ಜೈಲಿನಲ್ಲಿ ಎಂಟೂವರೆ ಅಡಿ ಎತ್ತರದ ಸುಮಾರು ೩೫ ವರ್ಷದ ದಷ್ಟಪುಷ್ಟ, ಮುಖದ ಮೇಲೆ ಗುಲಾಬಿ ಚುಕ್ಕೆಗಳಿರುವ, ಕಾಲಿಗೆ ಅರಿಶಿನ ಹಚ್ಚಿದ ಆನೆಯನ್ನು ನೋಡಿದೆ. ಕುಳ್ಳನೊಬ್ಬ ದೊಡ್ಡ ಪಾತ್ರೆಯಲ್ಲಿ ನೀರನ್ನು ಕಾಯಿಸುತ್ತಿದ್ದ. ಸುಮಾರು ಆರು ಅಡಿ ಎತ್ತರದ, ಅಮರೀಶ್‌ಪುರಿಯಂಥ ಮುಖದ, ಟಿವಿ ಮಹಾಭಾರತದ 'ಭೀಷ್ಮ' ಮುಕೇಶ್ ಖನ್ನನ ದೇಹಯಷ್ಟಿಯ, ಖಾಕಿಧಾರಿ ಮನುಷ್ಯ ಆನೆಗೆ ಆಲದ ಎಲೆ-ಟೊಂಗೆಗಳನ್ನು ತಿನ್ನಲು ಕೊಡುತ್ತಿದ್ದ. ಅವನೇ ನನ್ನನ್ನು ನೋಡಿ ಮಾತನಾಡಿಸಿದ. ತನ್ನ ಹೆಸರು "ಸಯ್ಯದ್" ಎಂತಲೂ, ತಾನೊಬ್ಬ ಮಾವುತ ಎಂದೂ ಪರಿಚಯಿಸಿಕೊಂಡ. ಮೈಸೂರಿನ ದಸರಾ ಮೆರವಣಿಗೆಯಲ್ಲಿ ಚಿನ್ನದ ಅಂಬಾರಿ ಹೊತ್ತುಕೊಂಡು ಹೋಗುವ ೧೦ ಅಡಿ ಎತ್ತರದ "ದ್ರೋಣ" ಆನೆಯ ಸಂಗಡ ೧೭ ವರ್ಷ ಮಾವುತನಾಗಿ ಕೆಲಸ ಮಾಡಿದ್ದೇನೆಂದೂ ಹೇಳಿದ. "ಈ 'ದ್ರೋಣ' ನನ್ನ ಮನೆಯವರು, ಮಕ್ಕಳನ್ನು ಬಿಟ್ಟು ಬೇರೆ ಯಾರಾದರೂ ಸಮೀಪ ಬಂದರೆ ಸೊಂಡಿಲಿನಿಂದ ಹೊಡೆಯಲು ಹೋಗುತ್ತಿತ್ತು" ಎಂದೆನ್ನುತ್ತ ನನ್ನನ್ನು ಒಂದು ಸ್ಟೂಲಿನ ಮೇಲೆ ಒಂದು ಕಂಬಳಿ ಹಾಕಿ ಕೂಡಿಸಿದ. ನನಗೆ ಆನೆಗಳ ಬಗ್ಗೆ ಅಲ್ಪ ಸ್ವಲ್ಪ ಗೊತ್ತಿದೆ ಎಂದು ತಿಳಿದ ಸಯ್ಯದ್ ಸಂತೋಷಪಟ್ಟ. ಆದರೂ ನನ್ನ ಕೆಲವು ಸಂಶಯಗಳನ್ನು ಅವನಿಂದ ದೂರ ಮಾಡಿಕೊಳ್ಳಬೇಕೆನಿಸಿ, "ಮಖನಾ" ಎಂದರೇನೆಂದು ಕೇಳಿದೆ. "ಕೋರೆಯಿಲ್ಲದೆ ಕೆಲವು ಗಂಡು ಆನೆಗಳು ಹುಟ್ಟುತ್ತವೆ. ಅವಕ್ಕೆ 'ಮಖನಾ' ಎಂದು ಹೆಸರು. ಭಾರತದ ಗಂಡು ಆನೆಗೆ ಕೋರೆ ಇದೆ. ಆದರೆ ಹೆಣ್ಣು ಆನೆಗೆ ಕೋರೆಗಳಿರುವುದಿಲ್ಲ," ಎಂದ.

"ಆದರೆ ಆಫ್ರಿಕಾದ ಗಂಡು-ಹೆಣ್ಣು ಎರಡೂ ಆನೆಗೆ ಕೋರೆಗಳು ಇರುತ್ತವೆ," ಎಂದ ನಾನು 'ಮಸ್ಥ' (Musth)ದ ಬಗ್ಗೆ ಕೇಳಿದಾಗ ಅವನು, "ಅದು ಕಾಮದ ಗ್ರಂಥಿ. ಆನೆಯ ಕಣ್ಣಿನ ಹತ್ತಿರ ಒಂದು ಸಣ್ಣ ರಂಧ್ರದಿಂದ ಜನವರಿಯಿಂದ ಮಾರ್ಚ್‌ವರೆಗೆ ಒಂದು ಜಿಗುಟು ಅಂಟಿನಂಥ ರಸ* ಸ್ರವಿಸುತ್ತದೆ. ಆ ಸಮಯದಲ್ಲೆಲ್ಲ ಅದಕ್ಕೆ ಕಾಮದ ಆಶೆಯಿರುತ್ತದೆ. ಕಾಮದ ತೃಪ್ತಿಯಾಗದಿದ್ದರೆ ಆನೆಗೆ ಸಿಟ್ಟು ಬರುತ್ತದೆ. ಕೆಲವು ಸಲ ಕಾಡಿನಲ್ಲಿ ಆನೆಗಳ ಹಿಂಡಿನ ಮುಖ್ಯಸ್ಥನಾಗಲು ದೊಡ್ಡ, ಸಣ್ಣ ಗಂಡು ಆನೆಗಳ ಮಲ್ಲಯುದ್ಧ ನಡೆದು ಸೋತ ಆನೆಯನ್ನು ಉಳಿದವು ಗಡೀಪಾರು ಮಾಡಿಬಿಡುತ್ತವೆ. ಹೀಗೆ ಹೊರಹಾಕಲ್ಪಟ್ಟ ಆನೆ ಒಂಟಿತನವನ್ನು ಸಹಿಸದೇ ಹಿಂಸಾಚಾರಕ್ಕಿಳಿ

*'ಕುಂಭೀರಸ'ವೆಂದು ಇದನ್ನು ಕಾವ್ಯಗಳಲ್ಲಿ ಕರೆದಿದ್ದಾರೆ.

ಯುತ್ತದೆ. ಶಿಕಾರಿಗಳು ಅಥವಾ ಜನರು ಅದಕ್ಕೆ ಗಾಯ ಮಾಡಿದರಂತೂ ಅದು ಇನ್ನೂ ಹೆಚ್ಚು ಕ್ರೂರತನದಿಂದ ವರ್ತಿಸಲಾರಂಭಿಸುತ್ತದೆ. ಈಗ ಹಿಡಿದು ಹಾಕಿರುವ 'ಸಲಗ' ಬಾಳೆಹೊನ್ನೂರು ಸಮೀಪ ಸಾಕಷ್ಟು ಜನರನ್ನು ಕೊಂದು ಗಲಾಟೆ ಮಾಡುತ್ತಿತ್ತು. ಅರಣ್ಯ ಇಲಾಖೆಯವರು ಅದನ್ನು 'ಮತ್ತು ಬರುವ' ಬಾಣದ ಇಂಜೆಕ್ಷನ್ ಹೊಡೆದು ಹಿಡಿದು ತಂದಿದ್ದಾರೆ. ಅದನ್ನು ಪಳಗಿಸುವ ಜವಾಬ್ದಾರಿ ನನಗೆ ಕೊಟ್ಟಿದ್ದಾರೆ. ಈಗ ಒಂದು ತಿಂಗಳಾಯಿತು. ಇನ್ನೂ ಅದಕ್ಕೆ ಹಳೆಯ ನೆನಪು, ಸಿಟ್ಟು ಇದೆ. ಪೂರ್ತಿ ಪಳಗಬೇಕಾದರೆ ಒಂದು ತಿಂಗಳಾದರೂ ಬೇಕು. ಮರಿ ಆನೆ, ಹೆಣ್ಣು ಆನೆಗಳನ್ನು ಪಳಗಿಸುವುದು ಸುಲಭ. ಆದರೆ ಕಾಡಾನೆಗಳನ್ನು ಪಳಗಿಸುವುದು ಸ್ವಲ್ಪ ಕಷ್ಟ. ಒಂದು ತಿಂಗಳಾದ ಮೇಲೆ ಕಾಲಿಗೆ ಕಬ್ಬಿಣದ ಸರಪಳಿ ಕಟ್ಟಿ ಅದರ ತಲೆಯ ಮೇಲೆ ಕುಳಿತು ಕಾಲಿನ ಹೆಬ್ಬೆರಳಿನಿಂದ ಕೆಲವು ಸಂಜ್ಞೆಗಳು ಹಾಗೂ ಸುಮಾರು ೨೫ ಶಬ್ದಗಳಿರುವ 'ಆನೆ ಭಾಷೆ'ಯನ್ನು ಕಲಿಸುತ್ತೇವೆ. ಪಳಗಿದ ಮೇಲೆ ಕಾಡಿನಲ್ಲಿ ಮರದ ದಿಮ್ಮಿಗಳನ್ನು ಎತ್ತಿ ಲಾರಿಗೆ ತುಂಬುವುದು, ಕಾಡಿನಿಂದ ತಿನ್ನಲು ಎಲೆ ಹುಲ್ಲು ತರುವುದು, ಸ್ನಾನ ಮಾಡಿಸುವುದು, ಸಿಟಿಯ ಗದ್ದಲಕ್ಕೆ ಗಾಬರಿಯಾಗದ ಹಾಗೆ ತರಬೇತುಗೊಳಿಸುವುದು, ಮೆರವಣಿಗೆಯ ಅಭ್ಯಾಸ ಮುಂತಾದವನ್ನು ಕಲಿಸುತ್ತೇವೆ. ಆನೆಯ ಮನಸ್ಸು ಮನುಷ್ಯರದಕ್ಕಿಂತ ಸೂಕ್ಷ್ಮ. ಅವಕ್ಕೆ ಪ್ರೀತಿ ತೋರಿಸಿ, ಸಿಹಿಯಾದ ಬೆಲ್ಲದ ತಿಂಡಿ, ಭತ್ತ, ಕಬ್ಬು ಕೊಟ್ಟು, ನಾವು ಆನೆಯ 'ಹಿತ ಚಿಂತಕ' ಅನ್ನಿಸುವ ಹಾಗೆ, ಅದಕ್ಕೆ ನಂಬಿಕೆ ಬರುವ ಹಾಗೆ ಮಾಡಿದಾಗ ಮಾತ್ರ ಒಳ್ಳೆಯ ಆನೆಯಾಗಿ ಪಳಗುತ್ತವೆ. ಮಾವುತನೇನಾದರೂ ಆಹಾರ ಸರಿಯಾಗಿ ಕೊಡದೇ ಪ್ರೀತಿಯಿಂದ ಸ್ನಾನ ಮಾಡಿಸದೇ ಬೆಲ್ಲದ ತಿಂಡಿ, ಭತ್ತ ಕೊಡದೇ ಮೋಸ ಮಾಡುತ್ತಿದ್ದಾನೆ ಎಂದು ಗೊತ್ತಾದರೆ ಅದು ಆತನನ್ನೇ ಕೊಂದು ಹಾಕಿದ ನಿದರ್ಶನಗಳುಂಟು," ಎಂದೆಲ್ಲ ವಿವರಿಸಿದ.

ನಾನು ಬಾಳೆಹೊನ್ನೂರಿನ ಆ ಆನೆಯ ಕಣ್ಣನ್ನು ನೋಡಿದಾಗ ಗ್ಯಾರಂಟಿಯಾಗಿ ಕಣ್ಣೀರು ಹಾಕಿದ ಗುರ್ತು ಹಾಗೂ ಪಿಚ್ಚುಗಳಿದ್ದವು. ಒಂದು ರೀತಿಯ



ಸರಿಸುಮಾರು ನಾಲ್ಕು ದಶಕಗಳಿಂದಲೂ ಪಕ್ಷಿ ವೀಕ್ಷಣೆ, ಅವುಗಳ ಜೀವನ ಅಧ್ಯಯನ ಮತ್ತು ಪ್ರಾಣಿಗಳ ಸ್ವಭಾವದ ಅರಿವನ್ನು ಉಂಟು ಮಾಡಿಕೊಳ್ಳುವಲ್ಲಿ ನಿರತರಾಗಿರುವ ಉತ್ಸಾಹಿ. ಅದು ಅವರಿಗೊಂದು ಹವ್ಯಾಸವಾಗಿರುವಂತೆಯೆ ಅದರಿಂದ ತಮಗೆ ಸಂತೋಷ, ಮನಶ್ಶಾಂತಿ ದೊರೆಯುವ ಹಾಗೆಯೇ ಜ್ಞಾನ ಪ್ರಾಪ್ತಿಯೂ ಆಗುತ್ತದೆ ಎನ್ನುತ್ತಾರೆ ಮೈಸೂರು ನಿವಾಸಿ ಹೇಮಚಂದ್ರ ಅಕ್ಕಿ (ಜನನ ೧೯೩೮). ಇಲ್ಲಿ ಅವರು ಆನೆಗಳ ಕುರಿತು ಮಾತನಾಡಿದ್ದಾರೆ.

ದುಃಖ-ಅರೆಗಣ್ಣನ್ನು ನೋಡಿ "ಯಾಕೆ ಹೀಗೆ?" ಎಂದು ಸಯ್ಯದನಿಗೆ ಕೇಳಿದೆ.

"ಅದಕ್ಕೆ ತನ್ನ ಜನ್ಮ ಸ್ಥಳ, ತನ್ನ ಮನೆಯಂತಿರುವ ಕಾಡು ನೆನಪಾಗುವುದು ಸಹಜ. ಅದನ್ನೆಲ್ಲಾ ಮರೆಸಲು ನಾವು ಪ್ರಯತ್ನಿಸುತ್ತೇವೆ," ಎಂಬ ಸಯ್ಯದನ ಮಾತು ನನ್ನಲ್ಲಿ ನಾವೂ ಒಂಟಿ ಸಲಗದ ಹಾಗೇ: ಹೊಟ್ಟೆ ಪಾಡಿಗಾಗಿ ಸ್ವಂತ ಊರು, ಮನೆ ಬಿಟ್ಟು ಸಿಟಿ ಸೇರಿ ದುಃಖದಲ್ಲಿದ್ದೇವೆಂಬ ಅನಿಸಿಕೆಯುಂಟು ಮಾಡಿತು. ನನಗಾಗಿ ತಂದ ಎರಡು ಅಂಟಿನ ಉಂಡೆಗಳನ್ನು ಭತ್ತದ ಹುಲ್ಲಿನಲ್ಲಿ ಸುತ್ತಿ ಆನೆಯ ಸೊಂಡಿಲಿನಲ್ಲಿ ಅಂಜುತ್ತಾ ಇಟ್ಟೆ. ಅದು ಉಂಡೆ ತಿನ್ನುತ್ತಿರುವಾಗ ಸಯ್ಯದ್ ಅದರ ಮುಖದ ಮೇಲೆ ಕೈಯಾಡಿಸುತ್ತಾ ಏನೋ ಗುಣು

ಗುಣು ಮಾತನಾಡಿದ. ಆನೆ ಜೋರಾಗಿಯೇ 'ಹಾಂ ಹುಂ' ಅನ್ನುವ ರೀತಿಯಲ್ಲಿ ಕೂಗು ಹಾಕಿತು.

"ಆನೆಗಳಿಗೆ ಸರಾಯಿ ಕುಡಿಸುತ್ತಾರಂತೆ ನಿಜವೆ?" ಎಂದು ಕೇಳಿದೆ.

"ಹೌದು. ಮರದ ದಿಮ್ಮಿ ಎತ್ತುವುದೇ ಮೊದಲಾದ ಭಾರದ ಕೆಲಸ ಮಾಡಿದಾಗ ಕೆಲವೊಮ್ಮೆ ಅವಕ್ಕೆ ರಮ್‌ನಂತಹ ಸರಾಯಿ ಕುಡಿಸಲಾಗುತ್ತದೆ. ಚೆನ್ನಾಗಿ ನಿದ್ರೆ ಮಾಡಿ, ಮೈ ಕೈ ನೋವು ಕಡಿಮೆ ಮಾಡಿಕೊಂಡು ಮರುದಿನ ಮುಂಜಾನೆ ಮತ್ತೆ ಅವು ಹುರುಪಿನಿಂದ ಕೆಲಸ ಮಾಡುತ್ತವೆ," ಎಂದ ಸ್ಯಯ್ಯದ್.

ಕೆಲವು ಸಲ ಇಂಥ ಆನೆಗಳು ಬೇಸರದಿಂದ ಕಾಡಿಗೆ ಓಡಿ ಹೋದರೂ ಅವಕ್ಕೆ ಮನುಷ್ಯ ಕೊಡುವ ಅಕ್ಕಿ-ಬೆಲ್ಲಗಳ ನೆನಪಾಗಿ ಹಿಂತಿರುಗಿ ಬರುತ್ತವಂತೆ. ಆಫ್ರಿಕಾದ ಆನೆಗಳಿಗಿಂತ ಭಾರತದ ಆನೆಗಳು ನೋಡಲು ಸುಂದರ ಹಾಗೂ ಬೇಗ ಕಲಿತು ನೆನಪಿಟ್ಟು ಕೆಲಸ ಮಾಡುವಂಥವು. ಅದರಲ್ಲೂ ಕರ್ನಾಟಕದ ಆನೆಗಳು ತುಂಬ ಅಂದವೆಂದೂ ಬಿಹಾರದ ಸೋನೇಪುರ "ಹಾಥಿ ಮೇಲಾ" (ಜಾತ್ರೆ)ದಲ್ಲಿ ಎಲ್ಲಕ್ಕಿಂತ ಹೆಚ್ಚಿನ ಬೆಲೆಗೆ ಅಂದರೆ ಸುಮಾರು ಒಂದೂವರೆ ಎರಡು ಲಕ್ಷ ರೂಪಾಯಿಗಳವರೆಗೆ- ಮಾರಾಟವಾಗುತ್ತವೆ ಎಂದೂ ಹೇಳಿದ ಸಯ್ಯದ್.

"ಆಫ್ರಿಕಾದ ಆನೆಗಳು ತಮ್ಮ ಪ್ರಿಯತಮ ಅಥವಾ ಪ್ರೇಯಸಿಗೆ ೫-೧೦ ಕಿಲೋಮೀಟರು ದೂರದಿಂದಲೇ ಗೊತ್ತಾಗುವಂಥ ಒಂದು

ತನ್ನಷ್ಟಕ್ಕೆ ತಾನು
ಜಲಕ್ರೀಡೆಯಾಡುವುದರಲ್ಲೇ
ಇದೆ ಸಂತಸ
ಚಿತ್ರ:
ಅನಿಲ ಎಚ್.ಟಿ.



ರೀತಿಯ ಸೂಕ್ಷ್ಮ ಶಬ್ದ ಹೊರಡಿಸಿ ಯಾರಿಗೂ ಕಾಣದ ಹಾಗೆ ರತಿಕ್ರೀಡೆ ನಡೆಸುತ್ತವೆಂಬ ಅಂಶವನ್ನು ವಿಜ್ಞಾನಿಗಳು ಹೊರಗೆಡವಿದ್ದಾರೆ. ಇದು ನಿಜವೇ?" ಎಂದು ಕೇಳಿದೆ.

"ಸೂಕ್ಷ್ಮ ಶಬ್ದ ಇದ್ದರೂ ಇರಬಹುದು. ಏಕೆಂದರೆ, ಸಾಕಿದ ಆನೆಗಳು ತಾವಾಗಿಯೇ ಕಾಡಿಗೆ ತಮ್ಮ ಪ್ರೇಯಸಿ ಅಥವಾ ಪ್ರಿಯತಮನನ್ನು ಹುಡುಕಿಕೊಂಡು ಹೋಗಿ ಸಂಗಸುಖ ಅನುಭವಿಸಿ ತಿರುಗಿ ನಮ್ಮ ಕ್ಯಾಂಪಿಗೇ ಬಂದು ಮರಿಹಾಕಿದ್ದು ನನ್ನ ಗಮನಕ್ಕೆ ಬಂದಿದೆ," ಎಂದ.

"ಬರ್ಮಾದಲ್ಲಿ ಒಂದು ಬಳೆಯ ಆಕಾರಗಳಿರುವ ಕೋರೆಯುಳ್ಳ ಆನೆಯ ಮಾವುತ ನಿವೃತ್ತನಾದಾಗ ಆ ಅಗಲಿಕೆ ಸಹಿಸದೆ ಕೆಲವೇ ದಿನಗಳಲ್ಲಿ ಆ ಆನೆ ಸತ್ತಿತಂತೆ. ಇದನ್ನು ತಿಳಿದ ಆ ಮಾವುತನು ಆತ್ಮಹತ್ಯೆ ಮಾಡಿಕೊಂಡ ವಿಷಯವನ್ನು ಎರಡನೇ ಮಹಾಯುದ್ಧ ಸಮಯದಲ್ಲಿ ಒಬ್ಬ ಬ್ರಿಟಿಶ್ ಆಫೀಸರ್ ಬರೆದಿದ್ದ ವಿಷಯ ಓದಿದ್ದೇನೆ," ಎಂದೆ.

"ಮಾವುತರು ಭಾವುಕರಾಗಿದ್ದು ಆನೆಯ ಸಂಗಡ ಅನ್ಯೋನ್ಯ ಸಂಬಂಧ ಹೊಂದಿರುವ ಸಂದರ್ಭಗಳು ಬಹಳ. ಆ ರೀತಿ ಆಗಲು ಸಾಧ್ಯವಿದೆ," ಎಂದು ಹೇಳಿದ ಸಯ್ಯದ್ ತಾನು ಕೂಡ ಕೆಲವು ಸಲ ಹೆಂಡತಿ ಮಕ್ಕಳಿಗಿಂತ ಆನೆಯನ್ನು ಹಚ್ಚಿಕೊಂಡು ಅದು ತನ್ನ ಮಾತು ಕೇಳುವಂತೆ ಮಾಡಿದ್ದೇನೆ ಎಂದು ಹೇಳಿದ.

"ಸಾವಿರಾರು ವರ್ಷಗಳಿಂದ ಬೆಳೆದು ಬಂದ 'ಗಜ ಶಾಸ್ತ್ರ'ವನ್ನು ಹಾಗೂ ಕೆಲವು ಮಹಾರಾಜರುಗಳು ಬರೆಸಿಟ್ಟ ಗ್ರಂಥಗಳಿಂದ ಆನೆಯನ್ನು

**ತಿಕ್ಕಿ ತಿಕ್ಕಿ ಥಳಥಳ ಗೊಳಿಸುವುದೆಂದರೆ ಮಾವುತಗೂ ಸಂತಸ**
**ಚಿತ್ರ: ಅನಿಲ್ ಎಚ್.ಟಿ.**





ಪಳಗಿಸುವುದು, ಸಾಕುವುದು, ಅವುಗಳ ಔಷಧೋಪಚಾರ ಮುಂತಾದವುಗಳನ್ನು ನಮ್ಮ ಮನೆತನ ತಲೆಮಾರುಗಳಿಂದ ರೂಢಿಸಿಕೊಂಡು ಬಂದಿದೆ. ಆದರೇನು ಮಾಡುವುದು ಸಾರ್? ನನ್ನ ಇಬ್ಬರೂ ಗಂಡು ಮಕ್ಕಳು ಮಾವುತರಾಗದೇ ಮೆಕ್ಯಾನಿಕ್‌ಗಳಾಗಿ ಸಿಟಿ ಸೇರಿದ್ದಾರೆ," ಎಂದು ವಿಷಾದಿಸಿದ ಸಯ್ಯದ್ ತಮ್ಮ ಹಿರಿಯರಿಗೆಲ್ಲ ಸಿಕ್ಕುತ್ತಿದ್ದ ಸಂಬಳ ಕಡಿಮೆಯಿದ್ದರೂ ಸುಖವಾಗಿರುತ್ತಿದ್ದುದನ್ನೂ ಈಗ ಸಂಬಳ ಹೆಚ್ಚಿದ್ದರೂ ಸಂತೋಷವಿಲ್ಲದ್ದನ್ನೂ ತೋಡಿಕೊಂಡ.

"ಆನೆಗಳೇ ಈಗ ನಮ್ಮ ಮಕ್ಕಳೂಂತ ಭಾವಿಸಿದ್ದೀವಿ ಸಾರ್," ಎಂಬ ಆತನ ಮಾತನ್ನು ನೆನಪಿಸಿಕೊಳ್ಳುತ್ತ ಪುಟ್ಟದೊಂದು ಕಾಣಿಕೆಯನ್ನು ಆತನಿಗಿತ್ತು ವಾಪಸಾದೆ. ●

# ಅಗಸ್ಟ್ ೧೯೯೫ರ ಸಂಚಿಕೆಯಲ್ಲಿ....

**ಪುಸ್ತಕ ವಿಭಾಗ**

## ಲಾಪುಟಾ ದ್ವೀಪದತ್ತ...

ಗಲೀವರನ ಸಾಹಸ ಯಾತ್ರೆಯ ಎರಡನೆಯ ಭಾಗ

ಸಂಗ್ರಹಾನುವಾದ:
ಬಿ.ಎಸ್. ಶೈಲಜಾ

**ಆರೋಗ್ಯರಂಗ**

## ಕಂದಮ್ಮಗಳ ಕಾಡುವ ಕೊರತೆಯ ಕಾಯಿಲೆಗಳು

● ಡಾ. ಕರವೀರಪ್ರಭು ಕ್ಯಾಲಕೊಂಡ

ಚುನಾವಣೆಗಳೆಂದರೆ
ಹೀಗಿರಬೇಕು!

# ಸಾವಿರ ವರ್ಷಗಳ ಹಿಂದೆಯೂ ಚುನಾವಣೆಗಳು ಇದ್ದುವು

• ಎ.ಆರ್. ಮಣಿ

**ಮ**ದ್ರಾಸಿನಿಂದ ನೂರು ಕಿಲೋಮೀಟರಿನಷ್ಟು ದೂರದಲ್ಲಿ ಒಂದು ಹಳೆಗಾಲದ ಹಳ್ಳಿ. ಶತಮಾನಗಳ ಹಿಂದೆ 'ಉತ್ತರಮೇರು ಚತುರ್ವೇದಿ ಮಂಗಲಮ್' ಎಂದು ಕರೆಯಲ್ಪಡುತ್ತಿದ್ದ ಈ ಹಳ್ಳಿಯಿಂದು ಜನರ ಆಡು ಮಾತಿನಲ್ಲಿ 'ಉತ್ತರಮೇರು' ಮಾತ್ರ ಆಗಿ ಉಳಿದಿದೆ.

ಹಳ್ಳಿಯೇನೂ ದೊಡ್ಡದಲ್ಲ. ಇಂದಿನ ಮಾನದಿಂದ ಅದನ್ನು ಕೊಪ್ಪಲು ಎಂದೇ ಹೇಳಬೇಕು. ಪೂರ್ವದಿಂದ ಪಶ್ಚಿಮಕ್ಕೂ ದಕ್ಷಿಣದಿಂದ ಉತ್ತರಕ್ಕೂ ಹಳ್ಳಿಯನ್ನು ಸೀಳಿಡುವ ರಸ್ತೆಗಳು. ಈ ದಾರಿಗಳು ಕೂಡುವಲ್ಲಿ, ಹಳ್ಳಿಯ ಮಧ್ಯೆ ಒಂದು ಶಿಲಾಸ್ತಂಭ. ಅಡಿಯಲ್ಲಿ, ಸ್ತಂಭದ ಸುತ್ತ ಪ್ರಾಚೀನ ತಮಿಳಿನಲ್ಲಿ ಬರೆದ ಶಿಲಾಲೇಖಗಳು. ಅವುಗಳ ಪೈಕಿ ಸಾವಿರ ವರ್ಷಗಳ ಹಿಂದಿನ ಚುನಾವಣಾ ನಿಯಮಗಳನ್ನು ಉಲ್ಲೇಖಿಸುವ ಎರಡು ಶಿಲಾಲೇಖಗಳಿಂದಾಗಿ ಪ್ರಾಚ್ಯ ವಿದ್ಯಾ ವಿಶಾರದರಿಗೆ ಉತ್ತರಮೇರುವೆಂದರೆ ಅಚ್ಚುಮೆಚ್ಚು. ತಮಿಳುನಾಡಿನ ಪುರಾತತ್ವ ಶಾಸ್ತ್ರಜ್ಞರಿಗಂತೂ ಇದು ಯಾತ್ರಾ ಸ್ಥಳ. ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ ಇಡೀ ಹಳ್ಳಿಯನ್ನೆ ರಕ್ಷಿತ ಪ್ರದೇಶವೆಂದು ಘೋಷಿಸಿದೆ.

ಪಲ್ಲವ ದೊರೆಗಳಾದ ಎರಡನೆಯ ಪರಮೇಶ್ವರವರ್ಮನ ಕಾಲದಲ್ಲೋ ಎರಡನೆಯ ನಂದಿವರ್ಮನ ಕಾಲದಲ್ಲೋ (ಕ್ರಿ.ಶ. ೭೨೮ ರಿಂದ ಕ್ರಿ.ಶ. ೭೯೬) ಅಸ್ತಿತ್ವಕ್ಕೆ ಬಂದ ಹಳ್ಳಿಯಿದು. ಈ ಹಳ್ಳಿಯ ಉಸ್ತುವಾರಿಯನ್ನಾಗ ರಾಜಾಜ್ಞೆಯ ಮೇರೆಗೆ ಮೂವತ್ತು ಕುಟುಂಬಗಳು ನೋಡಿಕೊಳ್ಳುತ್ತಿದ್ದವಂತೆ. ಅದಕ್ಕಾಗಿ ಪ್ರತಿವರ್ಷ ವಾರ್ಷಿಕ ಸಮಿತಿ, ಉದ್ಯಾನ ಸಮಿತಿ, ಕೆರೆಯ ಸಮಿತಿ (ಬಹುಶಃ ನೀರಾವರಿ ವ್ಯವಸ್ಥೆಗಾಗಿ ಇರಬಹುದು) ಎಂಬ ಮೂರು ಸಮಿತಿಗಳನ್ನು ಚುನಾಯಿಸಲಾಗುತ್ತಿತ್ತು. ಈಗಿನ ಮಂತ್ರಿಶಾಖೆಗಳ ಹಾಗೆಯೆ ಸಮಿತಿಗಳು ಕಾರ್ಯನಿರ್ವಹಿಸುತ್ತಿದ್ದವು.

ಈ ಎರಡು ಶಿಲಾಲೇಖಗಳ ಪೈಕಿ ಮೊದಲನೆಯ ಶಿಲಾಲೇಖ ರಚಿತವಾದದ್ದು ಕ್ರಿ.ಶ. ೯೧೯ರಲ್ಲಿ. ಅದರಲ್ಲಿ ಸೂಚಿಸಿದ ನಿಯಮಗಳು ನಿಖರವಿಲ್ಲದ್ದರಿಂದ ಮೊದಲನೆಯ ಶಿಲಾಲೇಖವನ್ನು ರಚಿಸಿದ ಎರಡು ವರ್ಷಗಳ ನಂತರ ಎರಡನೆಯ ಶಿಲಾಲೇಖವನ್ನು ರಚಿಸಲಾಯಿತು.

ಆಗ ರಾಜಾಜ್ಞೆ ಪಡೆದ ಆ ಮೂವತ್ತು ಕುಟುಂಬಗಳು ನಿಶ್ಚಿತ ಸ್ಥಳದಲ್ಲಿ, ನಿರ್ದಿಷ್ಟ ಸಮಯದಲ್ಲಿ ಸಭೆಸೇರಿ, ಸಮಿತಿಯಲ್ಲಿರಲು ಯೋಗ್ಯರಾಗಿರುವರೆಂದು ಭಾವಿಸಲ್ಪಟ್ಟವರ ಹೆಸರನ್ನು ಆ ಕುಟುಂಬಗಳ ಸದಸ್ಯರು ತಾಡವೋಲೆಯ ಮೇಲೆ ಬರೆದು ಗಡಿಗೆಯಲ್ಲಿ ಹಾಕುತ್ತಿದ್ದರು. ಅನಂತರ ಕುಟುಂಬದ ಪ್ರಕಾರ ಆ ಎಲೆಗಳನ್ನು ವಿಂಗಡಿಸಿ ಕಂತೆ ಕಟ್ಟಿ ಮತ್ತೊಂದು ಗಡಿಗೆಯಲ್ಲಿ ಹಾಕಲಾಗುತ್ತಿತ್ತು. ಇದಾದ ಬಳಿಕ ಹಳ್ಳಿಗರೆಲ್ಲರ ಸಮ್ಮುಖದಲ್ಲಿ ತೀರಾ ಚಿಕ್ಕವಯಸ್ಸಿನ ಬಾಲಕನೊಬ್ಬ ಕಂತೆಯೊಂದನ್ನು ಹೆಕ್ಕಿ ತೆಗೆದು ಚುನಾವಣೆಯ ಉಸ್ತುವಾರಿ ನೋಡುತ್ತಿದ್ದವನ ಕೈಗೆ ಹಾಕುತ್ತಿದ್ದ. ಆಗ ಆತ ಆ ಕಂತೆಯಲ್ಲಿ ಬರೆದವರ ಹೆಸರುಗಳನ್ನು ಎಲ್ಲರಿಂದ ಗೌರವಾರ್ಹನೆಂದು ಪರಿಗಣಿಸಲ್ಪಟ್ಟ ದೇವಾಲಯದ ಅರ್ಚಕನಿಗೆ ತೋರಿಸಿ ಎಲ್ಲರಿಗೂ

ಕೇಳುವ ಹಾಗೆ ಗಟ್ಟಿಯಾಗಿ ಓದುತ್ತಿದ್ದ. ಹೀಗೆ ಓದಿದ್ದನ್ನು ಮತ್ತೊಬ್ಬ ಬರೆದುಕೊಳ್ಳುತ್ತಿದ್ದ. ಈ ಪ್ರಕಾರ ಮೂವತ್ತು ಜನರನ್ನು ಆರಿಸಿದ ನಂತರ, ಅವರಲ್ಲಿ ಹೆಚ್ಚು ಪ್ರಬುದ್ಧರಾದ, ಅನುಭವಶಾಲಿಗಳಾದ, ತೀಕ್ಷ್ಣಮತಿಗಳೆಂದು ಪರಿಗಣಿಸಲ್ಪಟ್ಟ ಹನ್ನೆರಡು ಜನರನ್ನು ಹೆಚ್ಚು ಅಧಿಕಾರ ಇರುವ ವಾರ್ಷಿಕ ಸಮಿತಿಗೂ ಇನ್ನು ಹನ್ನೆರಡು ಜನರನ್ನು ಉದ್ಯಾನ ಸಮಿತಿಗೂ ಉಳಿದ ಆರು ಜನರನ್ನು ಕೆರೆಯ ಸಮಿತಿಗೂ ಆಯ್ಕೆ ಮಾಡಲಾಗುತ್ತಿತ್ತು. ಚುನಾವಣೆಯ ಕಾಲಕ್ಕೆ ಗ್ರಾಮನಿವಾಸಿಗಳೆಲ್ಲ ಕಡ್ಡಾಯವಾಗಿ ಹಾಜರಿರಬೇಕೆಂಬ ನಿಯಮವಿದ್ದುದರಿಂದ ಹಾಗೂ ಆಯ್ಕೆಯಾದವರೆಂದು ಸಾರಲಾದವರ ಎಲೆಗಳನ್ನು ಯಾರು ಬೇಕಾದರೂ ನೋಡಬಹುದಾದ್ದರಿಂದ ಮೋಸಕ್ಕೆ ಅವಕಾಶವೇ ಇರಲಿಲ್ಲ. ಅಲ್ಲದೆ ದೇವರನ್ನು ಸಾಕ್ಷಿಯೆಂದು ಭಾವಿಸಿ ದೇವಾಲಯದ ಪ್ರಾಂಗಣದಲ್ಲಿ ಚುನಾವಣೆಗಳನ್ನು ನಡೆಸುತ್ತಿದ್ದುದರಿಂದ ದೈವಭೀರುಗಳಾದ ಜನ ಮೋಸ ಮಾಡುವ ಧೈರ್ಯವನ್ನೂ ತೋರಿಸುತ್ತಿರಲಿಲ್ಲ. ಉಳಿದೆಲ್ಲ ವಿಧಾನಗಳಿಗಿಂತ ಶ್ರೇಷ್ಠವಾಗಿದ್ದರಿಂದ ಈ ವಿಧಾನವೇ ಆಚಂದ್ರಾರ್ಕವಾಗಿ ನಡೆದುಕೊಂಡು ಹೋಗಬೇಕೆಂದು ರಾಜಾಜ್ಞೆಯಾದದ್ದನ್ನು ಇಲ್ಲಿನ ಶಿಲಾಲೇಖ ಉಲ್ಲೇಖಿಸುತ್ತದೆ.

"ದುಷ್ಟರು ಅಳಿಯುವ ಹಾಗೆ, ಶಿಷ್ಟರು ವರ್ಧಿಸುವ ಹಾಗೆ" ಚುನಾವಣೆಯ ನಿಯಮಗಳನ್ನು ರೂಪಿಸಲಾಗಿತ್ತಂತೆ. ಯೋಗ್ಯರಾದವರು ಮಾತ್ರ ಚುನಾವಣೆಗೆ ನಿಲ್ಲಬಹುದಾಗಿತ್ತು. ಇಂದಿನ ಮಾನದಂಡದಿಂದ ಯೋಗ್ಯತೆಯ ಮಾನದಂಡವೂ ಕಠೋರವಾಗಿತ್ತು. ಆ ಹಳ್ಳಿಯ ಖಾಯಂ ನಿವಾಸಿಯಾಗಿದ್ದು, ಅಧಿಕಾರವಿದ್ದ ಮೂವತ್ತು ಕುಟುಂಬಗಳ ಪೈಕಿ ಒಂದಕ್ಕೆ ಸೇರಿದವನಾಗಿದ್ದು, ಸ್ವಂತದ ಹೆಸರಿನಲ್ಲಿ ಜಮೀನನ್ನೂ ಮನೆಯನ್ನೂ ಹೊಂದಿ. ಸರಕಾರಕ್ಕೆ ನಿಯತವಾಗಿ ಕಂದಾಯ ಸಲ್ಲಿಸುವವನಾಗಿದ್ದರೆ ಮಾತ್ರ ಆತ ಚುನಾವಣೆಗೆ ನಿಲ್ಲಬಹುದಿತ್ತು. ಇದೂ ಸಾಲದೆಂಬಂತೆ ಹಳ್ಳಿಯ ಜನರಿಂದ ಆತ ಸಚ್ಚರಿತ್ರನೆಂದು ಪರಿಗಣಿಸಲ್ಪಡಬೇಕಾಗಿತ್ತಷ್ಟೇ ಅಲ್ಲ, ವೇದಗಳಲ್ಲಿ ಪ್ರಾವೀಣ್ಯವನ್ನೂ ಸಂಪಾದಿಸಿರಬೇಕಾಗುತ್ತಿತ್ತು. ಇಷ್ಟೆಲ್ಲ ಇದ್ದರೂ ಮೂವತ್ತೈದರಷ್ಟು ವಯಸ್ಸಾಗಿರದಿದ್ದರೆ ಚುನಾವಣೆಗೆ ಆತ ನಿಲ್ಲುವಹಾಗಿರಲಿಲ್ಲ. ಎಪ್ಪತ್ತು ವರ್ಷ ದಾಟಿದ್ದರೂ ಚುನಾವಣೆಗೆ ನಿಲ್ಲುವ ಅರ್ಹತೆಯನ್ನು ಕಳೆದುಕೊಳ್ಳುತ್ತಿದ್ದ. ಚುನಾಯಿತನಾದ ಮೇಲೂ ಸಚ್ಚಾರಿತ್ರ್ಯವನ್ನಾತ ಕಾಯ್ದುಕೊಳ್ಳಬೇಕಾಗಿತ್ತು. ಅಕಸ್ಮಾತ್ತಾಗಿ ಯಾವುದೇ ವಿಷಯದಲ್ಲಿ ಕೈ ಜಾರಿದರೆ ಅಥವಾ ಅವನ ಸಂಬಂಧಿಕರು ಅವ್ಯವಹಾರದಲ್ಲಿ ತೊಡಗಿದ್ದು ಕಂಡುಬಂದರೆ ಚುನಾಯಿತನಾಯಿತನನ್ನು ಅಧಿಕಾರದಿಂದ ನಿರ್ದಾಕ್ಷಿಣ್ಯವಾಗಿ ಕಿತ್ತೊಗೆಯಲಾಗುತ್ತಿತ್ತು. ಸುಶೀಲನೆಂದು ಪರಿಗಣಿಸಲ್ಪಟ್ಟು ಚುನಾಯಿತನಾದವ ಹಿಂದೆ ಯಾವುದೋ ಕಾಲದಲ್ಲಿ ತನ್ನ ಚಾರಿತ್ರ್ಯಕ್ಕೆ ಘನತೆಗೆ ತಕ್ಕುದಲ್ಲದ ಕಾರ್ಯ ಮಾಡಿದ್ದಾನೆಂದು ಕಂಡು ಬಂದರೆ ಅಂಥವನನ್ನೂ ಅಧಿಕಾರದಿಂದ ಕಿತ್ತೊಗೆಯಲಾಗುತ್ತಿತ್ತು. ಅಧಿಕಾರದ ಮದ ತಲೆಗೇರುವುದೆಂಬ ಭಯ ಅಂದಿನವರನ್ನೂ ಕಾಡುತ್ತಿದ್ದ ಹಾಗೆ ಕಾಣುತ್ತದೆ. ಆದ್ದರಿಂದಲೇ ಒಮ್ಮೆ ಚುನಾಯಿತನಾದವ ಮುಂದಿನ ಮೂರು ಚುನಾವಣೆಗಳಿಗೆ ನಿಲ್ಲುವಂತಿರಲಿಲ್ಲ.

ಅರಸರ ಕಾಲದಲ್ಲೂ ಪ್ರಜಾಸತ್ತೆಯಿತ್ತು ಎಂಬುದಕ್ಕೆ ಪುರವೆಯಾದ ಇದು ಸಾವಿರವರ್ಷಗಳಷ್ಟು ಹಳೆಗಾಲದ ಮಾತು. ಉತ್ತರಮೇರುವಿರಿಗಿಂದು ಹಳೆಯ ವೈಭವವಿಲ್ಲ. ಈಗ ಅದಕ್ಕಿರುವ ಆಸ್ತಿಯೆಂದರೆ ಸಾವಿರವರ್ಷಗಳ ಹಿಂದೆ ಕಲ್ಲಿನಲ್ಲಿ ಕಟ್ಟಲ್ಪಟ್ಟ ದೇವಾಲಯಗಳು ಹಾಗೂ ಕೃಷಿಗೆ ಅನುಕೂಲವಾಗಲೆಂದು ಅಲ್ಲಲ್ಲಿ ನಿರ್ಮಿಸಿದ, ಇಂದಿಗೂ ಉಪಯುಕ್ತವಾದ ಕೆರೆಗಳು ಮಾತ್ರ.

---

**ಕಾಲ ಬದಲಾಗಿದೆ. ಬೆಕ್ಕುಗಳಿಗೂ ಈಗ ಕಲಬೆರಕೆಯ ಭಯ-ಸಂಶಯ. ಅವು ಕಣ್ಣು ಮುಚ್ಚಿ ಹಾಲು ಕುಡಿಯುವುದನ್ನು ನಿಲ್ಲಿಸಿವೆ.**

**-ಯಬ್ಬಂಕ**

# ಮಾಸ್ತಿಯವರ ಮಂಕು ಕಳೆದ ಮಾರುತಿಯ ಕಥೆ

ಸಂಗ್ರಹ: **ಡಾ. ಕೆ. ಶ್ರೀಕಂಠಯ್ಯ**
('ಭಾವ' - ಭಾಗ ೨ ರಿಂದ)

**ಮಾ**ಸ್ತಿಯವರು ಒಮ್ಮೆ 'ರಾಮಾಯಣ ಪಾರಾಯಣ'ವನ್ನು ಪ್ರಾರಂಭಿಸಬೇಕೆಂದು ಯೋಚಿಸಿದಾಗ, ತಾವು ನಡೆಸುತ್ತಿರುವ ಮಡಿ ಅದಕ್ಕೆ ಸಾಲದು ಎನ್ನಿಸಿ, ಪಾರಾಯಣ ಆರಂಭಿಸುವುದು ಹೇಗೆ ಎಂದು ತಮ್ಮ ಹಿರಿಯ ಮಿತ್ರ ಶ್ರೀನಿವಾಸ ಅಯ್ಯಂಗಾರ್ ಎಂಬುವರೊಂದಿಗೆ ಸಮಾಲೋಚನೆ ನಡೆಸಿದರು. ವಯೋವೃದ್ಧರೂ, ಜ್ಞಾನವೃದ್ಧರೂ ಆಗಿದ್ದ ಶ್ರೀನಿವಾಸ ಅಯ್ಯಂಗಾರ್ಯರ ಪ್ರಪಂಚ ಜ್ಞಾನ ಎಷ್ಟು ಮೇಲ್ಮಟ್ಟದ್ದಾಗಿತ್ತು ಎಂಬುದಕ್ಕೆ ಅವರು ಆ ಸಂದರ್ಭದಲ್ಲಿ ಮಾಸ್ತಿಯವರಿಗೆ ನೀಡಿದ ಹಿತೋಕ್ತಿಗಳೇ ನಿದರ್ಶನವಾಗಿವೆ. "ವೆಂಕಟೇಶ್ ಅಯ್ಯಂಗಾರ್ಯರೇ; ಎಂಥ ಜಾಣರು ನೀವು, ಇಂಥ ಮಾತನ್ನು ಆಡುತ್ತಿದ್ದೀರಲ್ಲ! ರಾಮಾಯಣ ಓದುವುದಕ್ಕೆ ನಿಮ್ಮ ಮಡಿ ಸಾಲದೆ, ಇದೇನು ಮಾತು! ತಪ್ಪು. ಒಂದು ಕತೆ ಹೇಳುತ್ತೇನೆ ಕೇಳಿ. ಅದು ತೀರ ತಿಳಿದವರು ಹೇಳಿದ ಹಿಂದಿನ ಕಾಲದ ಕತೆ.

"ರಾಮದೇವರು ರಾಜ್ಯವಾಳುತ್ತ ಸುಖವಾಗಿದ್ದ ಕಾಲದಲ್ಲಿ ಹನುಮಂತ ದೇವರು ದಿನಾ ಅವರಿಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾ ಇದ್ದರು. ಒಮ್ಮೆ ಹನುಮ ದೇವರು ಹೀಗೆ ವಿಹಾರಕ್ಕಾಗಿ ಆಕಾಶದಲ್ಲಿ ಹಾರಾಡುತ್ತಾ ಇರುವಾಗ ಕೆಳಗೆ ಯಾರೋ 'ರಾಮ' ಅಂತ ಹೇಳಿದ್ದು ಕೇಳಿಸಿತು. ತನ್ನ ಪ್ರಭು ರಾಮನನ್ನು ಸ್ಮರಿಸುವವರು ಯಾರು ಎಂದು ಕೆಳಗೆ ದೃಷ್ಟಿಹರಿಸಿದರು. ಯಾರೋ ಬಡಪಾಯಿ, ಮೂರು ದಿನದಿಂದ ಸರಿಯಾಗಿ ಕಾಲ ಪ್ರವೃತ್ತಿಯಾಗದೆ ಮಲ ಕಟ್ಟಿದ್ದು, ಅದು ಕಳೆದು ದೇಹಕ್ಕೆ ಹಾಯಾದ ಆ ಕ್ಷಣದಲ್ಲಿ 'ರಾಮ' ಎಂದಿದ್ದ. 'ಈ ಪ್ರಾಣಿ ಈ ಸ್ಥಿತಿಯಲ್ಲಿ ನನ್ನ ಪ್ರಭುವಿನ ಹೆಸರನ್ನು ಹೇಳಿದನೆ?' ಎಂದು ಅವನ ಬಳಿ ಬಂದು, ಸಿಟ್ಟಿನ ಭರದಲ್ಲಿ ಅವನ ತಲೆಯ ಮೇಲೆ ಮೊಟ್ಟಿದ ಹನುಮ.

"ಮಾರನೆಯ ದಿನ ಶ್ರೀರಾಮನ ತಲೆಗೆ ಎಣ್ಣೆ ಹಚ್ಚಲು ತೊಡಗಿರುವಾಗ ಅವನ ತಲೆಯಲ್ಲಿ ದೊಡ್ಡ ಬಾವು ಇರುವುದನ್ನು ಗಮನಿಸಿ, 'ನಿನ್ನ ತಲೆಯ ಮೇಲೆ ಪೆಟ್ಟಾಗಿದೆಯಲ್ಲಾ ರಾಮ! ಏನಾಯಿತು?' ಎಂದು ಕೇಳಿದ ಹನುಮ. ಆಗ ರಾಮ, 'ನೀನೇ ನನ್ನ ತಲೆಯ ಮೇಲೆ ಮೊಟ್ಟಿ, ಬಾವು ಮಾಡಿ, ಈಗ ಯಾರು ಮಾಡಿದರು ಎಂದು ಕೇಳುತ್ತಿಯಲ್ಲಾ?' ಎಂದ. ಆಗ ಆಂಜನೇಯ 'ನಾನು ಮೊಟ್ಟಿದೆನೆ?' ಎಂದು ವಿಸ್ಮಯಗೊಳ್ಳಲು ರಾಮ ಹೇಳಿದ, 'ಅಪ್ಪಾ ಆಂಜನೇಯ! ನೀನು ನಿನ್ನೆ ಸಂಜೆ ವಿಹಾರದಲ್ಲಿದ್ದಾಗ ನಡೆದದ್ದನ್ನು ಜ್ಞಾಪಿಸಿಕೋ! ಮಲ ಕಳೆದು ಅಶುಚಿಯಾಗಿದ್ದ ಮನುಷ್ಯ ನನ್ನ ಹೆಸರು ಹೇಳಿದ ಅಂತ ಕೋಪಗೊಂಡ ನೀನು ಅವನ ತಲೆಯ ಮೇಲೆ ಮೊಟ್ಟಿದೆ ಅಲ್ಲವೆ? ಇದರಲ್ಲಿ ತಪ್ಪೇನಿದೆ ಹನುಮಾ? ಏನೋ ಕಷ್ಟ ಹರಿದು ಸುಖ ಆದಾಗ ಆ ಮನುಷ್ಯ ನನ್ನ ಹೆಸರು ಹೇಳಿದ. ಅದಕ್ಕೆ ಶುಚಿ-ಅಶುಚಿ ಏತರದು? ನನ್ನ ಹೆಸರು ಹೇಳುವವರನ್ನು ಮೊಟ್ಟಿದರೆ ಆ ಪೆಟ್ಟು ನನಗೆ ತಾಗುತ್ತದೆ. ನನ್ನ ಭಕ್ತನ ನೋವು-ನಲಿವುಗಳು ನನ್ನವು. ನನ್ನ ತಲೆಯ ಮೇಲಿನ ಈ ಬಾವು ನನ್ನ ರಕ್ಷಕ ನೀನೇ ಮಾಡಿದ್ದು. ಬಾ ಎಣ್ಣೆ ಹಚ್ಚು.'

ಈ ಕತೆಯನ್ನು ಮುಗಿಸುತ್ತಾ "ರಾಮನ ನಾಮ ಪತಿತರನ್ನು ಪಾವನ ಮಾಡುವ ನಾಮ. ಅಶುಚಿಯಾದವರು ಅದನ್ನು ಹೇಳಬಾರದು ಎಂದರೆ ಯಾರೂ ಹೇಳುವಂತಿಲ್ಲ, ಲೋಕ ಉಳಿಯುವಂತಿಲ್ಲ. ನೀವು ಹೆಸರಿಸುತ್ತಿರುವ ಮಡಿ ಬೇಕಾದಷ್ಟು ಮಡಿ. ಪಾರಾಯಣ ಆರಂಭಿಸಿ" ಎಂದು ಮಾಸ್ತಿಯವರಿಗೆ ಹೇಳಿದರು. ಮಾಸ್ತಿಯವರು "ಈ ಕತೆ ನನ್ನ ಮಂಕನ್ನು ಕಳೆಯಿತು. ಪಾರಾಯಣ ಪ್ರಾರಂಭಿಸಿದೆ" ಎಂದು ಹೇಳಿ ಈ ಪ್ರಸಂಗವನ್ನು ಮುಗಿಸುತ್ತಾರೆ.

# ‘ವರಾಹಾಂಗ’ನಾಗಲಿರುವ ಮನುಷ್ಯ!

**ಅಂಗಾಂಗ ದಾನಿಗಳ ತುಟಾಗ್ರತೆಯನ್ನು ನಿವಾರಿಸಲು ವೈದ್ಯಕೀಯ ಜಗತ್ತೀಗ ವರಾಹಗಳೆಡೆ ದೃಷ್ಟಿ ಹರಿಸಿದೆ. ಇನ್ನು ಮೂರು ವರ್ಷಗಳಲ್ಲಿ ಮೂತ್ರಪಿಂಡ, ಹೃದಯ ಮತ್ತು ಇನ್ನಿತರ ಅಂಗಾಂಗಗಳಿಗಾಗಿ ಹಂದಿಗಳು ಮಾನವನಿಗೆ ‘ದಾನಿ’ಯಾಗಿ ಉಪಕರಿಸಲಿವೆ.**

**ವೈದ್ಯಕೀಯ ಜಗತ್ತು**

• ‘ಎಂಆರ್‌ಎಸ್’

ಹೃದಯವನ್ನಾಗಲಿ ಮೂತ್ರಪಿಂಡವನ್ನಾಗಲಿ ಕಸಿಮಾಡಬೇಕೆಂದರೆ ಮುಖ್ಯವಾಗಿ ಕಸಿಮಾಡಲ್ಪಡುವ ಹೃದಯ ಅಥವಾ ಮೂತ್ರಪಿಂಡ ಆರೋಗ್ಯಕರವಾಗಿರಬೇಕು. ಧಮನಿಗಳು ಒಂದಕ್ಕೊಂದು ಹೊಂದುವಹಾಗಿರಬೇಕು. ರಕ್ತವೂ ಪರಸ್ಪರ ಹೊಂದಾಣಿಕೆಯಾಗುವಂತಿರಬೇಕು.

ರೋಗಾಣುಗಳನ್ನು ಎದುರಿಸುವ ಪ್ರಕೃತಿದತ್ತವಾದ ಪ್ರತಿರೋಧಕ ವ್ಯವಸ್ಥೆ ಶರೀರದಲ್ಲಿದೆ. ಉಳಿದೆಲ್ಲ ದೃಷ್ಟಿಯಿಂದ ವರವಾದ ಈ ವ್ಯವಸ್ಥೆ ಕಸಿಯ ವಿಷಯದಲ್ಲಿ ಮಾತ್ರ ಶಾಪವಾಗಿ ಪರಿಣಮಿಸುತ್ತದೆ. ಹೊಸ ಹೃದಯವನ್ನಾಗಲಿ ಮೂತ್ರಪಿಂಡವನ್ನಾಗಲಿ ಅದು ಸುಲಭವಾಗಿ ಸ್ವೀಕರಿಸುವುದಿಲ್ಲ. ಕಸಿ ಮಾಡಿದ ಸ್ವಲ್ಪ ಸಮಯದಲ್ಲೇ ಕಸಿಮಾಡಲ್ಪಟ್ಟ ಅಂಗವನ್ನದು ತಿರಸ್ಕರಿಸುತ್ತದೆ. ಹಾಗಾಗದಿರಲು ಡಾಕ್ಟರರು ಶರೀರದ ಪ್ರತಿರೋಧಕ ಶಕ್ತಿಯನ್ನೇ ಕುಗ್ಗಿಸುವ ಔಷಧಗಳನ್ನು ಚುಚ್ಚುಮದ್ದಿನ ರೂಪದಲ್ಲಿ ಕೊಡುತ್ತಾರೆ. ಆದರೆ ತೊಂದರೆ ಇಷ್ಟಕ್ಕೇ ಬಗೆಹರಿಯುವುದಿಲ್ಲ. ಕ್ರಮೇಣ ಬಿಳಿ ರಕ್ತ ಕಣಗಳಲ್ಲಿನ ಒಂದು ಅಂಶ ಕಸಿಮಾಡಿದ ಅಂಗವನ್ನು ತಿರಸ್ಕರಿಸುವಂತೆ ಶರೀರವನ್ನು ಸದಾ ಪ್ರಚೋದಿಸತೊಡಗುತ್ತದೆ. ಹಾಗಾಗದಿರಲು ಕಸಿಮಾಡಿಸಿಕೊಂಡವರು ಜೀವನಪರ್ಯಂತ ಚುಚ್ಚುಮದ್ದನ್ನು ತೆಗೆದುಕೊಳ್ಳುತ್ತಿರಬೇಕಾಗುತ್ತದೆ.

(‘ಸ್ಪೆಕ್ಟ್ರಮ್’ನಿಂದ ಸಾಭಾರ)

ಕಸಿಮಾಡಿದಕೂಡಲೆ ಹೊಸ ಅಂಗ ತಿರಸ್ಕೃತವಾಗುವ ಮೊದಲ ಹಂತದಲ್ಲಿ ಈಗ ಬ್ರಿಟಿಶ್ ವಿಜ್ಞಾನಿಗಳು ಸಾಕಷ್ಟು ಜಯಸಾಧಿಸಿದ್ದಾರೆ. ಎರಡನೆಯ ಹಂತದಲ್ಲೂ ಜಯಗಳಿಸಲು ಪ್ರಯತ್ನಿಸುತ್ತಿದ್ದಾರೆ. ಅವರ ಪ್ರಯತ್ನಗಳು ಯಶಸ್ವಿಯಾದರೆ, ಅವುಗಳಿಗೆ ವೈದ್ಯಕೀಯ ಪ್ರಪಂಚದ ಮನ್ನಣೆ ದೊರಕುವಂತಾದರೆ ಇನ್ನು ಎರಡುಮೂರು ವರ್ಷಗಳಲ್ಲಿ ಈ ಪ್ರತಿರೋಧದ ಸಮಸ್ಯೆ ಅಷ್ಟಾಗಿ ಇರುವುದಿಲ್ಲ.

ಅದಕ್ಕಾಗಿ ಕೆಂಬ್ರಿಜ್ಜಿನ ಇಮುಟ್ರಾನ್ ಕಂಪ

ನಿಯ ವಿಜ್ಞಾನಿಗಳು ಆಯ್ದುಕೊಂಡ ವಿಧಾನ ಮಾತ್ರ ತಳಿತಂತ್ರಜ್ಞಾನದಲ್ಲಿ ಅತಿ ನವೀನವಾದದ್ದು. ಫಲಿತವಾದ ಹೆಣ್ಣು ಹಂದಿಗಳ ಅಂಡಾಣುಗಳಿಗೆ ಮಾನವ ವಂಶವಾಹಿಗಳನ್ನು ಅಳವಡಿಸಿ ಪುನಃ ಹಂದಿಯ ಗರ್ಭದಲ್ಲಿ ಅವುಗಳನ್ನಿರಿಸಿ ಮಾನವ ವಂಶವಾಹಿಗಳಿಂದ ಯುಕ್ತವಾದ ಹೊಸ ತಳಿಯ ಹಂದಿಗಳನ್ನವರು ಪಡೆದಿದ್ದಾರೆ. ಈ ಹಂದಿಗಳ ಹೃದಯವನ್ನು ಮಾನವರಿಗೆ ಅಳವಡಿಸಿದರೆ ಶರೀರದಿಂದ ಮೊದಲ ಹಂತದ ಪ್ರತಿರೋಧ ಅಷ್ಟಾಗಿ ಕಂಡು ಬರುವುದಿಲ್ಲ ಎನ್ನುವುದನ್ನು ಆ ವಿಜ್ಞಾನಿಗಳು ಕಂಡುಕೊಂಡಿದ್ದಾರೆ.

ಅವರ ಸಾಧನೆಯ ಮಹತ್ವವನ್ನು ತಿಳಿಯಬೇಕೆಂದರೆ ಶರೀರದ ಪ್ರತಿರೋಧ ವ್ಯವಸ್ಥೆಯ ಬಗೆಗೂ ಅಷ್ಟಿಷ್ಟು ತಿಳಿದುಕೊಳ್ಳುವುದು ಅವಶ್ಯ.

ನಮ್ಮ ರಕ್ತದಲ್ಲಿ ಸದಾ ಒಂದು ಬಗೆಯ ಪ್ರೋಟೀನ್ ಕಣಗಳು ತಯಾರಾಗುತ್ತಲೇ ಇರುತ್ತವೆ. ಹೊರಗಿನಿಂದ ರೋಗಾಣುಗಳು ದಾಳಿಯಿಕ್ಕಿದ ಕೂಡಲೆ ಈ ಪ್ರೋಟೀನ್ ಕಣಗಳು ಪ್ರತಿಯೊಂದು ರೋಗಾಣುವನ್ನೂ ಎದುರಿಸಿ ರೋಗಾಣುಗಳ ಬಹಿರಾವಣವನ್ನು ಭೇದಿಸುವ ಮೂಲಕ ಅವುಗಳನ್ನು ನಿಷ್ಕ್ರಿಯಗೊಳಿಸುವವು.

ಆದರೆ ಎಲ್ಲ ರೋಗಾಣುಗಳನ್ನಾಗಲಿ ಹೊರಗಿನಿಂದ ಸೇರಿಕೊಂಡ ಅಂಗಾಂಶವನ್ನಾಗಲಿ ಪ್ರತಿಜೀವಿಗಳಿಗೆ ಸಮಸಮವಾಗಿ ಕಾರ್ಯ ನಿರ್ವಹಿಸುವ ಈ ಪ್ರೋಟೀನ್ ಕಣಗಳು ಕೊಲ್ಲುವುದಿಲ್ಲ-ಅಥವಾ ಅವುಗಳಿಗೆ ಕೊಲ್ಲಲು ಸಾಧ್ಯವಾಗುವುದಿಲ್ಲ. ಜೀವಕಣಗಳಿಗೆ ಡಿಎಎಫ್ ಎಂಬ ವಿಶೇಷ ಬಗೆಯ ಪ್ರೋಟೀನಿನ ರಕ್ಷಣೆ ಇಲ್ಲದ ರೋಗಾಣುಗಳನ್ನು ಮಾತ್ರ ಈ ಪ್ರೋಟೀನ್ ಕಣಗಳು ಕೊಲ್ಲಬಲ್ಲವು ಅಥವಾ ನಿಷ್ಕ್ರಿಯಗೊಳಿಸಬಲ್ಲವು.



ಆಸ್ಟ್ರಿಡ್ – ಅಂಗಾಂಗ ದಾನಕ್ಕೆ ಅತ್ಯಂತ ಯೋಗ್ಯವಾದ ವೈಜ್ಞಾನಿಕವಾಗಿ ಅಭಿವೃದ್ಧಿಪಡಿಸಿದ ಹಂದಿಯ ತಳಿ.

ಬ್ರಿಟಿಶ್ ವಿಜ್ಞಾನಿಗಳು ಈ ಡಿಎಎಫ್ ಅನ್ನು ಒಳಗೊಂಡ ಮಾನವ ವಂಶವಾಹಿಗಳನ್ನು ಪ್ರತ್ಯೇಕಿಸಿ, ಪ್ರಯೋಗಾಲಯದಲ್ಲಿ ಬೆಳೆಸಿ, ಫಲಿತವಾದ ಹಂದಿಯ ಅಂಡಾಣುವಿನಲ್ಲಿ ಮೈಕ್ರೋ ಇಂಜೆಕ್ಷನ್ ವಿಧಾನದ ಮೂಲಕ ಈ ವಂಶವಾಹಿಗಳನ್ನು ಅಳವಡಿಸಿದರು. ಪ್ರತಿ ಜೀವಕಣದಲ್ಲೂ ಒಂದರ ಬದಲು ಎರಡು ಡಿಎಎಫ್ ಕಣಗಳಿರುವಂತೆ ರೂಪಿಸಲಾಗಿದ್ದರಿಂದ ಹೀಗೆ ಜನಿಸಿದ ಹಂದಿಗಳ ಅಂತರವಯವಗಳನ್ನು ಮಾನವರಿಗೆ ಕಸಿಮಾಡಿದರೆ ಮೊದಲ ಹಂತದ ಪ್ರತಿರೋಧ ಕಂಡು ಬರುವ ಸಾಧ್ಯತೆ ತೀರಾ ಕಡಿಮೆ. ಎರಡನೆ ಹಂತದ ಪ್ರತಿರೋಧದಲ್ಲಿ 'ಟಿ' ಕಣಗಳದ್ದೇ ಪ್ರಧಾನ ಪಾತ್ರ. ಹಂದಿಗಳ ಅವಯವಗಳನ್ನು ಕಸಿಮಾಡಿದಾಗ ಈ 'ಟಿ' ಕಣಗಳ ಪ್ರತಿಕ್ರಿಯೆ ಮಾನವ ಅಂಗಗಳನ್ನು ಕಸಿಮಾಡಿದಾಗ ಇರುವಷ್ಟೇ ಆಗಿದ್ದರೆ ವಿಜ್ಞಾನಿಗಳ ಹರ್ಷ ಹೇಳಲಾಸಲ್ಲ. ಅನುರೂಪವಾದ ಅಂಗಕ್ಕಾಗಿ ಈಗಿನಂತೆ ಕಾಯುವ ಪ್ರಸಂಗ ಆಗ ಇರುವುದೇ ಇಲ್ಲ.

ಆದರೆ ಅಂಗಾಗ ಕಸಿಗೆ ಹಂದಿಗಳೇ ಏಕೆ?

ಹಂದಿಗಳ ಅಂತರವಯವಗಳು ಮಾನವರ ಅಂತರವಯವಗಳ ಹಾಗೆಯೆ ಇವೆ. ಅವುಗಳ ಆಕಾರ ಕೂಡ ಹೆಚ್ಚು ಭಿನ್ನವಾಗಿಲ್ಲ. ಮೇಲಾಗಿ ಅವು ಶೀಘ್ರವಾಗಿ ಪುನರುತ್ಪಾದನೆಗೊಳ್ಳುವುದರಿಂದ ಅಗತ್ಯಕ್ಕನುಸಾರವಾದ ಅಂತರವಯವಗಳನ್ನು ದೊರಕಿಸಿಕೊಳ್ಳಲು ಸಾಧ್ಯವಾಗುವುದು ಎನ್ನುವುದು ಬ್ರಿಟಿಶ್ ವಿಜ್ಞಾನಿಗಳ ಅಂಬೋಣ.

ಬ್ರಿಟಿಶ್ ವಿಜ್ಞಾನಿಗಳ ಸಾಧನೆಯಿಂದ ಪ್ರೇರಿತವಾದ ಎರಡು ಅಮೆರಿಕನ್ ಹಾಗೂ ಒಂದು ಜಪಾನಿನ ಕಂಪನಿಗಳೀಗ ಇಂತಹ ಹಂದಿಗಳನ್ನು ಉತ್ಪಾದಿಸುವಲ್ಲಿ ನಿರತವಾಗಿವೆ. ಎರಡನೆಯ ಹಂತದ ಪ್ರತಿರೋಧಕ್ಕೂ ರಾಮಬಾಣವಾಗಬಲ್ಲ ತಳಿಗಳನ್ನು ಸೃಷ್ಟಿಸಲು ವಿಜ್ಞಾನಿಗಳಿಗೆ ಸಾಧ್ಯವಾದರೆ ಅಂಗಾಂಗಗಳ ಕಸಿಯಲ್ಲಿ ಕ್ರಾಂತಿಯೇ ಉಂಟಾಗಬಹುದು; ಹೃದಯ, ಮೂತ್ರಪಿಂಡಗಳಂತಹ ಅಂಗಗಳ ತುಟಾಗ್ರತೆಯಾಗ ಕನಸಿನ ಮಾತಾಗಬಹುದು. ಈ ಶಸ್ತ್ರಚಿಕಿತ್ಸೆಯ ಮೂಲಕ ವರಾಹಾಂಗನಾದ ಮನುಷ್ಯ ಕಸಿ ಶಸ್ತ್ರ ಚಿಕಿತ್ಸೆಯ ತೊಂದರೆಗಳಿಗೆ ಶಾಶ್ವತವಾಗಿ ವಿದಾಯ ಹೇಳಬಹುದು.

## ಪರೋಪಕಾರಿ ಮೀನು

ಮನುಷ್ಯನಲ್ಲಿರುವಂತೆ ಮೀನುಗಳಲ್ಲಿಯೂ ಪರೋಪಕಾರಿ ಇರುವದು. ಇದು ಬೇರೆಯವರನ್ನು ಸ್ವಚ್ಛವಾಗಿಸುವ ಮೂಲಕ ತನ್ನ ಆಹಾರ ಪಡೆಯುವುದು. ಬಣ್ಣದಿಂದ ಕೂಡಿದ ಸ್ಪಂಜು ಪ್ರಾಣಿಯ ಸಮೀಪದಲ್ಲಿ ತನ್ನ ಅಂಗಡಿ ತೆರೆಯುತ್ತದೆ. ಈ ಮೂಲಕ ಇತರ ಮೀನುಗಳಿಗೆ ಕಾಣಿಸಿಕೊಳ್ಳುತ್ತದೆ.

ಇತರ ಮೀನುಗಳು ಕೆಲವೊಮ್ಮೆ ಬಹಳ ದೂರದಿಂದ ಪರೋಪಕಾರಿ ಮೀನುಗಳ ಬಳಿಗೆ ಬರುವುದಿದೆ. ಮತ್ತು ಬೇರೆ ಮೀನುಗಳೇನಾದರೂ ಈಗಾಗಲೇ ಈ ಮೀನಿನ ಸೇವೆ ಪಡೆಯುತ್ತಿದ್ದರೆ ತಮ್ಮ ಸರದಿಗಾಗಿ ಕಾಯುತ್ತಾ ನಿಂತುಕೊಳ್ಳುತ್ತವೆ. ಈ ಮೀನುಗಳು ಇತರ ಮೀನುಗಳನ್ನು ಸ್ವಚ್ಛಗೊಳಿಸುವ ಕ್ರಮಕ್ಕೆ ಮೀನುಗಳ ದೇಹಕ್ಕಂಟಿಕೊಂಡಿರುವ ಬ್ಯಾಕ್ಟೀರಿಯಗಳು, ಪರಾವಲಂಬಿಗಳು, ಒಣಗಿದ ಚರ್ಮ ಮುಂತಾದವೆಲ್ಲ ಆಹಾರವಾಗಿ ದೊರೆಯುತ್ತದೆ. ದೊಡ್ಡ ಮತ್ತು ಭಯಂಕರವೆನ್ನಿಸುವ ಷಾರ್ಕ್‌ನಂತಹ ಮೀನುಗಳು ಸಹ ಈ ಮೀನುಗಳನ್ನು ಹುಡುಕಿಕೊಂಡು ಬರುವುದುಂಟು.

• ಆರ್. ಶಿವಸಿಂಗ್

# ದಸ್ತಾವೇಜೀಯ ಸಾಕ್ಷ್ಯ: ಹಾಗೆಂದರೇನು?




• ಎಸ್. ನಾರಾಯಣ ಮೂರ್ತಿ
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ (ನಿವೃತ್ತ)
ಬೆಂಗಳೂರು

೧೮೭೨ರ ಭಾರತ ಸಾಕ್ಷ್ಯ ಅಧಿನಿಯಮದ ೫೯ ಮತ್ತು ೬೦ನೇ ಪ್ರಕರಣಗಳು ನ್ಯಾಯಾಲಯಗಳಲ್ಲಿ ಯಾವುದಾದರೂ ಒಂದು ಸಂಗತಿಯನ್ನು ರುಜುವಾತು ಪಡಿಸಲು ಮೌಖಿಕ ಸಾಕ್ಷ್ಯ ಯಾವ ರೂಪ ಮತ್ತು ಕ್ರಮದಲ್ಲಿರಬೇಕೆಂದು ತಿಳಿಸಿ ಹೇಳುತ್ತದೆ. ೬೧ನೇ ಪ್ರಕರಣವು ದಸ್ತಾವೇಜುಗಳನ್ನು ನ್ಯಾಯಾಲಯಗಳಲ್ಲಿ ಹೇಗೆ ಹಾಜರು ಪಡಿಸಿ ಅವುಗಳನ್ನು ಸಾಕ್ಷ್ಯವನ್ನಾಗಿ ಆಧರಿಸಬಹುದು ಎಂಬುದರ ಬಗ್ಗೆ ವಿವರವನ್ನು ನೀಡುತ್ತದೆ. ಅದರ ಮೇಲೆ ದಸ್ತಾವೇಜುಗಳ ಅಂತರಾಂಶಗಳನ್ನು ನ್ಯಾಯಾಲಯಗಳಲ್ಲಿ ಪ್ರಾಥಮಿಕ ಸಾಕ್ಷ್ಯ ಅಥವಾ ದ್ವಿತೀಯಕ ಸಾಕ್ಷ್ಯ ವಿಧಾನಗಳಿಂದ ಸಾಬೀತುಪಡಿಸಬೇಕಾಗುತ್ತದೆ.

### ಪ್ರಾಥಮಿಕ ಸಾಕ್ಷ್ಯ

ಪ್ರಾಥಮಿಕ ಸಾಕ್ಷ್ಯವೆಂದರೆ ಪಕ್ಷಗಾರರು ನ್ಯಾಯಾಲಯಗಳಲ್ಲಿ ಸಂಗತಿಗಳ ರುಜುವಾತಿಗಾಗಿ ಹಾಜರು ಪಡಿಸುವ ದಸ್ತಾವೇಜುಗಳು. ಉದಾಹರಣೆಗೆ: ಕ್ರಯ ಪತ್ರ, ಭೋಗ್ಯ ಪತ್ರ, ಬಾಡಿಗೆ ಕರಾರು, ಒಪ್ಪಂದಗಳು ಮುಂತಾದ ಇಬ್ಬರು ಅಥವಾ ಹೆಚ್ಚು ಪಕ್ಷಕಾರರೊಳಗೆ ನಡೆದಿರುವ ವ್ಯವಹಾರಗಳನ್ನು ಲಿಖಿತ ರೂಪದಲ್ಲಿ ತಿಳಿಸುವಂಥವುಗಳು ಮೂಲ ದಸ್ತಾವೇಜುಗಳೆನಿಸುವುವು. ಅಂಥವುಗಳನ್ನು ಪಕ್ಷಕಾರರು ನ್ಯಾಯಾಲಯಕ್ಕೆ ಯಾವುದಾದರೂ ಸಂಗತಿಯ ಪುರಾವೆಯ ಬಗ್ಗೆ ಹಾಜರುಪಡಿಸಬೇಕಾದರೆ ಅಂಥವರು ಮೂಲ ದಸ್ತಾವೇಜುಗಳನ್ನೇ ಹಾಜರುಪಡಿಸಬೇಕಾಗುತ್ತದೆ. ಅಂಥವುಗಳು ನ್ಯಾಯಾಲಯದಲ್ಲಿ ಪ್ರಾಥಮಿಕ ಸಾಕ್ಷ್ಯವೆಂದು ಕರೆಯಿಸಿಕೊಳ್ಳುವುವು.

ಕೆಲವೊಂದು ವೇಳೆ ದಸ್ತಾವೇಜುಗಳನ್ನು ಬೇರೆ ಬೇರೆ ಭಾಗಗಳಲ್ಲಿ ಬರೆಯಲಾಗುತ್ತದೆ; ಹಾಗಿದ್ದಾಗ ದಸ್ತಾವೇಜಿನ ಪ್ರತಿಯೊಂದು ಭಾಗವೂ ಪ್ರಾಥಮಿಕ ಸಾಕ್ಷ್ಯ ಎಂದೆನಿಸಿಕೊಳ್ಳುತ್ತದೆ. ದಸ್ತಾವೇಜನ್ನು ಪ್ರತಿಲೇಖ ರೂಪದಲ್ಲಿ ಬರೆದಿದ್ದರೆ, ಪ್ರತಿಯೊಂದು ಪ್ರತಿಲೇಖವೂ ಅದನ್ನು ಬರೆದುಕೊಡುವ ಪಕ್ಷಕಾರನ ವಿರುದ್ಧ ಪ್ರಾಥಮಿಕ ಸಾಕ್ಷ್ಯವಾಗುತ್ತದೆ. ಅನೇಕ ದಸ್ತಾವೇಜುಗಳನ್ನು ಮುದ್ರಣ ರೂಪದಿಂದಲೋ ಅಥವಾ ಛಾಯಾಗ್ರಹಣದಿಂದಲೋ ಒಂದೇ ರೂಪದಲ್ಲಿ ತಯಾರು ಮಾಡಿದ್ದರೆ, ಪ್ರತಿಯೊಂದು ದಸ್ತಾವೇಜು ಉಳಿದವುಗಳ ಅಂತರಾಂಶಗಳ ಬಗ್ಗೆ ಪ್ರಾಥಮಿಕ ಸಾಕ್ಷ್ಯವೆನಿಸುತ್ತದೆ. ಆದರೆ, ದಸ್ತಾವೇಜುಗಳು ಒಂದೇ ಮೂಲದ ಪ್ರತಿಗಳಾಗಿದ್ದರೆ ಅವು ಮೂಲದ ಅಂತರಾಂಶಗಳ ಬಗ್ಗೆ ಪ್ರಾಥಮಿಕ ಸಾಕ್ಷ್ಯ ಎಂದೆನಿಸಿಕೊಳ್ಳಲಾರದು.

ನ್ಯಾಯಾಲಯದಲ್ಲಿ ಯಾವುದೇ ಸಂಗತಿಯೊಂದನ್ನು ಸಾದರಪಡಿಸಬೇಕಾದರೆ ಅದರ ಬಗೆಗಿನ ದಸ್ತಾವೇಜಿನ ಮೂಲ ಪ್ರತಿಯನ್ನೇ ಹಾಜರು ಪಡಿಸಬೇಕು. ಉದಾಹರಣೆಗೆ; 'ಅ' ಎಂಬವನು 'ಕ' ಎಂಬವನಿಂದ ಆಸ್ತಿಯ ಕ್ರಯಪತ್ರವನ್ನು ಬರೆಸಿಕೊಳ್ಳುತ್ತಾನೆ; ಆ ಆಸ್ತಿಯ ಒಡೆತನ ತನ್ನದು ಎಂಬ ಸಂಗತಿಯನ್ನು ನ್ಯಾಯಾಲಯದಲ್ಲಿ ರುಜುವಾತುಪಡಿಸಬೇಕಾದ ಸಂದರ್ಭ ಬಂದಾಗ 'ಅ' ಎಂಬವನು ಆ ಕ್ರಯ ಪತ್ರವನ್ನೇ ಪ್ರಾಥಮಿಕ ಸಾಕ್ಷ್ಯವಾಗಿ ಹಾಜರುಪಡಿಸಬೇಕು. ಯಾಕಂದರೆ, ಭಾರತ ಸಾಕ್ಷ್ಯ ಅಧಿನಿಯಮದ ೬೪ನೇ ಪ್ರಕರಣದ

ಮೇರೆಗೆ ಯಾವುದೇ ಸಂಗತಿಯನ್ನು ರುಜುವಾತು ಪಡಿಸಲು ನ್ಯಾಯಾಲಯಕ್ಕೆ ಪ್ರಾಥಮಿಕ ಸಾಕ್ಷವನ್ನು ನೀಡಬೇಕೆಂದಿದೆ.

ಯಾವುದಾದರೂ ದಸ್ತಾವೇಜನ್ನು ಯಾವನಾದರೂ ಪಕ್ಷಕಾರ ಒಪ್ಪದಿದ್ದಲ್ಲಿ ಆ ದಸ್ತಾವೇಜನ್ನು ಸಾಕ್ಷಿಯೊಬ್ಬನ ಮೂಲಕ ನ್ಯಾಯಾಲಯಕ್ಕೆ ಹಾಜರುಪಡಿಸುವ ತರುಣದಲ್ಲೇ ಆ ಬಗ್ಗೆ ಆಕ್ಷೇಪವನ್ನು ಎತ್ತಬೇಕು. ಹಾಗೆ ಪಕ್ಷಕಾರರ ಆಕ್ಷೇಪವಿದ್ದಾಗ ನ್ಯಾಯಾಲಯವು ಅದನ್ನು ಪರಾಮರ್ಶಿಸಿ ಅಂಥ ಆಕ್ಷೇಪವನ್ನು ಎತ್ತಿ ಹಿಡಿಯಲೂ ಬಹುದು, ತಳ್ಳಿ ಹಾಕಲೂ ಬಹುದು. ಒಮ್ಮೆ ನ್ಯಾಯಾಲಯವು ಅದನ್ನು ಸ್ವೀಕರಿಸಿ, ಕ್ರಮ ಸಂಖ್ಯೆಯನ್ನು ಕೊಟ್ಟಾದ ಮೇಲೆ, ಯಾರಾದರೂ ಅದಕ್ಕೆ ಆಕ್ಷೇಪವೆತ್ತಿದರೆ, ನ್ಯಾಯಾಲಯವು ಅದನ್ನು ಕೂಡಲೇ ತಳ್ಳಿ ಹಾಕುತ್ತದೆ.

ಒಂದು ವೇಳೆ ಯಾವುದಾದರೂ ಒಂದು ದಸ್ತಾವೇಜನ್ನು ಹಾಜರುಪಡಿಸಲು ವಿರುದ್ಧ ಪಕ್ಷಕಾರನ ಆಕ್ಷೇಪವಿಲ್ಲದಿದ್ದರೆ, ಅದರಲ್ಲಿ ಬರೆಯಲಾಗಿರುವ ಅಂತರಾಂಶಗಳ ಬಗೆಗೂ ಅವನ ಆಕ್ಷೇಪವಿಲ್ಲ ಎಂದಂತಾಗುವುದಿಲ್ಲ. ದಸ್ತಾವೇಜನ್ನು ಹಾಜರು ಪಡಿಸಿದ ಮಾತ್ರಕ್ಕೆ ಅದರೊಳಗೆ ಬರೆದಿರುವ ಎಲ್ಲಾ ಸಂಗತಿಗಳು ರುಜುವಾತಾದುವು ಎಂದು ಹೇಳಲು ಬರುವಂತಿಲ್ಲ. ದಸ್ತಾವೇಜಿನ ಅಂತರಾಂಶಗಳನ್ನು ಸಂದೇಹರಹಿತವಾಗಿ ರುಜುವಾತುಪಡಿಸುವುದು ಅದನ್ನು ಹಾಜರುಪಡಿಸುವವನ ಹೊಣೆಗಾರಿಕೆಯಾಗಿರುತ್ತದೆ ಎಂಬುದು ಗಮನಾರ್ಹ.

### ದ್ವಿತೀಯಕ ಸಾಕ್ಷ

ದ್ವಿತೀಯಕ ಸಾಕ್ಷವೆಂದರೆ;

೧) ಯಾವುದಾದರೂ ದಸ್ತಾವೇಜಿನ ಪ್ರಮಾಣಿತ ಪ್ರತಿ;

೨) ಪ್ರತಿಯ ಯಥಾರ್ಥತೆಯ ಬಗ್ಗೆ ನಂಬಿಗೆ ಮೂಡಿಸುವ ತೆರದ ಯಾಂತ್ರಿಕ ವಿಧಾನಗಳಿಂದ ತೆಗೆದ ಮೂಲದ ಪ್ರತಿ ಮತ್ತು ಅಂಥ ಪ್ರತಿಯೊಡನೆ ಸಾದೃಶ್ಯ ಹೊಂದುವಂತಿರುವ ಇತರ ಪ್ರತಿಗಳು;

೩) ಮೂಲದಿಂದ ಮಾಡಿದ ಅಥವಾ ಅದರೊಡನೆ ತಾಳೆ ನೋಡಲಾದ ಪ್ರತಿಗಳು;

೪) ದಸ್ತಾವೇಜುಗಳನ್ನು ಬರೆದು ಕೊಡದವರ ವಿರುದ್ಧವಾಗಿ ದಾಸ್ತಾವೇಜುಗಳ ಪ್ರತಿಲೇಖಗಳು;

೫) ದಸ್ತಾವೇಜನ್ನು ತಾನೇ ಸ್ವತಃ ನೋಡಿರುವ ವ್ಯಕ್ತಿ ಅದರ ಅಂತರಾಂಶಗಳ ಬಗ್ಗೆ ಕೊಡುವ ಮೌಖಿಕ ಹೇಳಿಕೆ;

-- ಇವು ದ್ವಿತೀಯಕ ಸಾಕ್ಷವೆಂದು ಪರಿಗಣಿತವಾಗುತ್ತವೆ.




"ತಾವು ಇದರಲ್ಲಿ ನೀತಿ ಸಂಹಿತೇನ ಉಲ್ಲಂಘಿಸಿಲ್ಲ ತಾನೆ?"

ಮೂಲ ದಸ್ತಾವೇಜನ್ನು ಹಾಜರುಪಡಿಸಲು ಅಸಾಧ್ಯವಾದಾಗ ಮಾತ್ರವೇ ದ್ವಿತೀಯಕ ಸಾಕ್ಷವನ್ನು ನ್ಯಾಯಾಲಯವು ಅಂಗೀಕರಿಸುತ್ತದೆ.

### ಛಾಯಾಚಿತ್ರ

ಯಾವುದಾದರೂ ವಸ್ತುವಿನ ಛಾಯಾಚಿತ್ರವು ಅದಾಗಿಯೇ ಪ್ರಾಥಮಿಕ ಸಾಕ್ಷವೆನಿಸದು. ಛಾಯಾಚಿತ್ರವನ್ನು ಯಾರು ತೆಗೆದಿರುತ್ತಾನೋ ಆ ವ್ಯಕ್ತಿಯು ಸಾಕ್ಷಿಯಾಗಿ ಬಂದು ತಾನು ಆ ವಸ್ತುವಿನ ಛಾಯಾ ಚಿತ್ರವನ್ನು ತೆಗೆದವನೆಂದು ಹೇಳುವುದು ಮಾತ್ರವಲ್ಲದೆ ಅದರ ವಿಷಮ ಪಟಲವನ್ನು (ನೆಗೆಟಿವ್) ಸಹಾ ಹಾಜರುಪಡಿಸಬೇಕು. ಯಾಕೆಂದರೆ

ಛಾಯಾ ಚಿತ್ರ ತೆಗೆಯುವಾಗ ಆ ವಸ್ತುವಿನ ವಿಷಮ ಪಟಲವೇ ಮೂಡಿರುತ್ತದೆ ಮತ್ತು ಅದರ ಆಧಾರದಿಂದ ಮಾತ್ರವೇ ವಸ್ತುವಿನ ನಿಜವಾದ ಅಥವಾ ವಿಸ್ತ್ರತವಾದ ಛಾಯಾಚಿತ್ರವು ಮೂಡುತ್ತದಾದ್ದರಿಂದ ನ್ಯಾಯಾಲಯಕ್ಕೆ ಮೊದಲ ಮೂಲ ಪ್ರತಿಯನ್ನೇ ಹಾಜರುಪಡಿಸಿ ಆ ನಂತರ ಅದರ ಛಾಯಾ ಚಿತ್ರವನ್ನು ಹಾಜರುಪಡಿಸಬೇಕು. ಆಗ ಮಾತ್ರ ಆ ವಸ್ತುವಿನ ಛಾಯಾ ಚಿತ್ರ ನ್ಯಾಯಾಲಯದಲ್ಲಿ ಸಾಕ್ಷ್ಯವಾಗಿ ಪರಿಗಣಿಸಲ್ಪಡುತ್ತದೆ.

### ಝೆರಾಕ್ಸ್ ಪ್ರತಿ

ತಾಂತ್ರಿಕ ವಿಧಾನದಿಂದ ತೆಗೆದ ಪ್ರತಿಯಾಗಿದ್ದರೂ ಅದರ ಅಂತರಾಂಶಗಳು ಮೂಲದಷ್ಟೇ ನಿಖರವಾಗಿದೆಯೆಂದು ತಿರ್ಮಾನಿಸಲು ಬರುವುದಿಲ್ಲ; ಯಾಕೆಂದರೆ, ಮೂಲದಲ್ಲಿದ್ದ ಕೆಲ ಸಂಗತಿಗಳನ್ನು ಕಾಣಿಸದಂತೆಯೋ ಅಥವಾ ತಿದ್ದುಪಡಿ ಮಾಡಿಯೋ ಮೂಲಕ್ಕಿಂತ ಬೇರೆಯಾಗಿ ತಯಾರಿಸಲು ಬರುತ್ತದೆ. ಆದ್ದರಿಂದ ಝೆರಾಕ್ಸ್ ಪ್ರತಿಯನ್ನು ದ್ವಿತೀಯಕ ಸಾಕ್ಷ್ಯವಾಗಿ ತೆಗೆದುಕೊಳ್ಳಲು ಬರುವುದಿಲ್ಲವೆಂದು ನ್ಯಾಯಾಲಯಗಳು ಹೇಳಿವೆ. ಆದರೆ, ಆ ಪ್ರತಿಯು ಮೂಲ ಪ್ರತಿಯೊಡನೆ ತಾಳೆ ಮಾಡಿ ನೋಡಲಾಗಿ ಸರಿಯಾಗಿದೆ ಎನ್ನುವಂತಿದ್ದರೆ ಆಗ ಮಾತ್ರ ಅದನ್ನು ನ್ಯಾಯಾಲಯವು ಸ್ವೀಕರಿಸುತ್ತದೆ.

### ದ್ವಿತೀಯಕ ಸಾಕ್ಷ್ಯವನ್ನು ಯಾವಾಗ ನೀಡಬಹುದು?

ದಸ್ತಾವೇಜಿನ ಅಸ್ತಿತ್ವ, ಸ್ಥಿತಿ ಅಥವಾ ಅಂತರಾಂಶಗಳ ಬಗ್ಗೆ ದ್ವಿತೀಯಕ ಸಾಕ್ಷ್ಯವನ್ನು ಕೊಡಲು ಬರುವ ಸನ್ನಿವೇಶಗಳು ಹಲವಾರಿರಬಹುದು.

ಕ) ಮೂಲವನ್ನು ಯಾವ ವ್ಯಕ್ತಿಯ ವಿರುದ್ಧ ಸಾಬೀತುಪಡಿಸಬೇಕೆಂದು ಉದ್ದೇಶಿಸಲಾಗಿದೆಯೋ ಆ ವ್ಯಕ್ತಿಯ, ಮತ್ತು ನ್ಯಾಯಾಲಯದ ಆದೇಶದ ನಿಲುಕದಿರುವ ಅಥವಾ ಅದಕ್ಕೆ ಒಳಪಡದಿರುವ ವ್ಯಕ್ತಿಯ, ಅಥವಾ ಅದನ್ನು ಹಾಜರು ಪಡಿಸುವುದಕ್ಕೆ ವಿಧಿ ಸಮ್ಮತವಾಗಿ ಬದ್ಧನಾಗಿರುವ ಯಾವನೇ ವ್ಯಕ್ತಿಯ ವಿರುದ್ಧವಾಗಿ ದ್ವಿತೀಯಕ ಸಾಕ್ಷ್ಯವನ್ನು ನ್ಯಾಯಾಲಯವು ಅಂಗೀಕರಿಸುತ್ತದೆ.

ಖ) ಮೂಲವು ಯಾವುದಾದರೂ ಕಾರಣದಿಂದ ಕಳೆದು ಹೋಗಿದ್ದರೆ ಅಥವಾ ವಿನಷ್ಟವಾಗಿದ್ದರೆ, ಆಗ;

ಗ) ಮೂಲವನ್ನು ಸುಲಭ ರೀತಿಯಲ್ಲಿ ಸ್ಥಳಾಂತರಿಸಿ ನ್ಯಾಯಾಲಯಕ್ಕೆ ತರಲು ಅಸಾಧ್ಯವಾದ ಸನ್ನಿವೇಶವಿದ್ದರೆ, ಆಗ;

ಘ) ಮೂಲವು ನ್ಯಾಯಾಲಯದಲ್ಲಿ ಅನುಕೂಲಕರವಾಗಿ ಪರೀಕ್ಷಿಸಲಾಗದ ಅನೇಕ ಲೆಕ್ಕಗಳನ್ನು ಅಥವಾ ಇತರ ದಸ್ತಾವೇಜುಗಳನ್ನು ಒಳಗೊಂಡಿದ್ದರೆ, ಆಗ

--ದ್ವಿತೀಯಕ ಸಾಕ್ಷ್ಯವನ್ನು ನ್ಯಾಯಾಲಯವು ಅಂಗೀಕರಿಸುತ್ತದೆ.

### ನೋಟೀಸು.

ಯಾವುದಾದರೂ ಒಂದು ಮೂಲ ದಸ್ತಾವೇಜು ಎದುರು ಪಕ್ಷಕಾರನ ಬಳಿ ಇದೆಯೆಂದಾದರೆ ಅದನ್ನು ಹಾಜರು ಪಡಿಸುವ ಅವಶ್ಯಕತೆಯನ್ನು ನೋಟೀಸು ಮೂಲಕ ತಿಳಿಸಬೇಕಾಗುತ್ತದೆ. ಆದರೆ, ಎದುರು ಪಕ್ಷಕಾರ ಆ ದಸ್ತಾವೇಜನ್ನು ಮೋಸದಿಂದ ಪಡೆದುಕೊಂಡಿದ್ದ ಸಂದರ್ಭವಿದ್ದರೆ, ಅಥವಾ ಮೂಲ ಪ್ರತಿಯು ನ್ಯಾಯಾಲಯದಲ್ಲೇ ಇತ್ತೆಂದಾಗ, ಅಥವಾ ಎದುರು ಪಕ್ಷಕಾರ ಅಂಥ ಮೂಲ ಪ್ರತಿಯು ಕಳೆದು ಹೋಗಿರುವ ಸಂಗತಿಯನ್ನು ಸಮ್ಮತಿಸಿದಾಗ, ಅಥವಾ ಯಾರ ಬಳಿ ಆ ಮೂಲ ಪ್ರತಿ ಇದೆಯೋ ಅಂಥವನು ನ್ಯಾಯಾಲಯದ ಕಕ್ಷೆಯೊಳಗೆ ಸಿಲುಕದಿರುವಾಗ ಅಥವಾ ಅದರ ಆದೇಶಕ್ಕೆ ಒಳಪಡದಿದ್ದಾಗ ಅಂಥ ಸಂದರ್ಭದಲ್ಲಿ ಎದುರು ಪಕ್ಷಕ್ಕೆ ಹಾಜರು ಪಡಿಸಬೇಕಾಗಿರುವ ನೋಟೀಸನ್ನು ಕೊಡುವ ಅಗತ್ಯ ಇರುವುದಿಲ್ಲ.

ಯಾವನೇ ವ್ಯಕ್ತಿಯು ಒಂದು ದಸ್ತಾವೇಜಿಗೆ ಸಹಿ ಹಾಕಿದ್ದಾನೆಂದು ಅಥವಾ ಅದನ್ನು ಪೂರ್ಣವಾಗಿ ಅಥವಾ ಅಂಶತಃ ಬರೆದಿದ್ದಾನೆಂದು ಹೇಳಲಾಗಿದ್ದರೆ ಆ ಸಹಿಯನ್ನು ಅಥವಾ ದಸ್ತಾವೇಜಿನ ಬರವಣಿಗೆಯು ಅವನ ಕೈ ಬರಹದಲ್ಲಿದೆಯೆಂಬುದನ್ನು ಸಾಬೀತು ಪಡಿಸಬೇಕು, ಎಂಬುದನ್ನು ಸಾಕ್ಷ್ಯ ಅಧಿನಿಯಮದ ೬೭ನೇ ಪ್ರಕರಣದಲ್ಲಿ ವಿಶದೀಕರಿಸಿ ಹೇಳಲಾಗಿದೆ. ಆದ್ದರಿಂದ ಯಾವುದೇ ಸಂಗ

ತಿಯೊಂದನ್ನು ನ್ಯಾಯಾಲಯಕ್ಕೆ ರುಜುವಾತು ಪಡಿಸಲು ಇಚ್ಛಿಸುವ ಪಕ್ಷಕಾರ ಒಬ್ಬ ಸಾಕ್ಷಿಯ ಮುಖಾಂತರ ಆ ದಸ್ತಾವೇಜಿಗೆ ಸಹಿ ಹಾಕಿರುವುದನ್ನು ತಾನು ಗುರುತಿಸುವುದಾಗಿಯೂ ಅಥವಾ ಅದನ್ನು ಬರೆದಿರುವವನ ಕೈ ಬರಹವನ್ನು ತಾನು ಗುರುತಿಸುವುದಾಗಿಯೂ ಹೇಳಿಕೆಯನ್ನು ಸಲ್ಲಿಸಬೇಕು. ದಸ್ತಾವೇಜಿನಲ್ಲಿರುವ ಸಹಿ ಮತ್ತು ಅದರ ಕೈ ಬರಹವನ್ನು ಗುರುತಿಸುವ ಸಾಕ್ಷಿಯ ಸಾಕ್ಷ್ಯವಿಲ್ಲದಿದ್ದರೆ ಆ ದಸ್ತಾವೇಜು ಬರೆದುಕೊಟ್ಟಿರುವುದರ ಬಗ್ಗೆ ರುಜುವಾತಾಯಿತೆಂದು ಹೇಳಲು ಬರುವುದಿಲ್ಲ.

ಯಾವುದಾದರೂ ಒಂದು ದಸ್ತಾವೇಜನ್ನು ಒಬ್ಬ ವ್ಯಕ್ತಿ ಬರೆದುಕೊಟ್ಟಿರುತ್ತಾನೆಂದು ಹೇಳಿದರೆ ಅವನು ಅದನ್ನು ಸಹಿ ಮಾಡಿರುತ್ತಾನೆಂದು ಅರ್ಥೈಸಬೇಕು. ಸಹಿ ಮಾಡುವುದು ಎಂದರೆ ಅವನ ಹೆಸರನ್ನು ಅವನೇ ಬರೆಯುವುದು ಅಥವಾ ಅವನ ಎಡಗೈ ಹೆಬ್ಬೆಟ್ಟಿನ ಗುರ್ತನ್ನು ಅದಕ್ಕೆ ಹಾಕುವುದು ಎಂದರ್ಥ.

ಅಂತೂ ನ್ಯಾಯಾಲಯಗಳಲ್ಲಿ ಯಾವನಾದರೂ ಒಬ್ಬ ವ್ಯಕ್ತಿ ತನಗೆ ಅನ್ಯಾಯವಾಗಿದೆಯೆಂದು ದೂರನ್ನು ಹೇರಿ ಪ್ರಕರಣವನ್ನು ನ್ಯಾಯಾಲಯಕ್ಕೆ ಒಯ್ದಾಗ ಅದು ಅದನ್ನು ವಿಚಾರಣೆಗೆ ತೆಗೆದುಕೊಳ್ಳುತ್ತದೆ. ಅನ್ಯಾಯವೆಸಗಿದನೆನ್ನಲಾದವನ ಹೇಳಿಕೆಯನ್ನು ಆ ಬಗ್ಗೆ ತೆಗೆದುಕೊಂಡು ಪರಾಮರ್ಶಿಸಿ ನೋಡುತ್ತದೆ. ಆ ಬಳಿಕ ದೂರು ಕೊಟ್ಟವನು ಸಾಕ್ಷ್ಯದ ಮೂಲಕ ತನಗಾದ ಹಕ್ಕಿನ ಅತಿಲಂಘನೆಯ ಬಗ್ಗೆ ವಿವರವನ್ನು ಸಲ್ಲಿಸಬೇಕು. ನ್ಯಾಯಾಲಯವು ತನ್ನ ಮುಂದಿನ ಪ್ರಕರಣವನ್ನು ಹಾಗೆ ಎರಡೂ ಪಕ್ಷದವರಿಂದ ಹಾಜರು ಪಡಿಸಲಾಗುವ ಮೌಖಿಕ ಮತ್ತು ದಸ್ತಾವೇಜೀಯ ಸಾಕ್ಷ್ಯದ ಆಧಾರದ ಮೇಲೆ ನಿರ್ಧರಿಸುತ್ತದೆ. ಮತ್ತು ಸೂಕ್ತವೆನಿಸಿದ ಪರಿಹಾರವನ್ನು ಪಕ್ಷಕಾರರಿಗೆ ಕೊಡುತ್ತದೆ.



# ಸರ್ ಮಾರ್ಕ್ ಕಬ್ಬನ್:

# 'ಸಸ್ಯಕಾಶಿಯ' ಸೃಷ್ಟಿಕರ್ತ

ಇಪ್ಪತ್ತೊಂದನೇ ಮಾರ್ಚ್ ೧೮೬೬ರ 'ಬೆಂಗಳೂರು ಹೆರಾಲ್ಡ್' ಸಂಚಿಕೆಯ ಮೇಲ್ಪುಟದಲ್ಲಿ ಪ್ರಕಟಗೊಂಡ ವರದಿಯೊಂದು ಹೀಗಿದೆ, "ಅಂದು ಶುಕ್ರವಾರ: ಸಮಯ ಐದೂವರೆ. ಸಾವಿರಾರು ಮಂದಿ ಸ್ಥಳೀಯರು ಮತ್ತು ಯುರೋಪಿಯನ್ನರು ಸರ್ಕಾರಿ ಕಾರ್ಯಾಲಯ ಕಟ್ಟಡ 'ಅಟ್ಟಾರ ಕಚೇರಿ' (ಈಗ ಹೈಕೋರ್ಟ್) ಮುಂದೆ ಸೇರಿದ್ದರು. ಕಬ್ಬನ್ ಸ್ಮಾರಕ ಸಮಿತಿಯ ಕಾರ್ಯದರ್ಶಿ ಸಿ.ಪಿ. ಟಾಯ್ಲರ್ ನೆರೆದವರನ್ನು ಸ್ವಾಗತಿಸಿ,

• ಎಸ್. ನಾರಾಯಣಸ್ವಾಮಿ

ಪ್ರಾಸ್ತಾವಿಕ ಭಾಷಣ ಮಾಡಿದರು. ಮೈಸೂರಿನ ಕಮೀಷನರ್ ಹಾಗೂ ಸಮಿತಿಯ ಅಧ್ಯಕ್ಷರಾದ ಬೌರಿಂಗ್ ಅವರನ್ನು ಪ್ರತಿಮೆ ಅನಾವರಣಗೊಳಿಸುವಂತೆ ಕೋರಲಾಯಿತು...."

ಆ ಪ್ರತಿಮೆ ಯಾರದು ಬಲ್ಲಿರಾ?

ಅವರೇ ಸರ್ ಮಾರ್ಕ್ ಕಬ್ಬನ್.

ಬೆಂಗಳೂರಿನಲ್ಲಿ ಸರ್ ಕಬ್ಬನ್ ಅವರ ಹೆಸರಿನ ಅನೇಕ ಸ್ಮಾರಕಗಳಿವೆ. ಈ ಶತಮಾನವನ್ನೇ ಕಾಣದ, ಆದರೆ ಅತ್ಯಂತ ಹೆಚ್ಚು ಗೌರವಾದರಗಳನ್ನು ಗಳಿಸಿ ಜನತೆಯನ್ನು ಪ್ರೀತಿಯಿಂದ ಕಾಣುತ್ತಿದ್ದ ನಿಸ್ಪೃಹ ಯೂರೋಪಿಯನ್ ಈ ಕಬ್ಬನ್.



ಕಬ್ಬನ್ ಪಾರ್ಕ್, ಕಬ್ಬನ್‌ಪೇಟೆ, ಕಬ್ಬನ್ ರಸ್ತೆ, ಹೈಕೋರ್ಟ್ ಕಟ್ಟಡದ ಎದುರು ಭಾಗದಲ್ಲಿ ಇರುವ ಕಬ್ಬನ್ ಪ್ರತಿಮೆ, ರಾಜಭವನದ ಬಳಿ ಪರಾಗ್ ಹೊಟೇಲ್ ಪಕ್ಕದಲ್ಲಿ ಇರುವ ಕಬ್ಬನ್ ಲಾಡ್ಜ್, ನಗರ ಪೊಲೀಸ್ ಕಮೀಷನರ್ ಅವರ ಕಚೇರಿ ಪಕ್ಕದಲ್ಲಿದ್ದ ಕಬ್ಬನ್ ಹೊಟೇಲ್ ನಂದಿ ಬೆಟ್ಟದ ಮೇಲಿರುವ ಕಬ್ಬನ್ ಹೌಸ್... ಹೀಗೆ ಒಂದೇ, ಎರಡೆ, ಎಲ್ಲೆಲ್ಲೂ ಕಬ್ಬನ್ ಸ್ಮಾರಕಗಳಿವೆ.

ನಗರದ ಹೈಗ್ರೌಂಡ್ಸ್ ಪ್ರದೇಶದಲ್ಲಿ ಇರುವ 'ಬಾಲಬ್ರೂಯಿ' ಬಂಗಲೆಯನ್ನು ನಿರ್ಮಿಸಿದವರೂ ಇವರೇ. ಆದರೆ ದಶಕಗಳುರುಳಿದಂತೆ ಕಬ್ಬನ್ ಅವರ ಹೆಸರೂ ಜನರ ಮನಸ್ಸಿನಿಂದ ಮರೆಯಾಗಿದೆ. ಕಬ್ಬನ್ ಒಂದು ಬರಿಯ ಆಕರ್ಷಕ ರೂಢನಾಮವೇ ಆಗಿಬಿಟ್ಟಿದೆ.

ಮೈಸೂರು, ಬೆಂಗಳೂರು ನಗರಗಳಲ್ಲಿ ಅಪಾರ ಜನ ಮನ್ನಣೆ ಗಳಿಸಿ ದುಃಖದಿಂದಲೇ ಅಗಲಿ ಹೋದ ಕಬ್ಬನ್, ಯಾರು, ಎಲ್ಲಿದ್ದರು, ಏಕಿದ್ದರು, ಅವರ ಜೀವನ ಎಂತಹುದು...ಇವುಗಳ ಬಗ್ಗೆ ಇಲ್ಲಿ ಸ್ವಲ್ಪ ನೋಡೋಣ.

ಸರ್ ಮಾರ್ಕ್ ಕಬ್ಬನ್ ೧೮೩೪ ರಿಂದ ೧೮೬೧ರವರೆಗೂ ಮೈಸೂರು ರಾಜ್ಯದ ಚೀಫ್ ಕಮೀಷನರ್ ಆಗಿದ್ದವರು. ಮೈಸೂರು ರಾಜ್ಯಕ್ಕೆ ಅವರು ಸಲ್ಲಿಸಿದ ಸೇವೆ, ಅವರಿಗಿದ್ದ ಜನಪ್ರಿಯತೆ ಎಷ್ಟೆಂದು ಹೇಳಲು ಈ ಮೇಲೆ ತಿಳಿಸಿದ ಸ್ಮಾರಕಗಳೇ ಸಾಕು.

೧೭೮೫ರಲ್ಲಿ ಬ್ರಿಟಿಷ್ ದ್ವೀಪಗಳಲ್ಲಿ ಒಂದಾದ ಮ್ಯಾನ್‌ನ ಮೌಗೋಲ್ಡ್ ಗ್ರಾಮದಲ್ಲಿ ರೆವರೆಂಡ್ ಥಾಮಸ್ ಕಬ್ಬನ್ ಅವರಿಗೆ ಏಳನೇ ಮಗನಾಗಿ ಮಾರ್ಕ್ ಕಬ್ಬನ್ ಜನಿಸಿದರು. ಬೆಟ್ಟಗುಡ್ಡಗಳನ್ನು ಹತ್ತುವುದರಲ್ಲಿಯೇ ಅಪಾರ ಚುರುಕುತನ ಹೊಂದಿದ್ದ ಕಬ್ಬನ್‌ಗೆ ಪ್ರಾಂತೀಯ ಶಾಲೆ ಮತ್ತು ನಂತರ ರೆವರೆಂಡ್ ಹ್ಯಾರಿ ಮ್ಯಾಡೆರೆಲ್‌ಗಳಲ್ಲಿ ವ್ಯಾಸಂಗ ಸಿಕ್ಕಿತು.

೧೮೦೧ರಲ್ಲಿ ಮಾರ್ಕ್ ಉದ್ಯೋಗವನ್ನು ಅರಸುತ್ತಾ ತಮ್ಮ ತಾಯ್ನಾಡನ್ನು ತೊರೆದರು. ಅವರ ಸುದೈವವೋ ಎಂಬಂತೆ, ಅವರ ಚಿಕ್ಕಪ್ಪ ಕರ್ನಲ್ ವಿಲ್ಸ್ ಮೈಸೂರು ರೆಜಿಮೆಂಟಿನಲ್ಲಿದ್ದರು.

ಚಿಕ್ಕಪ್ಪನ ವಶೀಲಿ ಮೇರೆಗೆ ಕಬ್ಬನ್‌ಗೆ ಮೈಸೂರು ರಾಜ್ಯದಲ್ಲಿ ಭಾರತೀಯ ಕೆಡೆಟ್ ಉದ್ಯೋಗ ಸಿಕ್ಕಿತು. ೧೬ ವರ್ಷದ ಕಬ್ಬನ್‌ಗೆ ಮೊದಲು ೨ನೇ ಮದ್ರಾಸ್ ಬೆಟಾಲಿಯನ್‌ನಲ್ಲಿ ನೌಕರಿ ಸಿಕ್ಕಿತು. ೧೮೦೪ರಲ್ಲಿ ಕರ್ನಲ್ ವಿಕ್ಸ್ ರೆಸಿಡೆಂಟ್ ಆಗಿ ಮೇಲೇರಿದಾಗಲೇ ಕಬ್ಬನ್‌ಗೆ ಮೈಸೂರು ರೆಸಿಡೆನ್ಸಿಯಲ್ಲಿ ಸುಲಭ ಪ್ರವೇಶ ಸಿಕ್ಕಿದ್ದು. ಅದೇ ವರ್ಷವೇ ಕಬ್ಬನ್ ೫ನೇ ಸ್ಥಳೀಯ ಕಾಲ್ದಳದ ೨ನೇ ಬೆಟಾಲಿಯನ್‌ಗೆ ನೇಮಕಗೊಂಡರು.

೧೮೧೧ರಲ್ಲಿ ಹುಣಸೂರಿನ ಮೋತಿಖಾನೆ ಇಲಾಖೆಗೆ ಕಬ್ಬನ್ ನಿಯೋಜಿತಗೊಂಡರು. ಮೋತಿಖಾನೆಯ ವರಿಷ್ಠಾಧಿಕಾರಿಯಾಗಿದ್ದ ಕರ್ನಲ್ ಮೋರಿಸನ್ ತಿರುವಾಂಕೂರು ರಾಜ್ಯದ ದಿವಾನರಾಗಿ ವರ್ಗ ಆಗುವುದರೊಂದಿಗೆ ತೆರವಾದ ಸಹಾಯಕ ಮೋತಿಖಾನೆ ಜನರಲ್ ಪದವಿ ಕಬ್ಬನ್‌ಗೆ ಸಿಕ್ಕಿತು.

೧೮೨೭ರಲ್ಲಿ ಮೋತಿಖಾನೆಯ ವರಿಷ್ಠಾಧಿಕಾರಿಯಾಗಿ ಕಬ್ಬನ್ ಬಡ್ತಿ ಹೊಂದಿದ. ಮೂರು-ನಾಲ್ಕು ವರ್ಷಗಳಲ್ಲಿ ಮೈಸೂರು ರಾಜ್ಯದಲ್ಲಿ ಒಂದು ಐತಿಹಾಸಿಕ ಘಟನೆ ನಡೆಯಿತು. ಸ್ಥಳೀಯ ವರಿಷ್ಠರು ಎಬ್ಬಿಸಿದ ಬಂಡಾಯದಿಂದಾಗಿ ರಾಜ್ಯ

ಅರಾಜಕತೆಗೆ ಸಿಲುಕುವಂತಾಯಿತು. ದಂಗೆ ಅಡಗಿಸಲಾಗದ್ದಕ್ಕೆ ಮಹಾರಾಜ ಕೃಷ್ಣರಾಜ ಒಡೆಯರ್ ಅವರನ್ನು ಹೊಣೆಗಾರರನ್ನಾಗಿ ಮಾಡಿ ೧೮೩೧ರಲ್ಲಿ, ಅವರ ಅಧಿಕಾರವನ್ನು ಬ್ರಿಟಿಷ್ ಅಧಿಕಾರಿಯೊಬ್ಬರಿಗೆ ಹಸ್ತಾಂತರಿಸುವಂತೆ ಮಾಡಲಾಯಿತು. ಕರ್ನಲ್ ಮೋರಿಸನ್ ರಾಜ್ಯದ ಹಿರಿಯ ಕಮೀಷನರ್ ಆಗಿ ನೇಮಕಗೊಂಡರೆ ಕಬ್ಬನ್ ಕಿರಿಯ ಕಮೀಷನರ್ ಆಗಿ ಮೇಲ್ದರ್ಜೆಗೇರಿದರು.

ದಕ್ಷ ಮತ್ತು ನಿಷ್ಠುರ ಆಡಳಿತಗಾರರಾಗಿದ್ದ ಕರ್ನಲ್ ಮೋರಿಸನ್, ಗವರ್ನರ್ ಜನರಲ್ ಅವರ ವಿಶೇಷ ಪ್ರೀತ್ಯಾದರಗಳನ್ನು ಗಳಿಸಿದ್ದರು. ೧೮೩೩ರಲ್ಲಿ ಮೋರಿಸನ್ ಕಲ್ಕತ್ತಾದ ಗವರ್ನರ್ ಜನರಲ್ ಮಂಡಳಿಗೆ ನೇಮಕಗೊಂಡರು. ತೆರವಾದ ಸ್ಥಾನ ತುಂಬುವ ಅನಿವಾರ್ಯತೆ ಬಂದೆರಗಿದಾಗ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕ್ ಅವರ ಮುಂದೆ ಮೂರು ಹೆಸರುಗಳು ಅನುಮೋದನೆಯ ಕೃಪೆಗೆ ಕಾದು ಕುಳಿತಿದ್ದವು.

ಈ ಮೂರು ಮಂದಿ ದಕ್ಷರಲ್ಲಿ ಬೆಂಟಿಂಕ್ ಸರ್ ಮಾರ್ಕ್ ಕಬ್ಬನ್ಸ್ ಅವರನ್ನು ಮೈಸೂರು ರಾಜ್ಯದ ಏಕೈಕ ಕಮೀಷನರ್ ಆಗಿ ನೇಮಿಸಿದರು.

ಅಪಾರ ದಕ್ಷತೆ ಮತ್ತು ಚಿಂತನೆ ಹೊಂದಿದ್ದ ಕಬ್ಬನ್, ರಾಜ್ಯದ ಅಧಿಕಾರಶಾಹಿ ವ್ಯವಸ್ಥೆಯನ್ನು ಬಲಪಡಿಸಿ, ತೆರಿಗೆ ಸಂಗ್ರಹಣೆಗೆ ಶಕ್ತಿ ನೀಡಿದರು. ಬೆಂಗಳೂರಿನಲ್ಲಿ ಚೀಫ್ ಕಮೀಷನರ್ ಅವರ ಕಚೇರಿ ಇದ್ದ ಕಾರಣ, ಈ ಎಲ್ಲ ಸಮಗ್ರ ಆಡಳಿತ ಬದಲಾವಣೆಗಳಿಂದಾಗಿ ಬೆಂಗಳೂರಿಗೇ ಹೆಚ್ಚಿನ ಲಾಭ ಸಿಕ್ಕಿತು.

ಕಬ್ಬನ್ ರಾಜ್ಯದ ಹಿತ ಕಾಯುವ



ಕಬ್ಬನ್ ಪ್ರತಿಮೆಯ ಪಾರ್ಶ್ವ ನೋಟ

ಸಲುವಾಗಿ ಕೈಗೊಂಡ ಹಲವು ಸುಧಾರಣಾ ಕ್ರಮಗಳಲ್ಲಿ ಕೆಲವು ಇಂತಿವೆ.

೧೮೩೩ರಲ್ಲಿ ಕಬ್ಬನ್ ಬೆಂಗಳೂರು ಪಟ್ಟಣದಲ್ಲಿ ಸೆಂಟ್ರಲ್ ಸ್ಕೂಲ್ ಸ್ಥಾಪಿಸಿದರು. ವೆಸ್ಲಿನ್ ಮಿಷನ್ ಶಾಲೆಗೆ ಮಾಸಿಕ ರೂ. ೫೦ ಅನುದಾನ ಮಂಜೂರು ಮಾಡಿದರು. ೧೮೪೨ರಲ್ಲಿ ಅವರು ಮೊಟ್ಟಮೊದಲ ಸರ್ಕಾರಿ ಮುದ್ರಣಾಲಯವನ್ನು ಬೆಂಗಳೂರು ಕೋಟೆಯಲ್ಲಿ ಪ್ರಾರಂಭಿಸಿದರು.

ಕಬ್ಬನ್ ಕಮೀಷನರ್ ಆಗುವುದಕ್ಕೂ ಮುಂಚೆ ಮೈಸೂರಿನಲ್ಲಿ ಒಂದೇ ಒಂದು ಆಸ್ಪತ್ರೆ ಇತ್ತು. ಕರ್ನಲ್ ಕಬ್ಬನ್ ೧೮೩೯ರಲ್ಲಿ ಮೊಟ್ಟಮೊದಲ ಸಾರ್ವಜನಿಕ ಆಸ್ಪತ್ರೆಯನ್ನು ಬೆಂಗಳೂರು ಕೋಟೆಯಲ್ಲಿ ಕಟ್ಟಿಸಿದರು.

ಸುತ್ತಮುತ್ತಲಿನ ಪ್ರದೇಶಗಳಿಂದ ಬೆಂಗಳೂರಿಗೆ ಕಡಿಮೆ ವೆಚ್ಚದ ಆದರೆ ಉತ್ತಮವಾದ ರಸ್ತೆಗಳನ್ನು ಕಬ್ಬನ್ ನಿರ್ಮಿಸಿದ್ದರಿಂದ ಬೆಂಗಳೂರಿಗೆ ಬರುವ ವಾಹನಗಳ ಸಂಖ್ಯೆ ಹೆಚ್ಚಿತು. ಜೊತೆಗೆ ಸಂವಹನವೂ ಬಲಿಷ್ಠಗೊಂಡಿತು.

ಉಕ್ಕಡ ಸುಂಕವನ್ನು ರದ್ದುಪಡಿಸುವುದರಲ್ಲಿ ಕಬ್ಬನ್ ತೋರಿದ ವಿವೇಚನೆಯಿಂದಾಗಿ ನಗರಕ್ಕೆ ಬರುತ್ತಿದ್ದ ತೋಟಗಾರಿಕಾ ಉತ್ಪನ್ನಗಳ ಪ್ರಮಾಣ ಹೆಚ್ಚಿತು.

ಜನತೆಯ ವಿವಾದಗಳನ್ನು ಆಲಿಸಿ, ವಿಮರ್ಶಿಸಿ, ತೀರ್ಪು ನೀಡುವ ನ್ಯಾಯಾಲಯಗಳು ಸ್ಥಾಪನೆಗೊಂಡವು. ಮಲೆನಾಡು ಪ್ರದೇಶಗಳಲ್ಲಿ ಹತ್ತಿ, ಹಣ್ಣು, ತರಕಾರಿ ಮತ್ತು ಕಾಫಿ ಮುಂತಾದ ವಾಣಿಜ್ಯ ಬೆಳೆ ತೆಗೆಯುವುದಕ್ಕೆ ಕಬ್ಬನ್ ನೀಡಿದ ಉತ್ತೇಜನ ಅಪಾರ.

ಬೆಂಗಳೂರಿನಲ್ಲಿ ಕಬ್ಬನ್ ಸ್ಥಾಪಿಸಿದ ಸರ್ಕಾರಿ 'ಸಸ್ಯಕಾಶಿ' ಇಂದು 'ಲಾಲ್‌ಬಾಗ್' ಎಂಬ ಹೆಸರು ಪಡೆದು ಪ್ರಖ್ಯಾತಿ ಗಳಿಸಿದೆ.

ಮೈಸೂರು ವ್ಯಾಪ್ತಿಯ ಪ್ರದೇಶವನ್ನು ಎಂಟು ಸರಳ ವಿಭಾಗಗಳಾಗಿ ವಿಂಗಡಿಸಿ ಆಡಳಿತ ಸುಸೂತ್ರವಾಗಿ ನಡೆಯುವಂತೆ ಮಾಡಿದ ವ್ಯಕ್ತಿ ಸರ್ ಕಬ್ಬನ್. ಸರ್ಕಾರಿ ಕಚೇರಿ ಮತ್ತು ನ್ಯಾಯಾಲಯಗಳಲ್ಲಿ ಭಾನುವಾರವನ್ನು ಕಡ್ಡಾಯ ರಜೆ ಎಂದು ಘೋಷಿಸಿದ್ದೂ ಅವರೇ.

ಕಬ್ಬನ್ ಮೈಸೂರು ಮಹಾರಾಜರ ಹೆಸರಿನಲ್ಲೇ ಆಡಳಿತ ನಡೆಸಿದರು. ಅವರು ಯಾವುದೇ ಸಂದರ್ಭದಲ್ಲೂ ಮಹಾರಾಜರೊಂದಿಗೆ ಎಂತಹುದೇ ರೀತಿಯ ಭಿನ್ನಾಭಿಪ್ರಾಯವನ್ನೂ ಹೊಂದಿರಲಿಲ್ಲ.

ಮಹಾರಾಜರನ್ನು ರಾಜ್ಯದ ಮಹಾಪೋಷಕರೆಂಬಂತೆಯೇ ಅವರು ಕಾಣುತ್ತಿದ್ದರು. ಅವರು ಮಹಾರಾಜರೊಂದಿಗೆ ಸೌಹಾರ್ದಯುತ ಸಂಬಂಧ ಹೊಂದಿದ್ದರಷ್ಟೇ ಅಲ್ಲ, ಎಷ್ಟೋ ಬಾರಿ ರಾಜ್ಯದ ಮತ್ತು ಮಹಾರಾಜರ ಒಳಿತಿನ ಸಲುವಾಗಿ ಕೇಂದ್ರ ಸರ್ಕಾರದೊಂದಿಗೂ ಜಗಳವಾಡಿದ ಉದಾಹರಣೆಗಳಿವೆ.

ಮೈಸೂರು ಆಳ್ವಿಕೆಯನ್ನು ಚಕ್ರಾಧಿಪತ್ಯದ ವ್ಯಾಪ್ತಿಯಿಂದ ಮದ್ರಾಸ್ ಸಂಸ್ಥಾನಕ್ಕೆ ಸೇರಿಸಿದಾಗ ಕಬ್ಬನ್, ಮಹಾರಾಜರ ಜೊತೆ ಕೈಗೂಡಿಸಿ ಕೇಂದ್ರದ ನಿರ್ಧಾರಕ್ಕೆ ತೀವ್ರ ಪ್ರತಿಭಟನೆ ವ್ಯಕ್ತಪಡಿಸಿ ತಮ್ಮ ಕಮೀಷನರ್ ಹುದ್ದೆಗೆ ರಾಜೀನಾಮೆ ನೀಡುವ ದಿಟ್ಟ ನಿಲುವನ್ನೂ ಕೈಗೊಂಡರು.

ಸರ್ ಕಬ್ಬನ್‌ರ ನಿಷ್ಠುರ ಧೋರಣೆಗೆ ಮಣಿದು ಗವರ್ನರ್ ಜನರಲ್ ತಮ್ಮ ಆದೇಶವನ್ನು ಹಿಂತೆಗೆದುಕೊಂಡು, ಆಡಳಿತ ವ್ಯವಸ್ಥೆಯನ್ನು ಮೊದಲಿನಂತೆಯೇ

# ಸ್ಪಷ್ಟ ದಿಕ್ಕಿನಲ್ಲಿ ದಿಟ್ಟ ಹೆಜ್ಜೆಗಳು

## ಹಣ್ಣೆಲೆಗಳು ಉದುರಿ ಮರಗಿಡಗಳಲ್ಲಿ ಹೊಸಚಿಗುರು ಸಂಭ್ರಮಿಸುವ ವಸಂತಕಾಲ ಈ ಯುಗಾದಿ

**ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತಿರುವ ಕರ್ನಾಟಕ ಹೊಸ ಸರ್ಕಾರ ದೃಢ ಹೆಜ್ಜೆಗಳನ್ನು ಇಡುತ್ತಿರುವ ಪರ್ವಕಾಲವಿದು ಹೌದು. ನುಡಿದಂತೆ ನಡೆವ ಶ್ರೀ ಹೆಚ್ ಡಿ. ದೇವೇಗೌಡರ ನೇತೃತ್ವದ ಈ ಸರ್ಕಾರ ಅನುಷ್ಠಾನಕ್ಕೆ ತಂದಿರುವ ಯೋಜನೆಗಳು ಹತ್ತು ಹಲವು.**

**ರಿಯಾಯಿತಿ ದರದಲ್ಲಿ ಅಕ್ಕಿ:** ಹಸಿರು ಪಡಿತರ ಚೀಟಿ ಹೊಂದಿರುವ 52 ಲಕ್ಷ ಕುಟುಂಬಗಳಿಗೂ ಕೆ.ಜಿ.ಗೆ ರೂ. 3.20 ರ ರಿಯಾಯಿತಿ ದರದಲ್ಲಿ ಅಕ್ಕಿ ಪೂರೈಕೆ. ಕೊಟ್ಟ ಮಾತಿನಂತೆ ಬೇವು-ಬೆಲ್ಲ ಸವಿಯುವ ಶುಭದಿನದಿಂದ ಈ ಯೋಜನೆಯ ಆರಂಭ.

**ಕುಡಿಯುವ ನೀರು:** ಕುಡಿಯುವ ನೀರು ಪೂರೈಕೆಗೆ ಈ ವರ್ಷ ಹೆಚ್ಚಿನ ಆದ್ಯತೆ. ಹಿಂದಿನ ವರ್ಷಕ್ಕಿಂತ ಶೇ. 19.8 ರಷ್ಟು ಹೆಚ್ಚಿನ ಅನುದಾನ. ಬಿರು ಬೇಸಿಗೆಯಲ್ಲಿ ನೀರಿನ ಸಮಸ್ಯೆಯ ಪರಿಹಾರಕ್ಕೆ ಈಗಾಗಲೇ ರೂ. 104 ಕೋಟಿ ಬಿಡುಗಡೆ. ಅಗತ್ಯವಿದ್ದೆಡೆ ಕೊಳವೆ ಬಾವಿ ಕೊರೆಯಲು ಆದೇಶ.

**ಆರೋಗ್ಯ ನಿಧಿ:** ಆಧುನಿಕ ಚಿಕಿತ್ಸಾ ಸೌಲಭ್ಯಗಳನ್ನು ಬಡಜನರಿಗೂ ವಿಸ್ತರಿಸಲು ಒಂದುನೂರು ಕೋಟಿ ರೂ.ಗಳ 'ಆರೋಗ್ಯ ನಿಧಿ' ಸ್ಥಾಪನೆ. ಸರ್ಕಾರದಿಂದ ಈ ನಿಧಿಗೆ ಹತ್ತು ಕೋಟಿ ರೂ. ವಂತಿಗೆ. ಹೃದ್ರೋಗ ಕ್ಯಾನ್ಸರ್, ನ್ಯೂರೋಸರ್ಜಿಕಲ್ ಕಾಯಿಲೆಗಳು, ಮೂತ್ರಪಿಂಡ ಸಂಬಂಧಿತ ರೋಗಪೀಡಿತ ಬಡಜನರಿಗೆ ಈ ನಿಧಿಯಿಂದ ನೆರವು.

**ಆಧಾರ:** ನಾಲ್ಕು ಲಕ್ಷಕ್ಕೂ ಹೆಚ್ಚಿರುವ ಅಂಗವಿಕಲರಿಗಾಗಿ 'ಆಧಾರ' ಯೋಜನೆ ಅನುಷ್ಠಾನ, ಈ ವರ್ಷ ಒಂದು ಸಾವಿರ ಅಂಗಡಿಗಳನ್ನು ಆರಂಭಿಸಲು ಅಂಗವಿಕಲರಿಗೆ ಪ್ರತಿಯೊಂದು ಅಂಗಡಿಗೂ 10 ಸಾವಿರ ರೂ. ನೆರವು. ಇದಕ್ಕಾಗಿ ಒಂದು ಕೋಟಿ ರೂ.ಗಳ ನಿಗದಿ. ಅಂಗವಿಕಲರಿಗಾಗಿಯೇ ದುಡಿಯುತ್ತಿರುವ ಸ್ವಯಂ ಸೇವಾ ಸಂಘ- ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಲು 50 ಲಕ್ಷ ರೂ. ಅನುದಾನ.

**ಜನತಾ ದರ್ಶನ:** ಜನತೆಯ ಸಂಕಷ್ಟಗಳಿಗೆ ಮುಖ್ಯ ಮಂತ್ರಿಗಳಿಂದ ನೇರ ಸ್ಪಂದನ. ಸಮಸ್ಯೆಗಳ ಪರಿಹಾರಕ್ಕೆ ಮುಖ್ಯಮಂತ್ರಿಗಳಿಂದಲೇ ಅಹವಾಲು ಸ್ವೀಕಾರ. ಹಲವು ಸಮಸ್ಯೆಗಳಿಗೆ ಉಚಿತ ಪರಿಹಾರ.

**ವಸತಿ:** ದುರ್ಬಲ ವರ್ಗದವರಿಗೆ ಒಂದು ಲಕ್ಷ ಮನೆಗಳ ನಿರ್ಮಾಣ. ಫಲಾನುಭವಿಗಳ ಆಯ್ಕೆಗಾಗಿ ಹೊಸ ಸೂತ್ರ.

**ನೀರಾವರಿ:** ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಲು ಕ್ರಮ. 'ಕೃಷ್ಣಾ ಭಾಗ್ಯ ಜಲನಿಗಮ' ಸರ್ಕಾರದ ಅನುದಾನ ಹಾಗೂ ಬಂಡವಾಳ ಮಾರುಕಟ್ಟೆಯಿಂದ ಸಾಲ ಪಡೆದು ಬಂಡವಾಳ ಪೂರೈಕೆ.-

**ರಾಜ್ಯ ಯುವ ಪರಿಷತ್ತು:** ಯುವಜನ ಶಕ್ತಿಯನ್ನು ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗಿಸುವ ಸಲುವಾಗಿ ಪರಿಷತ್ತಿನ ಸ್ಥಾಪನೆ. ಇದಕ್ಕಾಗಿ 5 ಕೋಟಿ ರೂ.ಗಳ ಅನುದಾನ.

**ಶಿಕ್ಷಣ:** 12000 ಶಾಲಾ ಕೊಠಡಿಗಳ ನಿರ್ಮಾಣ. ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ತೀರ್ಮಾನ.

**ಆಡಳಿತ ವಿಕೇಂದ್ರೀಕರಣ:** ಜನತೆ ತೋರಿರುವ ಒಲವಿಗೆ ಪ್ರತಿಯಾಗಿ ಜನತೆಗೆ ಅಧಿಕಾರ ನೀಡುವ ಪಂಚಾಯತ್ ವ್ಯವಸ್ಥೆಯ ಬಲವರ್ಧನೆ. ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತ್‌ಗಳಿಗೆ ನಿಗದಿಪಡಿಸಿದಂತೆ ಮಾರ್ಚ್-95 ರಲ್ಲಿ ಚುನಾವಣೆ ನಡೆಸಿದ ಸಂತಸ.

**"ನುಡಿದಂತೆ ನಡೆಯುತ್ತಿರುವ ಸರ್ಕಾರ,
ಜನತೆಗೆ ಯುಗಾದಿ ಶುಭಾಶಯಗಳು"**

**ಕರ್ನಾಟಕ ವಾರ್ತೆ**

ಸ್ಥಾಪಿಸಿದರು.

೧೮೩೪ ರಿಂದ ೧೮೬೧ರವರೆಗೂ ೨೭ ವರ್ಷಗಳ ಕಾಲ ಎಲ್ಲ ಬಗೆಯ ನೋವುಗಳನ್ನೂ ಸಹಿಸಿ, ವಿದೇಶಿ ನೆಲವಾದ ಮೈಸೂರಿನಲ್ಲಿ ಆಡಳಿತ ನಡೆಸಿದ ಜನಾನುರಾಗಿ ಕಬ್ಬನ್.

೧೮೬೧ರಲ್ಲಿ ತೀವ್ರ ಖಾಯಿಲೆಗೆ ಗುರಿಯಾದ ಜನರಲ್ ಕಬ್ಬನ್ ರಾಜೀನಾಮೆ ನೀಡಬೇಕಾದ ಅನಿವಾರ್ಯತೆ ಬಂದೊದಗಿತು. ಅವರ ರಾಜೀನಾಮೆ ನಿರ್ಧಾರ ಮಹಾರಾಜರಿಗೆ ಬರಸಿಡಿಲಿನ ವಾರ್ತೆಯಾಗಿತ್ತು. ಕಬ್ಬನ್‌ರನ್ನು ಭೇಟಿ ಮಾಡಬಯಸಿದ ಮಹಾರಾಜರ ಇಚ್ಛೆ ಕಬ್ಬನ್‌ರ ತೀವ್ರ ಅನಾರೋಗ್ಯದ ಕಾರಣ ಕೈಗೂಡಲಿಲ್ಲ. ಕಬ್ಬನ್ ಭಾರತ ಬಿಟ್ಟು ತನ್ನ ತಾಯ್ನಾಡಿನಲ್ಲಿ ವಿಶ್ರಾಂತಿ ಪಡೆಯಲು ನಿರ್ಧರಿಸಿದ್ದರು. ಹಾಗಾಗಿ ಅವರು ೧೬ನೇ ಮಾರ್ಚ್ ೧೮೬೧ ರಂದು ಭಾರವಾದ ಹೃದಯದಿಂದ ಬೆಂಗಳೂರು ಬಿಟ್ಟರು. ರಾಜ್ಯದ ಜನರು ಅವರಿಗೆ ಕಂಬನಿಯ ಬೀಳ್ಕೊಡುಗೆ ನೀಡಿದರು.

ಸುಮಾರು ೬೦ ವರ್ಷಗಳ ಹಿಂದೆ ಬಿಟ್ಟ ತಾಯ್ನಾಡನ್ನು ಮತ್ತೆ ಕಾಣಬೇಕೆಂಬ, ಅಲ್ಲೇ ನೆಲೆಸಬೇಕೆಂಬ ಉತ್ಕಟೇಚ್ಛೆ ಕಬ್ಬನ್‌ರಿಗೆ ಈ ೭೮ರ ಹರೆಯದಲ್ಲಿ ಉಂಟಾಗಿತ್ತು. ವಯೋವೃದ್ಧ ಕಬ್ಬನ್‌ಗೆ ಬೆಂಗಳೂರು ಮತ್ತು ಪ್ರೀತಿಯ ತಂಗಿಯ ಸವಿನೆನಪುಗಳೇ ಸಾಕಾಗಿದ್ದವು.

ನಿರ್ಲಕ್ಷ್ಯದಿಂದ ಇಷ್ಟು ದಿನ ಬಂದು ನೋಡದೇ ಇದ್ದುದಕ್ಕಾಗಿ ಕ್ಷಮಿಸುವಂತೆ ಕೋರಿ, ಹಡಗು ಮಾಲ್ಟಾದಲ್ಲಿ ಉಳಿದಾಗ ತನ್ನನ್ನು ಬಂದು ಕಾಣುವಂತೆ ಕಬ್ಬನ್ ತನ್ನ ಸೋದರಿ ಎಲಿಜಬೆತ್ ಕಬ್ಬನ್‌ಗೆ ಪತ್ರವೊಂದನ್ನು ಬರೆದರು.

೨೮ನೇ ಎಪ್ರಿಲ್ ೧೮೬೧ರಲ್ಲಿ ಕಬ್ಬನ್ ಸೂಯೆಜ್‌ನಲ್ಲಿ ಮರಣಿಸಿದುದರಿಂದ ಸೋದರಿಯನ್ನು ಕಾಣುವ ಅವರ ಆಸೆ ಕೈಗೂಡಲೇ ಇಲ್ಲ. ಡಾ. ಕ್ಯಾಂಪ್‌ಬೆಲ್, ಕಬ್ಬನ್‌ರ ದೇಹವನ್ನು ಅವರ ಹುಟ್ಟೂರಿಗೆ ಕೊಂಡೊಯ್ದರು. ಮೌಗೋಲ್ಡ್‌ನಲ್ಲಿ 'ಕಬ್ಬನ್' ದೇಹವನ್ನು ಸಮಾಧಿ ಮಾಡಲಾಯಿತು.

ಮೈಸೂರಿನಲ್ಲಿ ದುಡಿದು ತಾಯ್ನಾಡಲ್ಲಿ ಮಡಿದ ಈ ದಿಟ್ಟ ವ್ಯಕ್ತಿ ಕಬ್ಬನ್‌ರ ಸ್ಮರಣೆ ಇಂದಿಗೂ ಅನನ್ಯ. ಭಾರತದ ಇತಿಹಾಸ ಪುಟಗಳಲ್ಲಿ ಕಬ್ಬನ್‌ಗೇ ವಿಶಿಷ್ಟ ಸ್ಥಾನ. ಸೋದರನ ಬಗ್ಗೆ ಮೈಸೂರು ರಾಜ್ಯದ ಜನರಿಟ್ಟಿದ್ದ ಪ್ರೀತಿ ಅಭಿಮಾನಗಳ ಕುರುಹಾಗಿ ಎಲಿಜಬೆತ್ ಕಬ್ಬನ್ ರ್‍ಯಾಂಸೆ ಪಟ್ಟಣದಲ್ಲಿ ಕಾಟೇಜೊಂದನ್ನೂ ನಿರ್ಮಿಸಿ ಅದಕ್ಕೆ 'ಮೈಸೂರು ಕಾಟೇಜ್' ಎಂದು ಹೆಸರಿಟ್ಟಿದ್ದಾರೆ.

ರ್‍ಯಾಂಸೆಗೆ ಹೋಗುವ ಯಾವುದೇ ಮೈಸೂರು ರಾಜ್ಯದ ವ್ಯಕ್ತಿಗೂ, ವಿಶೇಷ ಸತ್ಕಾರ-ಮರ್‍ಯಾದೆಗಳನ್ನು ಅಲ್ಲಿನ ಜನ ತೋರುತ್ತಾರೆ.

ಇದು ಕಬ್ಬನ್ ಮತ್ತು ಮೈಸೂರು ನಡುವಣ ಪ್ರೀತಿಯ ಸಂಕೇತ. ●

---

*ಕಟ್ಟಿಗೆ ಸೀಳುವ ಮೊದಲು ಕೊಡಲಿಯ ಹರಿತವನ್ನು ಪರೀಕ್ಷಿಸಿಕೋ.*

**– ನೈಜೀರಿಯದ ನಾಣ್ಣುಡಿ**

*ಆರಾಧನೆ ಅಂದರೇನು? ವಾಸ್ತವವನ್ನು ಅರಿತುಕೊಳ್ಳುವ ಪ್ರಕ್ರಿಯೆ.*

**– ಅನ್ಸಾರಿ**

---

# ಮಂಕುಬುದ್ಧಿಯ ಮಹಾಕಲಾವಿದ

**ಮ್ಯಾ**ಕ್ಸ್ ರ್‍ಯಾಪ್ಲರ್ ಎಂಬಾತ ಬರೆದ ವರ್ಣಚಿತ್ರಗಳು ಅದು ಹೇಗೋ ಮ್ಯೂನಿಕ್ಕಿನ ಲಲಿತಕಲಾ ಅಕಾಡೆಮಿಯ ಪ್ರೊ. ರಾತ್ ಅವರ ಕೈಗೆ ಬಂದಾಗ, "ಎಲಎಲಾ! ಇಂಥಾ ಅನುಪಮ ಚಿತ್ರಗಾರ ನಮ್ಮಲ್ಲೇ ಇದ್ದದ್ದು ಇಷ್ಟು ದಿನ ಗೊತ್ತೇ ಇರಲಿಲ್ಲವಲ್ಲ!" ಎಂದು ಅವನ್ನೆಲ್ಲ ಆಗ ಹಾಲಂಡಿನಲ್ಲಿ ನಡೆಯುತ್ತಿದ್ದ ಪ್ರದರ್ಶನಕ್ಕೆ ಕೊಟ್ಟು ಕಳಿಸಿದರು. ಕಲಾವಿಮರ್ಶಕರಿಂದ ಅಲ್ಲಿಯೂ ಪ್ರಶಂಶಿಸಲ್ಪಟ್ಟ ಅವು ತಲಾ ೩೦ ಸಾವಿರ ರೂಪಾಯಿಗಳಂತೆ ಮಾರಾಟವಾದವು.

ಇಂಥಾ ಅದ್ಭುತ ಕಲಾವಿದನನ್ನು ಕಾಣಬೇಕೆಂಬ ತವಕದಿಂದ ಪ್ರೊ. ರಾತ್ ಅವನಿರುತ್ತಿದ್ದ ಗ್ರೈಫೆನ್‌ಬರ್ಗಿಗೆ ಹೋದಾಗ ಆಶ್ಚರ್ಯದೊಟ್ಟಿಗೆ ನಿರಾಶೆಯೂ ಕಾಯ್ದಿತ್ತು. ಅದೊಂದು ತೀರಾ ಚಿಕ್ಕದಾದ, ಗಾಳಿ-ಬೆಳಕಿನ ವ್ಯವಸ್ಥೆಯೂ ಸರಿಯಾಗಿರದ ಹಳೆಗಾಲದ ಮನೆ. ಒಳಗೆ ಮಾರಿಯಾ, ಫ್ಯಾನಿ ಎಂಬಿಬ್ಬರು ಮುದುಕಿಯರು. ಒಬ್ಬಾತ ಮಂಕುಬಡಿದಂತೆ ಮೂಲೆಯಲ್ಲಿ ಕುಳಿತುಕೊಂಡಿದ್ದ. ಪ್ರೊ. ರಾತ್, "ಮ್ಯಾಕ್ಸ್ ರ್‍ಯಾಪ್ಲರ್ ಎಲ್ಲಿ?" ಎಂದು ಕೇಳಿದಾಗ ಆ ಮುದುಕಿಯರು ಅವನನ್ನು ತೋರಿಸಿದರು. ಚಿಕ್ಕಂದಿನಲ್ಲಿ ಯಾವುದೋ ರೋಗ ಬಂದು ಅವನಿಗೆ ಮಂಕುಕವಿಯಿತೆಂದೂ ತಂದೆ-ತಾಯಿಗಳು ತೀರಿಕೊಂಡ ನಂತರ ಅವನನ್ನು ನೋಡಿಕೊಳ್ಳಲು ಬೇರೆ ಯಾರೂ ಇರದ್ದರಿಂದ ತಾವೇ ನೋಡಿಕೊಳ್ಳುತ್ತಿರುವುದಾಗಿಯೂ ಕಾಲ ಕಳೆಯಲು ಆತ ಚಿತ್ರ ತೆಗೆಯುತ್ತಿರುವುದಾಗಿಯೂ ಆ ಮುದುಕಿಯರು ಹೇಳಿದರು.

"ಹಾಗಾದರೆ ಆತ ತೆಗೆದ ಚಿತ್ರಗಳೆಲ್ಲಿ?" ಪ್ರೊ. ರಾತ್ ಕೇಳಿದರು. ಫ್ಯಾನಿ ಹಾಗೂ ಮಾರಿಯಾ ಅಲ್ಲಲ್ಲಿ ಬಿದ್ದುಕೊಂಡಿದ್ದ ಕೆಲವನ್ನು ಹೆಕ್ಕಿ ತಂದುಕೊಟ್ಟರು. ಒಂದೊಂದೂ ಅದ್ಭುತ ಕಲಾಕೃತಿಯಾಗಿತ್ತು. "ಉಳಿದ ಚಿತ್ರಗಳೆಲ್ಲಿ?" ಪ್ರೊ. ರಾತ್ ಕೇಳಿದರು. "ಅವೆ? ಆ ಕಪಾಟಿನ ಮೇಲೆ ಪೇರಿಸಿಟ್ಟಿದ್ದೆವು. ಮನೆ ಸ್ವಚ್ಛ ಮಾಡುವಾಗ ಇವುಗಳನ್ನು ಇಟ್ಟುಕೊಂಡು ಏನು ಮಾಡುವುದೆಂದು ಬೆಂಕಿಗೆ ಎಸೆದೆವು," ಅವರಲ್ಲೊಬ್ಬಾಕೆ ಹೇಳಿದಳು.

"ಬೆಂಕಿಗೆಸೆದಿರಾ? ಎಂತಹ ಹುಚ್ಚರು ನೀವು! ಪ್ರದರ್ಶನದಲ್ಲಿ ಮಾರಿದ್ದರೆ ಇಪ್ಪತ್ತು ಇಪ್ಪತ್ತೈದು ಕೋಟಿಯಷ್ಟಾದರೂ ಹಣ ಬರುತ್ತಿತ್ತು," ಅಂದರು ಪ್ರೊ. ರಾತ್ ಸಿಟ್ಟಿನಿಂದ.

"ಇಪ್ಪತ್ತು ಇಪ್ಪತ್ತೈದು ಕೋಟಿಗಳೆ!" ಇಬ್ಬರ ಬಾಯಿಯಿಂದಲೂ ಏಕಕಾಲಕ್ಕೆ ಒಂದೇ ಉದ್ಗಾರ ಹೊರಬಿತ್ತು. ಕಡುಬಡತನದಲ್ಲಿ ಬೇಯುತ್ತಿದ್ದ ಆ ಮುದುಕಿಯರ ಕಣ್ಣುಗಳಿಂದ ತಂತಾನೆ ಎರಡು ಹನಿಗಳು ಪಟಪಟ ಕೆಳಗುರುಳಿದವು. ಈಗ ಅವರಿಗೆ ಬವಳಿ ಬರುವುದೊಂದೇ ಬಾಕಿಯಿತ್ತು.

• ಎಂ. ದೀಪಾ

# ಮಾತು-ಮಾಣಿಕ್ಯ

೧೯

# ಕೈಯು ಕೈವಾಡ

ನಮ್ಮ ಬಾಳಿನಲ್ಲಿಯ ಎಲ್ಲ ಆಗು ಹೋಗುಗಳ ಹಿಂದೆ ಕಾಣದ ಕೈಯೊಂದು ಉಂಟೆಂದು ಕೆಲವರ ತಿಳಿವಳಿಕೆ. ಕೈಲಾಗದವರು ಆಡುವ ನುಡಿ ಇದೆಂದು ಮತ್ತಿತರರ ಮೂದಲಿಕೆ. ಕೈಲಾದಷ್ಟು ಜಾಗ್ರತೆ ವಹಿಸಿದರೂ ತುಂಬಿದ ಕೊಡ ಕೈ ಜಾರಿ ಕೆಳಕ್ಕೆ ಕುಪ್ಪಳಿಸುವುದಲ್ಲ! ಇದಕ್ಕೆ ಏನನ್ನುವಿರಿ?– ಮೊದಲಿನವರ ಮರುಸವಾಲು. ಕೈ ತುಂಬ ಹಣವಿದ್ದು, ನೀರಿನಂತೆ ಸುರಿದರೂ ಬದುಕಿ ಉಳಿಯಬೇಕಾಗಿದ್ದ ವ್ಯಕ್ತಿ ಕೈ ಬಿಟ್ಟು ಹೋಗುತ್ತದೆ. ಸಾಕಷ್ಟು ಎಚ್ಚರವಹಿಸಿ ವಾಹನ ನಡೆಸುವಾಗ ನಡುದಾರಿಯಲ್ಲಿಯೇ ಕೈ ಕೊಡುತ್ತದೆ. ಇಲ್ಲವೆ ಅಪಘಾತಕ್ಕೆ ಗುರಿಯಾಗುತ್ತದೆ. ಇವೆಲ್ಲ ಕೈ ಬೆರಳು ಮಾಡಿ ತೋರಿಸುವುದು ಏನನ್ನು? ಕಾಣದ ಕೈಯೊಂದರ ಕೈವಾಡವನ್ನು ತಾನೆ?

ಅದೃಷ್ಟ, ದೈವ, ವಿಧಿ ಎಂಬುವುಗಳೆಲ್ಲ ಕಾಣದ ಕೈಯ ಪರ್ಯಾಯ ಪದಗಳು. ನಾವೆಲ್ಲ ಅದರ ಕೈಗೊಂಬೆಗಳು. ಅದರ ಕಠೋರ ಕಟ್ಟುಪಾಡುಗಳಿಗೆ ದೇವಾಧಿದೇವತೆಗಳು ಕೂಡ ಕೈವಶ. ಭರ್ತೃಹರಿ ಬಣ್ಣಿಸಿದಂತೆ ಸಾಕ್ಷಾತ್ ಬ್ರಹ್ಮನು ಕುಂಬಾರನ ಕಾಯಕವನ್ನು ಕೈಕೊಂಡ. ವಿಷ್ಣುವೋ ಮತ್ಸ್ಯ, ಕೂರ್ಮ, ವರಾಹಾದಿ ದಶವಿಧ ಅವತಾರಗಳನ್ನು ಕೈಗೆತ್ತಿಕೊಂಡು ಎಂದೂ ತನಗಿಲ್ಲದ ಜಂಜಾಟದಲ್ಲಿ ಸಿಲುಕಿಕೊಂಡ. ಶಿವನಾದರೋ ಕಪಾಲರೂಪದ ತಿರುಪೆಯ ಪಾತ್ರೆಗೆ ಕೈ ಚಾಚಿದ. ಹೀಗಿರುವಾಗ ಹುಲುಮಾನವನ ಬಗೆಗೆ ಹೇಳುವುದೇನು?

ಒಂದಲ್ಲ ಎರಡು ಕೈಗಳು ಕಾಯಕ್ಕೆ ಅಂಟಿಕೊಂಡು ಬಂದವುಗಳು. ಕಣ್ಣಿಗೆ ಕಾಣುವಂತಹವು. ಎಲ್ಲವೂ ಕಾಣದ ಕೈಯಿಂದ ನಿಯಂತ್ರಿತವಾದರೆ ಕಾಣುವ ಕೈಗಳದೇನು ಕೆಲಸ? ಹೊತ್ತು ಹೊತ್ತಿಗೆ ಊಟ ಮಾಡುವುದೆ? ಬೇಕಾಗಿಯೋ ಬೇಡವಾಗಿಯೋ ದುಡಿದು ದಣಿವುದೆ? ಪ್ರಸಂಗಬಂದಾಗ ಏಟು ಕೊಡುವುದೇ? ಅವಕಾಶ ದೊರೆತರೆ ಅನ್ಯರಿಗೆ ಕೈ ಕೊಡುವುದೆ? ಕೈಗಳು ದುಡಿಮೆಯ ಸಂಕೇತ. ಕೈಯೊಡ್ಡಿ ಬೇಡುವುದಕ್ಕಲ್ಲ. ಅವರಿವರ ಎದುರು ದೈನ್ಯದಿಂದ ಯಾಚಿಸಿ ಕೈಗಡ ಪಡೆದು ಮರಳಿಕೊಡಲಾಗದೆ ಕೈ ಕೈ ಹಿಸುಕಿಕೊಳ್ಳಲಿಕ್ಕಲ್ಲ. ಅವು ಬರಿದೆ ಬಳೆ ತೊಡುವುದಕ್ಕೂ ಅಲ್ಲ. ಕಂಕಣ ಅವುಗಳ ನಿಜವಾದ ಭೂಷಣವಲ್ಲ. ''ದಾನೇನ ಪಾಣಿರ್ನತು ಕಂಕಣೇನ" ಮತ್ತು ''ದಾನಂಕೆ ಹಸ್ತಭೂಷಣಂ" ಎಂಬ ಸೂಕ್ತಿಗಳು ಸಾರುವಂತೆ ''ಕೊಡುವುದೇ" ಕೈಗಳಿಗೆ ಚೆಂದ. ಬದುಕಿನ ಸಾರ್ಥಕತೆಯು ಕೊಡುವುದರಲ್ಲಿಯೇ ಹೊರತು ಪಡೆದುಕೊಳ್ಳುವುದರಲ್ಲಿ ಅಲ್ಲ.

ಕೊಡುವ ಕ್ರಿಯೆ ಹಲವು ಬಗೆಯದು. ದುಃಖಿತರಿಗೆ ಸಾಂತ್ವನದ ಉಕ್ತಿ, ಸಂತ್ರಸ್ತರಿಗೆ ಸಕ್ರಿಯ ಸಹಾನುಭೂತಿ, ಅನಾಥರಿಗೆ ಆತ್ಮೀಯ ಪ್ರೀತಿ, ಭಯಗ್ರಸ್ತರಿಗೆ ನಿರ್ಭೀತಿ. ಹೀಗೆ ನೀಡುವುದರಿಂದ ಜೀವನ ಪಾವನ. ಅನ್ಯರನ್ನು ಕೈ ಬೀಸಿ ಕರೆದು, ನೆರಳು, ಹೂವು, ಹಣ್ಣು ಹಂಪಲಗಳನ್ನು ಕರುಣಿಸುವ ಗಿಡಮರಗಳ ಬದುಕು ಸಾರ್ಥಕ ಜೀವಿತಕ್ಕೆ ಒಂದು ಕೈಗನ್ನಡಿ!

ಮನುಜ ಜೀವನದ ಮಹದೈಸಿರಿ ಅರಿತುಕೊಳ್ಳಲು, ವ್ಯಾಸವಿರಚಿತ ಮಹಾಭಾರತ ಒಂದು ಕೈಪಿಡಿ.

ದೈವಾನುಗ್ರಹದಿಂದ ಜನಿಸಿದವರೆಂದು ಖ್ಯಾತರಾದರೂ ದೈವ ಪಾಂಡವರನ್ನು ಎಳೆತನದಿಂದಲೆ ಕೈತೊಳೆದು ಕೊಂಡು ಬೆನ್ನುಹತ್ತಿದಂತಿತ್ತು. ನೀರೊಳಗೆ ಮುಳುಗಿಸುವುದು, ವಿಷಾನ್ನವುಣಿಸುವುದು, ಒಂದೇ ಎರಡೇ ಎಲ್ಲದಕ್ಕೂ ಶಿಖರವಿಡುವಂತೆ ಅರಗಿನರಮನೆಯ ಹಗರಣ ಬೇರೆ. ತಾಯಿಯೊಂದಿಗೆ ಐವರು ಅಂದೇ ಬೆಂದು ಬೂದಿಯಾಗ ಬಹುದಿತ್ತು. ಆದರೆ ಕಾಣದ ಕೈಯೊಂದು ಅವರಿಗೆ ಕಾವಲಾಗಿತ್ತು. ವಿದುರನ ಸಾಂಕೇತಿಕ ಮಾತು ಸಕಾಲದಲ್ಲಿ ಎಚ್ಚರಿಸಿತ್ತು. ಯುಧಿಷ್ಠಿರನ ಧೀಶಕ್ತಿ, ಭೀಮನ ಭುಜಬಲ ಆ ಕಾಣದ ಕೈಯ ಕರೆಯನ್ನು ಅನುಸರಿಸಿದುದರಿಂದ ಕೂದಲೆಳೆ ಕೂಡ ಕೊಂಕದಂತೆ ಅವರೆಲ್ಲ ಸುರಕ್ಷಿತ.

• ಪ್ರೊ. ಶ್ರೀನಿವಾಸ ತೋಫಖಾನೆ

ಈಗ ಪಾಂಡವರ ರಾಜಸೂಯ ಯಾಗ, ಮಯ ನಿರ್ಮಿತ ಸಭಾಭವನ ಕಣ್ಣಿಗೊಂದು ಹಬ್ಬ. ಅಲ್ಲಿಯ ವೈಚಿತ್ರ್ಯಗಳಿಂದಾಗಿ ದುರ್ಯೋಧನ ಪಟ್ಟ ಫಜೀತಿ ಹೇಳಲಾಸಲ್ಲ. ಬಿದ್ದ ಆ ಪೆಟ್ಟಿಗಿಂತ ನಕ್ಕ ಪೆಟ್ಟು ಹೆಚ್ಚಿನದು. ಹೆಂಗಳೆಯರ ಮಧ್ಯದಲ್ಲಿದ್ದ ದ್ರೌಪದಿ ಖೊಳ್ಳೆಂದು ನಕ್ಕು ಆಡಿದ ನುಡಿಯಿಂದ ಆತನು ಅವಮಾನಿತನಾದ; ಸಿಡಿಮಿಡಿಗೊಂಡ. ಯಜ್ಞದ ಪ್ರತಿಯೊಂದು ಹಂತದಲ್ಲಿ ಹಾಸುಹೊಕ್ಕಾಗಿದ್ದ ಅಭೂತಪೂರ್ವ ವೈಭವವನ್ನು ವೀಕ್ಷಿಸಿ, ಮೊದಲೇ ಹೊತ್ತಿದ ಆತನ ಹೊಟ್ಟೆಯುರಿಗೆ ಮತ್ತೆ ತುಪ್ಪ ಸುರಿಸಿದಂತಾಯಿತು. ಕೈ ಕೈ ಹಿಸುಕಿಕೊಂಡ. ತಲೆಗೆ ಕೈ ಹಚ್ಚಿ ಕುಳಿತುಕೊಂಡ. ''ಪರಿತಪಿಸಬೇಡ; ಒಂದು ಕೈ ನೋಡಿಯೇ ಬಿಡೋಣ,'' ಎಂದು ಶಕುನಿ ಸಮಾಧಾನ ಹೇಳಿದ.

ಕೈ·ಬರಹದ ಓಲೆಯೊಂದು ಯುಧಿಷ್ಠಿರನ ಕೈ ಸೇರಿತು – ಲೆತ್ತದಾಟಕ್ಕೋಸುಗ ಹಸ್ತಿನಾವತಿಗೆ ಬರಬೇಕೆಂದು. ''ಒಲ್ಲೆ'' ಎನ್ನಲಾಗಲಿಲ್ಲ. ಆಟಕ್ಕೆ ಕುಳಿತರು. ದಾಳ ಒಗೆಯುವಲ್ಲಿನ ಶಕುನಿಯ ಕೈಚಳಕ ಕೇಳಬೇಕೆ? ವಿಧಿಯ ಕ್ರೂರ ಕೈವಾಡಕ್ಕಿಂತ ಒಂದು ಕೈ ಮೇಲಾದುದು. ಧನ–ಕನಕ, ಆಯುಧ–ಸಮುದಾಯ, ರಥ, ತುರಗ, ಗಜ, ಪದಾತಿಸಮುಚ್ಚಯ, ಸಮಸ್ತ ರಾಜ್ಯ, ಸ್ತ್ರೀ ಸಹ– ಹಿರಿಯ ಪಾಂಡವ ಒಂದೊಂದಾಗಿ ಎಲ್ಲವನ್ನೂ ಕಳೆದುಕೊಂಡ: ಕೈ ಬರಿದು ಮಾಡಿಕೊಂಡ. ತಮ್ಮಂದಿರ ಸಮೇತ ತಾನು ಈಗ ಕೌರವರ ಸ್ವತ್ತು. ತಮ್ಮ ಸತಿ ಅವರ ತೊತ್ತಿಗೆ ಸಮಾನ. ಅಣ್ಣನ ಕಣ್ಸನ್ನೆ, ಕೈ ಸನ್ನೆಯೇ ತಮ್ಮನಿಗೆ ಸಾಕಾಗಿತ್ತು. ಅದಕ್ಕನುಗುಣವಾಗಿ ದುಶ್ಯಾಸನ ಮಾನಿನಿಯ ಮುಡಿಗೆ ಕೈಹಾಕಿದ. ಸಲ್ಲದು, ಸಲ್ಲದು ಎಂಬ ಅವಳ ಸೊಲ್ಲಿಗೆ ಕಿವಿಗೊಡಲಿಲ್ಲ. ದರ ದರನೆ ಸಭೆಗೆ ಎಳೆತಂದ. ಥರಥರನೆ ನಡುಗುತ್ತಿದ್ದ ವನಿತೆಗೆ ಇಲ್ಲಿ ಕುಳಿತುಕೊಳ್ಳು ಎಂದು ಅಣ್ಣ ಕೈಯಿಂದ ತೊಡೆ ತಟ್ಟಿದ. ರಾಧೇಯ ಆಕಳು ಆಕಳು ಎಂದು ಕೈ ಬೆರಳು ಮಾಡಿ ತೋರಿದ. ಮುಡಿ ಹಿಡಿದ ಮುತ್ಸಾಳ ಮಹಿಳೆಯ ಉಟ್ಟ ಬಟ್ಟೆಯನ್ನು ಕಳಚಲೆಂದು ಸೊಂಟಕ್ಕೆ ಕೈ ಚಾಚಿದ. ''ಹುಶಾರ್'' ಎಂದು ಫೂತ್ಕರಿಸಿದಳು ನಾಗಿಣಿ. ಪ್ರಯೋಜನವಾಗಲಿಲ್ಲ. ಕೈ ಹಿಡಿದ ಐವರು ಗಂಡಂದಿರೆದುರಿನಲ್ಲಿಯೇ ಈ ಅವಾಂತರ. ಅವರೋ ಕೈ ಕಟ್ಟಿ ಕುಳಿತಿದ್ದರು. ಕೈಲಾಗದವರೇ ಅವರು? ಊರ ಅಗಸೆಯ ಬಾಗಿಲಿನ ಅಗಳಿಗೆ ಸರಿಸಮಾನವಾದ ಕೈತೋಳು ಭೀಮನದು. ಅಬಲೆಯ ಮೇಲೆ ಕೈ ಮಾಡಿದ ದುರುಳನನ್ನು ಅವನೊಬ್ಬನೆ ಸೀಳಿ ಹಾಕಬಹುದಿತ್ತು. ಆದರೆ ಆ ಬಲಶಾಲಿಯ ಕೈ ಕಟ್ಟಿಹೋಗಿತ್ತು. ಅಣ್ಣನಾಣತಿ ಇಲ್ಲದೆ, ಅವನು ಯಾವುದಕ್ಕೂ ಕೈ ಹಾಕುವವನಲ್ಲ. ಧನುರ್ವಿದ್ಯೆಯಲ್ಲಿ ಅರ್ಜುನನ ಕೈಹಿಡಿದವರೇ ಇರಲಿಲ್ಲ. ಅವನ ಸ್ಥಿತಿಯು ಭೀಮನ ಸ್ಥಿತಿಗಿಂತ ಬೇರೆಯಾಗಿರಲಿಲ್ಲ.

ಶಿಷ್ಟರ ಸಮ್ಮುಖದಲ್ಲಿ ಜರುಗುತ್ತಿರುವ ದುಷ್ಟ ಕೃತ್ಯವನ್ನು ದಿಟ್ಟ ಉಕ್ತಿಗಳಿಂದ ಖಂಡಿಸಲು ಬಲಗೈಯ ತರ್ಜನಿಯನ್ನು ವಿಜೃಂಭಿಸಿದವನು ಒಬ್ಬನೇ ಒಬ್ಬ-- ಪ್ರಜ್ಞಾವಂತ ವಿದುರ. ಆತ ನಿಜಕ್ಕೂ ಸದ್ಧರ್ಮದ ಕೈವಾರಿ, ಸನ್ಮಾರ್ಗದ ಕೈ ದೀವಿಗೆ.

ಮುಂದುವರೆದಿತ್ತು ದುರಾತ್ಮನ ದುಸ್ಸಾಹಸ. ತನ್ನ ಇಷ್ಟಾರ್ಥ ಕೈಗೂಡಲೆಂದು ದಣಿವಿಲ್ಲದ ಹೆಣಗಾಟ ಒಂದೆಡೆ. ಇನ್ನೊಂದೆಡೆ ಇನ್ನಾರೂ ತನ್ನ ಮಾನರಕ್ಷಣೆಗೆ ಒದಗಲಿಲ್ಲವೆಂಬ ಅವಳ ಮುನಿಸಿನ ಚೀರಾಟ; ತನ್ನನ್ನು ತಾನೆ ಕಾಪಾಡಿಕೊಳ್ಳಲು ಅವಿರತ ಹೋರಾಟ. ದುಷ್ಟನ ಕೈಯಿಂದ ಬಿಡಿಸಿಕೊಳ್ಳುವುದು ಕಡು ಕಷ್ಟ. ಪ್ರಸಂಗ ಕೈಮೀರಲಿತ್ತು. ಅಬಲೆಗೆ ತನ್ನ ಯತ್ನವೆಲ್ಲ ನಿಷ್ಫಲವೆಂದೆನಿಸಿತು. ಸೆಳೆಯಲಾಗುತ್ತಿದ್ದ ಸೀರೆಯನ್ನು ಅದರ ಪಾಡಿಗೆ ಬಿಟ್ಟಳು– ಕಾಳಗದಲ್ಲಿ ಸೋತವನು ಎರಡೂ ಕೈಗಳನ್ನೆತ್ತಿ ಪ್ರಾಣ ಭಿಕ್ಷೆ ಯಾಚಿಸುವಂತೆ. ತನ್ನ ಮಾನ ರಕ್ಷಣೆಗಾಗಿ ಮುಗಿಲಿನತ್ತ ಕೈಗಳನ್ನೆತ್ತಿದಳು. ''ನೀನೇ ಅನಾಥ ಬಂಧು; ಕಾರುಣ್ಯಸಿಂಧು!'' ಎಂದಳು. ಏನಚ್ಚರಿ! ಅಂಬರದ ಆಚೆಗಿನ ವಿಶ್ವಂಭರನ ದಿವ್ಯ ಕರಗಳಿಂದ ಇಳಿದು ಬಂದಿತ್ತು ''ಅಕ್ಷಯಾಂಬರ.'' ತುಂಬಿದ ಸಭೆಯೆದುರು ದಿಗಂಬರೆಯಾಗಲಿದ್ದವಳಿಗೆ ಮೈತುಂಬ ಬಟ್ಟೆ ಹೊದಿಸಿ ಕಾಪಾಡಿತ್ತು ಆ ಸರ್ವಸಾಕ್ಷಿ, ಸರ್ವಶಕ್ತನಾದವನ ಕಾರುಣ್ಯದ ಕೊಡುಗೆ. ದುರುಳ ಸೆಳೆದಂತೆಲ್ಲ ಸೀರೆ ರಾಶಿರಾಶಿಯಾಗಿ ಬಿದ್ದುಕೊಂಡಿತ್ತು. ಕೈ ಸೋತು ಸುಣ್ಣಾಗಿತ್ತು. ಹೆಣ್ಣಿಗೆ ಕಣ್ಣೀರು ತರಿಸಿದ ಕ್ರೂರಿಯ ಕಾಡುವ ಕೈ ದೂರ ಸರಿದಿತ್ತು! ದಯಾಮಯನ ಕಾಣದ ಕೈ ಆರ್ತಳ ಕಂಬನಿ ಒರೆಸಿ, ತನ್ನ ಕೈವಲ್ಯವನ್ನು ಮೆರೆದಿತ್ತು!

(೧೧)



# ಎಕ್ಸ್-ರೇ ಕಣ್ಣಿನ ಮನುಷ್ಯ!

• ಗೋವಾ

ರಾತ್ರಿಗೆ ರಂಗೇರುತ್ತಿತ್ತು. ಆಕೆಗೋ ಎಲ್ಲಿಲ್ಲದ ಖುಷಿ. ಪೀಟರನನ್ನು ಆಹ್ವಾನಿಸಿ ಅದ್ಭುತ ಶಕ್ತಿ ಪ್ರದರ್ಶನವನ್ನು ಏರ್ಪಡಿಸಲು ನಿರ್ಧರಿಸಿದ್ದು ಒಳ್ಳೆಯದೇ ಆಯಿತೆಂದುಕೊಂಡಳು.

ಕುಳಿತಲ್ಲೇ ಕುಳಿತಿದ್ದ ಪತಿ ಬಹುದಿನಗಳ ನಂತರ ಗೆಲುವಾಗಿದ್ದ. ಮಿತ್ರರು ಔತಣ ಕೂಟಕ್ಕೆ ಬಂದದ್ದು ಒಂದು ಸಂತೋಷವಾದರೆ ಆ ಭೇಟಿಯ ಕ್ಷಣಗಳನ್ನು ಇನ್ನಷ್ಟು ಮಧುರವನ್ನಾಗಿಸಲು ಎಕ್ಸ್-ರೇ ಕಣ್ಣಿನ ಮನುಷ್ಯನನ್ನು ಬರಮಾಡಿಕೊಂಡದ್ದು ಮತ್ತೊಂದು ವಿಶೇಷ.

ಹಾಲೆಂಡಿನ ಅತ್ಯಂತ ಶ್ರೀಮಂತ-ದೇಶಭಕ್ತ-ಪ್ರತಿಷ್ಠಿತ ವ್ಯಕ್ತಿಯ ಪತ್ನಿ ಶ್ರೀಮತಿ ಮೆವ್‌ರೌ ಆರ್. ಆಕೆ ಸ್ವತಃ ಪೀಟರ್‌ನ ಚಾಕಚಕ್ಯವನ್ನು ಕಂಡು ಅವಾಕ್ಕಾದವಳು. ಹೃದ್ರೋಗದಿಂದ ಮನೆಯಲ್ಲೇ ಹಾಸಿಗೆ ಹಿಡಿದು ಮಲಗಿದ್ದ ಗಂಡನ ಬೇಸರ ಕಳೆಯಲು ಆಕೆ ಮಾಡದ ಉಪಾಯಗಳಿಲ್ಲ, ಏರ್ಪಡಿಸದ ಕಾರ್ಯಕ್ರಮಗಳಿಲ್ಲ. ಒಂದು ರೀತಿಯಲ್ಲಿ ತಾನು ಜೀವಚ್ಛವವೇ ಎಂಬ ಭಾವನೆ ಗಂಡನಲ್ಲಿ ಬೆಳೆಯುತ್ತಿದ್ದುದನ್ನು ಗಮನಿಸಿದ್ದ ಆಕೆ ಡಾಕ್ಟರುಗಳ ಸಲಹೆಯಂತೆ ಇದನ್ನೆಲ್ಲ ಮಾಡುತ್ತಿದ್ದಳು. ಪೀಟರ್‌ನನ್ನು ಮುಖತಃ ಕಂಡು ಮಾತನಾಡಿ ಆ ದಿನದ ಕಾರ್ಯಕ್ರಮವನ್ನು ನಿಗದಿಪಡಿಸಿದ್ದಳು.

ಅಂದು ಬಂದವರೆಲ್ಲ ಅಪರೂಪದ ಅತಿಥಿಗಳು. ಆಕೆಯ ಗಂಡನ ಆತ್ಮೀಯ ಗೆಳೆಯರು. ತಂತಮ್ಮ ಧಂಧೆ-ವಹಿವಾಟುಗಳ ಗೊಂದಲದಲ್ಲಿ ಸಿಲುಕಿ ದೀರ್ಘಕಾಲದವರೆಗೆ ದೂರವೇ ಉಳಿದಿದ್ದವರು. ಅಂಥವರನ್ನೆಲ್ಲ ಪಟ್ಟಿಮಾಡಿ, ಫೋನ್ ಮೂಲಕ ಸಂಪರ್ಕಿಸಿ, ಅಂದಿನ ಔತಣಕೂಟಕ್ಕೆ ಬರುವಂತೆ ಮಾಡಿದ್ದ ಶ್ರೀಮತಿ ಮೆವ್‌ರೌ ಆರ್‌ಗೆ, ದೊಡ್ಡ ಮೊತ್ತದ ಗೌರವಧನ ನೀಡಿ ಪೀಟರ್‌ನನ್ನು ಕರೆಸಿದ್ದು ಮೋಸವಾಗಲಿಲ್ಲ ಎಂಬ ಸಮಾಧಾನ.

ಗ್ಲಾಸುಗಳು ತುಂಬಿಕೊಂಡಂತೆಯೇ ಇದ್ದವು. ತಟ್ಟೆಗಳಲ್ಲಿ ಇಟ್ಟ ಖಾದ್ಯ ವಸ್ತುಗಳು ಕರಗುವ ಸ್ಥಿತಿಯೂ ಇರಲಿಲ್ಲ.

ಪೀಟರ್ ಅವರನ್ನೆಲ್ಲ ಸೆರೆಹಿಡಿದು ಬಿಟ್ಟಿದ್ದ.

ಹಾಗೆ ನೋಡಿದರೆ ಆತ ಈ ಆಮಂತ್ರಣವನ್ನು ಒಪ್ಪಿಕೊಂಡದ್ದು ದೊಡ್ಡ ಮೊತ್ತದ ಕಾರಣಕ್ಕಾಗಿ ಮಾತ್ರ. ಒಳಗೊಳಗೇ ಸಂಶಯವೊಂದು ಇದ್ದೇ ಇತ್ತು- ಅಲ್ಲಿ ಬರುವವರೆಲ್ಲ ಅತಿ ಮಹತ್ವದ ಆಸಾಮಿಗಳು; ಇಂಥ ಕಾರ್ಯಕ್ರಮಗಳಲ್ಲೆಲ್ಲ ಆಸಕ್ತಿಯೇ ಇಲ್ಲದಂಥವರು; ಕೇವಲ ತಮ್ಮ ವೃತ್ತಿ-ಉದ್ಯಮಗಳಲ್ಲಿ ಇನ್ನೂ ಹೆಚ್ಚಿನ ಲಾಭಗಳಿಸುವ ದಾರಿಗಳ ಬಗ್ಗೆ ಪರಸ್ಪರ ವಿಚಾರ ವಿನಿಮಯಕ್ಕಾಗಿ ಇಂಥ ಔತಣಕೂಟಗಳ ಸಂದರ್ಭಗಳನ್ನು ಬಳಸಿಕೊಳ್ಳುತ್ತಿದ್ದವರು; ಇಂಥ ಕಾರ್ಯಕ್ರಮಗಳೆಲ್ಲ ಕೇವಲ ತಿರುಪೆದಾಸರಿಗಿಷ್ಟು

ಎಸರು-ಹಿಟ್ಟು ದೊರಕಿಸುವಂಥವೆಂಬ ತಾತ್ಸಾರ ಭಾವದವರು. ಅಂಥವರೆದುರು ತಾನು ತುಂಬ ಜಾಗರೂಕನಾಗಿರಬೇಕು. ಅಪ್ಪಿ-ತಪ್ಪಿಯೂ ಆ ದೊಡ್ಡವರ ಎದೆ ಧಸಕ್ಕೆನ್ನಿಸುವ ಯಾವ ಮಾತೂ ತನ್ನಿಂದ ಹೊರಬೀಳಕೂಡದು. ಹಾಗೇನಾದರೂ ಆದರೆ ಮುಂದೆಲ್ಲ ತೊಂದರೆ...

ಪ್ರದರ್ಶನ ರಾತ್ರಿ ಒಂಬತ್ತಕ್ಕೇ ಆದರೂ ಆ ಮಹಲಿಗೆ ಆತ ಒಂದು ಗಂಟೆ ಮುಂಚಿತವಾಗೇ ಬಂದು ತಲಪಿದ್ದ. ಪರಿಚಾರಕರು ತಾವು ದೊಡ್ಡವರ ಮನೆಯ ಆಳುಗಳು ಎಂಬುದನ್ನು ಮರೆತೇ ಈತನೊಂದಿಗೆ ವರ್ತಿಸಿದ್ದರು. ದೂರದಲ್ಲೆಲ್ಲಿಂದಲೋ ಆಗಾಗ ಹತ್ತಾರು ಗಂಡಸರ ನಗೆಯ ಅಲೆಗಳು ಬಂದು ಬಂದು ಪೀಟರ್‌ನನ್ನು ಅಪ್ಪಳಿಸುತ್ತಿದ್ದವು. ಉಳಿದಂತೆ ಒಂದು ರೀತಿ ಉಸಿರು ಗಟ್ಟಿಸುವ ವಾತಾವರಣ. ಪರಿಚಾರಕರು ಆತನನ್ನ ಒಂದೆಡೆ ಕುಳ್ಳಿರಿಸಿ ತಮ್ಮಿಂದಲೇ ಆ ಮನೆಯ ವ್ಯವಹಾರಗಳೆಲ್ಲ ನಡೆಯುತ್ತಿವೆ ಎಂಬಂತೆ ಅತ್ತಿತ್ತ ಓಡಾಡುತ್ತಿದ್ದರು.

"ನಾನು ಬಂದಿದ್ದೇನೆಂದು ಶ್ರೀಮತಿ ಮೆಪ್ ರೌಗೆ ಹೇಳು," ಎಂದದ್ದಕ್ಕೆ ತಟ್ಟನೆ ಆ ಪರಿಚಾರಕನಿಂದ,

"ಶ್, ಹೆಸರುಗೊಂಡು ಕರೆಯುತ್ತೀಯಾ? 'ಮೇಡಮ್' ಅನ್ನಬೇಕು.

ಥತ್, ಎಂಥೆಂಥಾ ಜನಾ ಬರ್ತಾರೋ..."

ಎಂಬ ಉತ್ತರ-ಉಪೇಕ್ಷೆಯ ನೋಟಗಳು ಬಂದಾಗ ಪೀಟರ್‌ನ ಮುಷ್ಟಿ ಬಿಗಿದುಕೊಂಡಿತು. 'ಲೇಯ್, ತುತ್ತು ಕೂಳಿಗೆ ಬಿದ್ದ ತೊತ್ತೇ.... ಎಂದು ಆತನ ಕೆನ್ನೆಗೊಂದು ಇಕ್ಕರಿಸಿಬಿಡಲೇ ಅಂದುಕೊಂಡಾತನಿಗೆ ವಿವೇಕ ಎಚ್ಚರಿಸಿತ್ತು.

ಮುಂದೆ ಒಂದು ಗಂಟೆ ಕಾಲ ಪೀಟರ್ ಆ ಮಹಲಿನ ಪೀಠೋಪಕರಣಗಳು, ಗೋಡೆಗಳಲ್ಲಿ 'ಕಾಣು'ತ್ತಿದ್ದ ಚಿತ್ರ-ವಿಚಿತ್ರ ವಿದ್ಯಮಾನಗಳನ್ನೇ ನೋಡುತ್ತ ಕುಳಿತ.

"ಹೂಂ.... ಬಾರಯ್ಯಾ ದೊರೆ.... ಮೇಡಂ ಕರೀತಿದ್ದಾರೆ..." ಆದೇ ಪರಿಚಾರಕ ವ್ಯಂಗ್ಯವಾಗಿ ಹೇಳಿದಾಗ ಆತನನ್ನು ಕಣ್ಣಲ್ಲೇ ನುಂಗುತ್ತ ಹಿಂಬಾಲಿಸಿದ.

ಏಳು ಬಾಗಿಲುಗಳನ್ನು ಹಾದು, ಎರಡು ಸಲ ಮೆಟ್ಟಿಲುಗಳನ್ನೇರಿ ಇಳಿದು ಸಾಗಿದಾಗ ಪೀಟರ್ ದೊಡ್ಡ ಹಾಲ್‌ನಲ್ಲಿ ಕಾಲಿರಿಸಿದ್ದ.

ಸುಮಾರು ಇಪ್ಪತ್ತೈದು ಜನ-ಅಲ್ಲಲ್ಲಿ ಇಬ್ಬರು ಮೂವರಂತೆ ಗುಂಪಾಗಿ ನಿಂತು-ಕೈಲಿದ್ದ ಗ್ಲಾಸನ್ನು ತುಟಿಗೆ ಅಂಟಿಸಿಕೊಂಡು ಏನೇನೋ ಮಾತಿನಲ್ಲಿ ತೊಡಗಿದ್ದರು. ಒಂದೆಡೆ ಗಾಲಿಕುರ್ಚಿಯಲ್ಲಿ ಕುಳಿತು ಮುಖದಲ್ಲಿ ಮಂದಹಾಸ ತಂದುಕೊಂಡ ಆ ಜನರತ್ತಲೇ ನೋಡುತ್ತಿದ್ದ ಮನೆಯ ಯಜಮಾನ. ಆಗೀಗ ಎದ್ದು ಎಲ್ಲರನ್ನೂ ಮಾತಾಡಿಸಿಕೊಂಡು, ನಡುನಡುವೆ ಪರಿಚಾರಕರಿಗೆ ಮೆಲುದ

"ಬಿಳಿ ಬತ್ತಿಗಳಲ್ಲ....
ಬಿಳಿ ಬಟ್ಟೆ ಹೊದಿಸಿದ
ಶವಗಳು......"

ನಿಯಲ್ಲಿ ಏನೇನೋ ಹೇಳುತ್ತ, ಗಂಡನ ಬಳಿ ಬಂದು, ನಗೆ ಚೆಲ್ಲಿ ಕೈ ಮುಟ್ಟಿ ಮತ್ತೆ ಬೇರೆಡೆ ಗಮನಿಸುತ್ತಿದ್ದ ಶ್ರೀಮತಿ ಮೆವ್‌ರೌ....

ಪೀಟರ್‌ನನ್ನು ಕಂಡವಳೇ, "ಓ... ಬನ್ನಿ.... ತುಂಬ ಕಾಯಿಸಿಬಿಟ್ರಿ. ಇವರೆಲ್ಲ ಈಗ 'ಸಿದ್ಧ'ರಾಗುತ್ತಿದ್ದಾರೆ," ಎಂದು ಆತನನ್ನು ಕರೆದುಕೊಂಡು ಎದುರಿನ ವೇದಿಕೆಯನ್ನೇರಿದಳು.

"ಮಹನೀಯರೇ, ಇವ್ರೇ ಮಿ.ಪೀಟರ್ ಹುರ್ಕೋಸ್.... ಇವತ್ತು ನಿಮ್ಮನ್ನೆಲ್ಲ ಅಚ್ಚರಿಗೀಡು ಮಾಡಲು ಬಂದವರು," ಎಂದು ಪರಿಚಯಿಸಿದಳು.

ಅವರೆಲ್ಲ ತನ್ನತ್ತ ತಣ್ಣಗಿನ ನೋಟ ಬೀರಿ, ಕಣ್ಣಲ್ಲೇ ಅಳೆದು ನೋಡಿ ಮತ್ತೆ ತಮ್ಮ ಮಾತುಕತೆಯಲ್ಲೇ ಮುಂದುವರಿದಾಗ, 'ಊಹುಂ, ಇಲ್ಲಿ ಕಾರ್ಯಕ್ರಮ ನೀಡಲಾರೆ ಮೇಡಮ್, ಕ್ಷಮ್ಸಿ' ಎಂದು ಹೇಳಿ ಹೊರಟುಬಿಡಲು ಯೋಚಿಸಿದ ಪೀಟರ್. ಆದರೆ ಅದು ಇನ್ನಷ್ಟು ಅಪಾಯಕಾರಿ ಎಂದುಕೊಂಡು ಸುಮ್ಮನೇ ನಿಂತ.

"ಬನ್ನಿ, ನಮ್ಮೆಜಮಾನರನ್ನು ಪರಿಚಯಿಸ್ತೇನೆ," ಶ್ರೀಮತಿ ಮೆವ್‌ರೌ ವೇದಿಕೆಯಿಳಿದು ಹೊರಟಳು. ಆಕೆಯನ್ನನುಸರಿಸಿದ ಪೀಟರ್‌ಗೆ ಆ ಜನರ ಎದೆಯೊಳಗೆ ಅಡಗಿ ಕುಳಿತ ವ್ಯಕ್ತಿಗಳೇ ಬೇರೆ.... ಈ ಮುಖಗಳೆಲ್ಲ ಕೇವಲ ಮುಖವಾಡಗಳು ಎಂದೆನಿಸಿತು.

"ಓಹ್.... ಬನ್ನಿ... ನೀವೇನಾ ಈಕೆ ಹೇಳ್ತಿದ್ದ ಅದ್ಭುತ ವ್ಯಕ್ತಿ... ಹೂಂ..." ಎಂದು ಔಪಚಾರಿಕ ನುಡಿಯಾಡಿದ ಯಜಮಾನನ ಸಿನಿಕ ಕಣ್ಣುಗಳಲ್ಲೇ ಕಣ್ಣು ನೆಟ್ಟ ಪೀಟರ್.

"ತುಂಬಾ ಚೆನ್ನಾಗಿರತ್ತೆ ಇವರ ಪ್ರದರ್ಶನ ಮೈ ಡಿಯರ್. ನಾನಂತೂ ದಂಗಾಗಿ ಹೋದೆ,"- ಶ್ರೀಮತಿ ಮೆವ್‌ರೌ ಮಧ್ಯೆ ಪ್ರವೇಶಿಸಿ ಆ ಕಣ್ಣುಗಳ ಕಾದಾಟವನ್ನು ತಪ್ಪಿಸಿದಳು. "ಹಾಂ, ಇನ್ನು ಕಾರ್ಯಕ್ರಮ ಶುರೂ ಮಾಡ್‌ಬಹುದಾ ಡಿಯರ್?" ಎಂದೆನ್ನುತ್ತ ಮತ್ತೆ ಪೀಟರ್‌ನನ್ನು ವೇದಿಕೆಯತ್ತ ಕರೆದೊಯ್ದಳು.

"ನನಗೊಬ್ಬ ಅಸಿಸ್ಟಂಟ್ ಬೇಕು ಮೇಡಮ್," ಪೀಟರ್ ವಿನಂತಿಸಿಕೊಂಡ.

"ಓಹೋ, ಅದಕ್ಕೇನಂತೆ," ಎಂದವಳೇ, "ಏಯ್, ಬಾಯಿಲ್ಲಿ ನೋಡು, ಇವ್ರಿಗೆ ಸ್ವಲ್ಪ ಸಹಾಯ ಮಾಡು," ಎಂದು ಆತನನ್ನೇ ಕರೆದಳು- ಪೀಟರ್‌ನನ್ನು ಏಳು ಬಾಗಿಲು ದಾಟಿಸಿಕೊಂಡು ಬಂದ ಆ ಪರಿಚಾರಕನನ್ನೇ.

ಗೊಣಗಿಕೊಂಡೇ ಬಂದು ವೇದಿಕೆಯೇರಿದ ಆತನ ಕೈ ಕುಲುಕಿ ಸ್ವಾಗತಿಸಿದ ಪೀಟರ್ ಒಂದು ಕ್ಷಣ ಆ ಕೈಯನ್ನು ಹಾಗೇ ಹಿಡಿದುನಿಂತ.

ಏನೇನೋ ಮಸುಕು-ಮಸುಕಾದ ಚಿತ್ರಗಳು. ಎಂಥೆಂಥವೋ ಆಯುಧಗಳು.... ಕೊಲೆ ಮಾಡುವುದರಲ್ಲಿ ಈತನ ಕೈಗಳು ನೆರವಾಗಿವೆಯೇ?

"ಛೆ, ನಾನೆಂಥವನ ಕೈ ಹಿಡಿದೆ!" ಪೀಟರ್‌ನ ಬಾಯಿಂದ ಹೊಮ್ಮಿದ್ದ ಮಾತು ಕೇಳಿ ಆ ಪರಿಚಾರಕ ತನ್ನ ಕೈ ಕೊಸರಿಕೊಂಡು ಮೆಟ್ಟಿಬಿದ್ದವನಂತೆ ಹಿಂದೆ ಸರಿದ.

"ಏನು? ಶಾಕ್ ಹೊಡೆಯಿತೆ?"

"ಇಲ್ಲಿಲ್ಲ, ನಿನ್ನ ಕೈ ನನ್ನ ಒಳಗೆಲ್ಲ ತಿರುಗಾಡಿ ಹೃದಯ, ಕರುಳುಗಳನ್ನೆಲ್ಲ ಹಿಂಡಿ ಹಿಪ್ಪೆ ಮಾಡಿದಂತೆನಿಸಿತು.

"ನಿನಗೆ ಹೃದಯವೂ ಇದೆಯೆ? ಕರುಳು ಎಂದೆಯಲ್ಲ.... ಅದೆಂದಾದರೂ ಚುರ್ರೆಂದದ್ದಿದೆಯೆ?"

ಪೀಟರ್‌ನ ಮಾತಿನಿಂದ ಆ ಪರಿಚಾರಕ ಮತ್ತಷ್ಟು ಗಾಸಿಗೊಂಡಂತಾದ. ಅತಿಥಿಗಳು ಅಷ್ಟಾಗಿ ಇನ್ನೂ ಆಟದಲ್ಲಿ ಮಗ್ನರಾಗಿರಲಿಲ್ಲ. ಹೀಗಾಗಿ ಅವರಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಆದರೆ ಉಳಿದ ಪರಿಚಾರಕರು ಮಾತ್ರ ಅಲ್ಲಿ ತಮ್ಮ ಒಡೆಯ-ಒಡತಿ ಹಾಗೂ ಗಣ್ಯರು ಇದ್ದಾರೆಂಬುದನ್ನೂ ಮರೆತು ಗಹಗಹಿಸಿ ನಕ್ಕರು.

"ನಾನು ನಿ.... ನಿಮ್ಮ ಕಣ್ಣುಗಳನ್ನು ನೋಡಲಾರೆ.... ನೀವು ಬೇರೆ ಅಸಿಸ್ಟಂಟನ್ನ ಕೇಳಿಕೊಳ್ಳಿ..." ಆ ಪರಿಚಾರಕ ವೇದಿಕೆಯಿಂದ ಇಳಿಯ ಹೊರಟಾಗ, ಪೀಟರ್ ಹೇಳಿದ,

"ನನ್ನ ಕಣ್ಣುಗಳನ್ನು ನೋಡಲೇ ಬೇಡ. ನಾನು ಹೇಳಿದಷ್ಟು ಮಾಡು ಸಾಕು. ಇಲ್ಲಿರುವ ಎಲ್ಲಾ ಮಹನೀಯರಿಂದ ಒಂದೊಂದು ವಸ್ತುವನ್ನು ಪಡೆದು ತಂದು ನನ್ನ ಕೈಗೊಪ್ಪಿಸು."

ಆತ ಅನಿವಾರ್ಯವೆಂಬಂತೆ ತಲೆಯಾಡಿಸಿದ.

"ಮಹನೀಯರೆ, ದಯವಿಟ್ಟು ನಿಮ್ಮಲ್ಲಿರುವ ಒಂದೊಂದು ವಸ್ತುವನ್ನು ಈತನಿಗೆ ಕೊಡಿ. ಪೆನ್ನಾಗಬಹುದು, ವಾಚಾಗಬಹುದು, ಜೇಬಿನಲ್ಲಿರುವ ಯಕಃಶ್ಚಿತ್ ಕಾಗದ ಚೂರೂ ನಡೆದೀತು.... ಪ್ಲೀಸ್. ಆ ಮೇಲೆ 'ಆಟ' ನೋಡಿ...." ವಿನಂತಿಸಿಕೊಂಡ ಪೀಟರ್.

ಪರಿಚಾರಕ ಒಟ್ಟಾಗಿಸಿ ತಂದ ಇಪ್ಪತ್ತಾರು ವಸ್ತುಗಳನ್ನೆಲ್ಲ ಪೀಟರ್ ಸಾಲಾಗಿ ಟೇಬಲ್ ಮೇಲಿಟ್ಟ. ಒಂದೊಂದನ್ನಾಗಿ ಮುಟ್ಟಿದಿಟ್ಟಿಸಿದ- ಆ ಸಿಗರೇಟ್ ಕೇಸ್ ಒಂದನ್ನು ಬಿಟ್ಟು. ಅವೆಲ್ಲ ತನಗೆ 'ತೋರಿಸಿದ್ದನ್ನು' ಇದ್ದ ಹಾಗೇ ಹೇಳಿಬಿಟ್ಟರೆ ಇವರು ತನ್ನನ್ನು ಒದ್ದೋಡಿಸುವುದು ಗ್ಯಾರಂಟಿ ಎನಿಸಿತು. ಹೌದು, ಇಲ್ಲಿ ತುಂಬ ಮಜವಾದ ಮಾತುಗಳನ್ನು ಹೇಳಬೇಕು. ಅದು ತನ್ನನ್ನೆ ತಾನು ವಂಚಿಸಿಕೊಂಡಂತೆ ಎನ್ನುವುದು ನಿಜವಾದರೂ ಬೇರೆ ದಾರಿಯೇ ಇಲ್ಲ.

ಆಯಾ ವ್ಯಕ್ತಿಯ ಇಷ್ಟ, ಪ್ರಿಯವಾದ ಆಟ, ಬಿಡುವಿನ ವೇಳೆಯ ಹವ್ಯಾಸ ಹೀಗೆ ತುಂಬ ಮೇಲ್ತೋರಿಕೆಯ ವಿಷಯಗಳನ್ನು ಹೇಳುತ್ತ 'ಆಟ'ಕ್ಕೆ ರಂಗೇರಿಸಿದ. ಒಬ್ಬೊಬ್ಬ ವ್ಯಕ್ತಿಯ 'ವಿಶೇಷ'ವನ್ನು ಹೇಳಿದಾಗಲೂ ಉಳಿದವರು "ಆಹಾ! ಎಷ್ಟು ಕರೆಕ್ಟಾಗಿ ಹೇಳ್ತಿದಾನೆ.... ನಮ್ಮೊಂದಿಗೇ ಬಹುದಿನಗಳಿಂದ ಇದ್ದವನ ಹಾಗೆ..." ಎಂಬ ಪ್ರಶಂಸೆಗಳಿಂದ ಪ್ರೋತ್ಸಾಹಿತನಾದ. ಅತಿಥಿಗಳೆಲ್ಲ ಇನ್ನೂ ತಂತಮ್ಮೊಳಗೇ ಮಾತು ಮುಂದುವರಿಸಿದ್ದಂತೆಯೇ,

"ಮಾನ್ಯರೆ, ಈಗ ಈ ಮನೆಯ ಒಡತಿಯ ಬಗೆಗೆ ಒಂದಷ್ಟು ಹೇಳಲೆ?" ಕೇಳಿದ.

ಪೀಟರ್‌ನ ಪ್ರಶ್ನೆ ಅಲ್ಲಿದ್ದವರನ್ನೆಲ್ಲ ಸುಮ್ಮನಾಗಿಸಿತು.

"ಹೂಂ.... ಹೇಳಯ್ಯಾ, ಹೇಳು.... ನನಗೆ ಗೊತ್ತಿರದಂಥ ಏನನ್ನು ಆಕೆಯ ಬಗ್ಗೆ ಹೇಳಬಲ್ಲೆ ನೀನು?" ಗಾಲಿ ಕುರ್ಚಿಯಲ್ಲಿ ಕುಳಿತಿದ್ದ ಯಜಮಾನ ವ್ಯಂಗ್ಯದಿಂದೆಂಬಂತೆ ಕೇಳಿದ.

"ಊಹೂಂ... ನಿಮಗೆ ಗೊತ್ತಿರದ್ದನ್ನೇನು ನಾನು ಹೇಳಿಯೇನು? ಶ್ರೀಮಂತರೆ, ನೀವೆ

> **ನಿಟ್ಟುಸಿರು**
>
> ಭಯದ
> ನಿಟ್ಟುಸಿರು
> ಅಗ್ನಿಯಾಗಿ ಸುಡುತಿದೆ
> ಉಭಯತರ
> ತನು–ಮನವನು
>
> ● ಶಂಕರ. ಮ. ಮುತ್ತಣ್ಣವರ

ಏನಾದರೂ ಕೇಳಿ... ಅದಕ್ಕೆ ಉತ್ತರ ಹೇಳುತ್ತೇನೆ..."

"ಹಾಗಾದರೆ ಹೇಳಯ್ಯಾ.... ಮುಂದಿನವಾರ ಬರಲಿರುವ ಆಕೆಯ ಬದುಕಿನ ಮಹತ್ತರ ಘಟನೆ ಯಾವುದು ಹೇಳು...."

"ಒಡೆಯಾ, ಅದು ನಿಮ್ಮ ಬದುಕಿನ ಮಹತ್ತರ ಘಟನೆ ಕೂಡ. ನಿಮ್ಮಿಬ್ಬರ 'ವಿವಾಹ ರಜತೋತ್ಸವ'...."

"ಇದರಲ್ಲೇನು ಮಹಾ? ಬಹುಶಃ ನನ್ನಾಕೆ ನಿನ್ನನ್ನು ಕಂಡಾಗ ಈ ಕುರಿತು ಹೇಳಿರಬೇಕು..."

"ಇಲ್ಲಿಲ್ಲ, ನಾನು ಪೀಟರ್ ಎದುರು ಈ ಕುರಿತು ಪ್ರಸ್ತಾಪಿಸಿಯೇ ಇಲ್ಲ" ಶ್ರೀಮತಿ ಮೆವ್‌ರಾ ಹೇಳಿಬಿಟ್ಟಳು.

"ಹಾಗಿದ್ದರೆ ಇಲ್ಲಿ ಬರುವ ಮುನ್ನ ಹೊರಗೆ ಕಾದು ಕುಳಿತಿದ್ದಾಗ ನಮ್ಮ 'ವಿವಾಹ ರಜತೋತ್ಸವ'ದ ಆಮಂತ್ರಣ ಪತ್ರ ಈತನ ಕಣ್ಣಿಗೆ ಬಿದ್ದಿರಬೇಕು...."

"ಇಲ್ಲಾ ಸಾರ್.... ಖಂಡಿತವಾಗಿಯೂ ಇಲ್ಲ. ಇದೆಲ್ಲ ನನಗೆ ಗೊತ್ತಾದದ್ದು ನೀವು ನಿಮ್ಮಾಕ್ಕೆಯ ಮೂಲಕ ನನಗೆ ಕಳಿಸಿದ ಈ ಸಿಗರೇಟ್ ಕೇಸಿನಿಂದ..."

"ಸಿಗರೇಟ್ ಕೇಸಿನಿಂದ! ಚೆನ್ನಾಗಿದೆ. ನೀನು ಹೇಳುವುದು ನಿಜವೇ ಆಗಿದ್ದರೆ ಆ ಸಿಗರೇಟ್ ಕೇಸು ನನ್ನ ಬಗ್ಗೆ ಏನೇನು ಹೇಳುತ್ತದೆ ಎಂಬುದನ್ನಿಷ್ಟು ಒದರು ಕೇಳೋಣ..."

"ಬೇಡ ಮಹನೀಯ.... ನಾನು ಹಾಗೆಲ್ಲ ಹೇಳಿಬಿಟ್ಟರೆ ಅದು ಈ 'ಸಂತೋಷಕೂಟ'ದ ಸೊಬಗನ್ನೇ ಕೆಡಿಸಿಬಿಟ್ಟೀತು. ಅಪ್ರಿಯ ಸತ್ಯವನ್ನು

ಹೇಳಲಾರೆ...."

"ಅಪ್ರಿಯ ಸತ್ಯವೆ? ನಿನ್ನಿಂದ ನಿಜ ಹೇಳು ವುದು ಸಾಧ್ಯವಿಲ್ಲ ಎಂಬುದನ್ನು ಮರೆಮಾಚಿಕೊಳ್ಳಲು ಈ ಮಾತು ಹೇಳುತ್ತಿದ್ದೀಯೇನು? ಲೋ, ಜುಜುಬಿ ಜಾದೂಗಾರ, ನಿಜಕ್ಕೂ ನಿನ್ನಲ್ಲಿ ಅದ್ಭುತ ಶಕ್ತಿ ಇದ್ದರೆ ಅದನ್ನು ಇಲ್ಲಿ ಸಾಬೀತುಪಡಿಸು. ಇಲ್ಲದಿದ್ದರೆ ಸುಮ್ಮನೇ ಸೋತು-ಶರಣಾಗಿ ನನ್ನ ಮನೆಯಲ್ಲಿ ಕಸಬಳಿಯುವ ಆಳಾಗಿರು..."

ಹಾಲೆಂಡಿನ ಹೆಮ್ಮೆ ಎನಿಸಿಕೊಂಡ ತನ್ನನ್ನು, ಜಗತ್ತಿನ ಅನೇಕ ದೇಶಗಳಿಗೆ ಪರಿಚಿತನಾಗಿರುವ ತನ್ನನ್ನು ಈ ರೀತಿ ಅವಮಾನಿಸುವುದೇ? ಅದೂ ನೆರೆದ 'ಗಣ್ಯ'ರ ಸಮ್ಮುಖದಲ್ಲಿ! ಆಯಿತು. ನಿಜವನ್ನು ಹೇಳಿಬಿಟ್ಟರಾಯಿತು ಎಂದು ಯೋಚಿಸಿದ ಪೀಟರ್ ಒಮ್ಮೆ ಶ್ರೀಮತಿ ಮೆವ್‌ರೌಳೆಡೆ ನೋಡಿದ. ಆಕೆ-ಬರುವ ವಾರ ತನ್ನ 'ವಿವಾಹ ರಜತೋತ್ಸವ' ಸಂದರ್ಭದಲ್ಲಿ ಮದುವೆಯ ಉಡುಗೆಯಲ್ಲಿ ಸಂಭ್ರಮಿಸಬೇಕಾದ ಆಕೆ-ಸೂತಕದ ದಿರಿಸು ತೊಟ್ಟಂತೆ ಕಂಡಿತು....

"ಹೇಳಯ್ಯಾ, ಆಕೆಯತ್ತ ಏನು ನೋಡುತ್ತಿ? ಹೂಂ..." ಮನೆಯ ಮಾಲಿಕ ಮತ್ತೆ ಚುಚ್ಚಿದ.

ಪೀಟರ್ ಆ ಸಿಗರೇಟ್ ಕೇಸನ್ನು ಕೈಗೆತ್ತಿಕೊಂಡ.

ಗಣ್ಯರೇ..... ಈ ಕೇಸ್‌ನಲ್ಲಿ ಒಟ್ಟು ಹದಿನಾರು ಸಿಗರೇಟುಗಳಿವೆ.... 'ಪ್ಲೇಯರ್' ಸಿಗರೇಟುಗಳು.... ನಾನಿದನ್ನು ತೆರೆದು ನೋಡಿಲ್ಲ. ಮನೆಯೊಡೆಯ ಯಾವ ಸಿಗರೇಟು ಸೇದುತ್ತಾರೆಂದೂ ನನಗೆ ಗೊತ್ತಿಲ್ಲ..." ಪೀಟರ್ ಆ ಕೇಸನ್ನು ಪರಿಚಾರಕನಿಗೆ ಕೊಡುತ್ತ, "ನಿನ್ನ ಯಜಮಾನರು ಯಾವ ಸಿಗರೇಟು ಸೇದುತ್ತಾರಪ್ಪಾ? ಪ್ಲೇಯರ್ ತಾನೆ?" ಎಂದು ಕೇಳುತ್ತ, ಆತ ಹೌದೆಂಬಂತೆ ತಲೆಯಾಡಿಸಿದಾಗ, "ಹಾಗಾದರೆ ಇದರಲ್ಲಿರುವ ಸಿಗರೇಟುಗಳು ಎಷ್ಟು ಎಣಿಸಿ ಹೇಳು," ಎಂದ.

ಕೇಸನ್ನು ತೆಗೆದು ಎಣಿಸಿದ ಪರಿಚಾರಕ, "ಹೌದು, ಹದಿನಾರು," ಎಂದೆನ್ನುತ್ತ ಅದನ್ನು ಮುಚ್ಚಿ ಮರಳಿಸಿದಾಗ ಪೀಟರ್‌ನ ಮುಖ ಗಂಭೀರವಾಯಿತು.



"ಈ ಕೇಸ್‌ನಲ್ಲಿ ಮುಚ್ಚಿಟ್ಟ ೬ ಬಿಳಿ ಬತ್ತಿಗಳು ನನಗೆ ೧೬ ಬಿಳಿ ಬಟ್ಟೆ ಹೊದಿಸಿ ಮಲಗಿಸಿದ ಶವಗಳಂತೆ ಕಾಣುತ್ತಿವೆ..."

ಪೀಟರ್‌ನ ಮಾತು ಆ ಮನೆಯನ್ನು ಇದ್ದಕ್ಕಿದ್ದ ಹಾಗೇ ಮೌನದಲ್ಲಿ ನೂಕಿತು. ಅಲ್ಲಿದ್ದವರ ಮುಖಗಳೆಲ್ಲ ಬಿಳಿಚಿಕೊಂಡವು.

"ಏನು ನೀನು ಬೊಗಳ್ತಿರೋದು?" ಮನೆಯ ಒಡೆಯ ಕುರ್ಚಿಯಿಂದ ಏಳಲು ಯತ್ನಿಸಿದ. ಶ್ರೀಮತಿ ಮೆವ್‌ರಾ ಅದಕ್ಕೆ ಆಸ್ಪದ ಕೊಡಲಿಲ್ಲ.

"ಒಡೆಯಾ, ಅಪ್ರಿಯ ಸತ್ಯ ಹೇಳಲು ಒತ್ತಾಯಿಸಿದವರೇ ನೀವು... ಅದನ್ನು ಅರ್ಧಕ್ಕೇ ನಿಲ್ಲಿಸಲಾರೆ.... ಪೂರ್ತಿ ಹೇಳುತ್ತೇನೆ ಕೇಳಿ.... ಹಾಲೆಂಡಿನ ಗೌರವಾನ್ವಿತ ವ್ಯಕ್ತಿ, ದೇಶಭಕ್ತನೆಂದು ಹೊಗಳಿಸಿಕೊಂಡ ನೀವು ನಿಜಕ್ಕೂ ಒಬ್ಬ ದೇಶದ್ರೋಹಿ. ನಾಝಿ ಹಸ್ತಕ ನನ್ನ ಹದಿನಾರು ಜನ ದೇಶಬಾಂಧವರನ್ನು, ಆ ಹದಿನಾರು ಜನ ಮುಗ್ಧ ಡಚ್ಚರನ್ನು ಕೊಲೆಗೈದ ಪಾತಕಿ.... ನಾಝಿಗಳಿಂದ ಹಣ ಪಡೆದು ಇಲ್ಲಿ ಫ್ಯಾಕ್ಟರಿಗಳನ್ನು ನಡೆಸಿ ದೊಡ್ಡ ಉದ್ಯಮಿ ಎನ್ನಿಸಿಕೊಂಡವರು. ಏನು ಪಾಪ ಮಾಡಿದ್ದರೆಂದು ಆ ೧೬ ಮಂದಿಯನ್ನು ಕೊಂದಿರಿ? ಹೇಳಿ...." ಉತ್ತೇಜಿತನಾದ ಪೀಟರ್ ಮುಷ್ಟಿ ಬಿಗಿದು ವೇದಿಕೆಯಿಂದ ಕೆಳಗಿಳಿದು ಬರುತ್ತಿದ್ದಂತೆಯೇ ಕುರ್ಚಿಯಿಂದ ಎದ್ದು ಮುಂದಡಿಯಿಟ್ಟ ಆ ಶ್ರೀಮಂತ ಹೃದ್ರೋಗಿ ಕುಸಿದು ಬಿದ್ದ.

ಆತನನ್ನು ಅಪ್ಪಿಕೊಂಡು ಭೋರಾಡಿ ಅಳತೊಡಗಿದ ಶ್ರೀಮತಿ ಮೆವ್‌ರಾ, "ಅಯ್ಯೋ.... ನನ್ನ ಜೀವದ ಜೀವ ನಿಶ್ಚೇಷ್ಟಿತನಾದ.... ಅವನನ್ನು ಈ ಮಾಟಗಾರನೇ ಕೊಂದ," ಎಂದು ಅರಚಿಕೊಂಡಳು.

ಗಣ್ಯರೆಲ್ಲ ಪೀಟರ್‌ನನ್ನು ಮುತ್ತಿ ಹಿಗ್ಗಾ ಮುಗ್ಗಾ ಎಳೆದಾಡತೊಡಗಿದರು.

"ನೀವಾರೂ ನನಗೆ ಏನೂ ಮಾಡಲಾರಿರಿ. ನೀವೆಲ್ಲ ಒಂದಿಲ್ಲೊಂದು ರೀತಿಯಲ್ಲಿ ಈ ಕಗ್ಗೊಲೆಗಳಲ್ಲಿ ಕೈ ಕೂಡಿಸಿದವರೇ.... ನಿಮ್ಮಂಥವರಿದ್ದರೆ ನನ್ನ ಪ್ರಿಯ ಹಾಲೆಂಡ್ ಹುಡಿ ಎದ್ದು ಹೋಗುತ್ತದೆ..."

ಅಷ್ಟರಲ್ಲೇ ಪರಿಚಾರಕನೊಬ್ಬ ಪೊಲೀಸರಿಗೆ ಫೋನು ಮಾಡಿದ್ದ.

ಬಂದ ಪೊಲೀಸು ಅಧಿಕಾರಿ ಪೀಟರ್‌ನನ್ನು ಕಂಡವನೆ ಒಂದು ಕ್ಷಣ ಹಿಂಜರಿದ. ಆದರೆ ಅಲ್ಲಿದ್ದವರೆಲ್ಲ, "ಗಣ್ಯ, ಶ್ರೀಮಂತ ಹೃದ್ರೋಗಿಯನ್ನು ಹೃದಯ ಬಿರಿಯುವ ಮಾತುಗಳಿಂದ ರೊಚ್ಚಿಗೆಬ್ಬಿಸಿ ಸಾಯುವಂತೆ ಮಾಡಿದ. ಕೂಡಲೇ ಬಂಧಿಸಿಕೊಂಡೊಯ್ಯಿರಿ," ಎಂದು ಒತ್ತಾಯಿಸಿದ್ದರಿಂದ ಹಾಗೆ ಮಾಡಲೇಬೇಕಾಯಿತು. ಇಲ್ಲದಿದ್ದರೆ ಪೀಟರ್‌ನನ್ನು ಅವರೆಲ್ಲ ಅಲ್ಲೇ ಮುಗಿಸಿಬಿಟ್ಟಿರುತ್ತಿದ್ದರು.

ಮುಂದಿನ ತನಿಖೆಗಳೆಲ್ಲ ಪೀಟರ್‌ನ ನಿರ್ದೇಶನದಂತೆಯೇ ನಡೆದವು. ಆ ಗಣ್ಯ ದೇಶ ಭಕ್ತನ ಮನೆಯಲ್ಲಿ ಮನೆ ಮುರುಕತನದ ಎಲ್ಲ ಪುರಾವೆಗಳೂ ದೊರೆತವು.

(ಮುಂದಿನ ಸಂಚಿಕೆ ನೋಡು)

---

ಗರ್ಭಧರಿಸುವುದರಿಂದ ಪ್ರಯೋಜನವಿದೆಯೆ? ಇದೇನು ಅಸಂಬದ್ಧ ಪ್ರಶ್ನೆ? ಎಂದು ಹುಬ್ಬೇರಿಸಬೇಡಿ. ಖಂಡಿತ ಪ್ರಯೋಜನ ಇದೆ ಎಂಬುದಕ್ಕೆ ಇಲ್ಲೊಂದು ಉದಾಹರಣೆ.

ಎಲೆನಾ ಪೌ ಎಂಬ ಇಟಾಲಿಯನ್ ಮಹಿಳೆಗೆ ಯಾವುದೋ ಅಪರಾಧಕ್ಕಾಗಿ ಅಲ್ಲಿನ ಕೋರ್ಟು ಶಿಕ್ಷೆ ವಿಧಿಸಿದಾಗ ಆಕೆ ತಾನು ಗರ್ಭಿಣಿಯಾಗಿರುವುದಾಗಿ ಡಾಕ್ಟರರಿಂದ ಸರ್ಟಿಫಿಕೇಟ್ ತಂದಳು. ಇಟಲಿಯ ಕಾಯದೆಯ ಪ್ರಕಾರ ಯಾವ ಕೋರ್ಟೂ ಪ್ರಸವವಾದ ಆರು ತಿಂಗಳವರೆಗೆ ಶಿಕ್ಷೆ ವಿಧಿಸುವಂತಿಲ್ಲ. ಆ ಆರು ತಿಂಗಳು ಮುಗಿಯುತ್ತಲೇ ಕೋರ್ಟಿಗೆ ಮತ್ತೊಂದು ಸರ್ಟಿಫಿಕೇಟು ಹಾಜರ್. ಈ ಕ್ರಮ ಹೀಗೆಯೆ ಮುಂದುವರೆದು ಒಂಭತ್ತನೆಯ ಮಗುವಿನ ಜನನದ ನಂತರ ೧೯೭೩ರ ಮೇ ೧೭ ರಂದು ಪೊಲೀಸರು ಆಕೆಯನ್ನು ಬಂಧಿಸಲು ಹೋದಾಗ ಮತ್ತೆ ನಿರಾಶೆಯೆ ಕಾದಿತ್ತು. ಎಲೆನಾ ಪೌ ಹತ್ತನೆಯ ಮಗುವಿನ ಆಗಮನಕ್ಕಾಗಿ ತಯಾರಿ ನಡೆಸಿದ್ದಳು.



## ವಿದ್ಯಾರ್ಥಿ ಅಂಕಣ

### ಸಂಖ್ಯೆಗಳೊಡನೆ ಆಟ!

**ಪ್ರಶ್ನೆಗಳು:**

೧) ೧ರಿಂದ ೭ರವರೆಗಿನ ಏಳೂ ಅಂಕೆಗಳನ್ನು ಬರೆಯಿರಿ.

೧ ೨ ೩ ೪ ೫ ೬ ೭

ಇದರ ಮಧ್ಯೆ (ಅಂಕೆಗಳ ಸ್ಥಾನ ಬದಲಿಸದೆ) "+"ಮತ್ತು "-" ಚಿಹ್ನೆಗಳನ್ನು ಉಪಯೋಗಿಸಿ ೪೦ಅನ್ನು ಪಡೆಯುವುದು ಸುಲಭ. ಹೇಗೆಂದರೆ,

೧೨+೩೪-೫+೬-೭=೪೦

ಈಗ ನೀವು ಮಾಡಬೇಕಾದದ್ದು ಇಷ್ಟೇ: ಅಂಕೆಗಳ ಸ್ಥಾನ ಬದಲಿಸದೆ ಅವುಗಳ ಮಧ್ಯೆ "+"ಮತ್ತು "-" ಚಿಹ್ನೆಗಳನ್ನು ಉಪಯೋಗಿಸಿ ೫೫ ಬರುವಂತೆ ಮಾಡಬೇಕು. ಹೇಗೆ?

೨) ಈಗ ೧ರಿಂದ ೯ರವರೆಗಿನ ಎಲ್ಲ ಅಂಕೆಗಳನ್ನೂ ಬರೆಯಿರಿ.

೧ ೨ ೩ ೪ ೫ ೬ ೭ ೮ ೯

ಅಂಕೆಗಳ ಸ್ಥಾನ ಬದಲಿಸದೆ ಮೊತ್ತ ೧೦೦ಅನ್ನು + ಮತ್ತು - ಚಿಹ್ನೆಗಳನ್ನು ಉಪಯೋಗಿಸಿ ಸುಲಭವಾಗಿ ಪಡೆಯಬಹುದು.

೧೨+೩-೪+೫+೬೭+೮+೯ =೧೦೦

ಆದರೆ ಇಲ್ಲಿ ೬ ಚಿಹ್ನೆಗಳನ್ನು ಉಪಯೋಗಿಸಲಾಗಿದೆ. ಈಗ ನಾವು ಕೇವಲ ೪ ಚಿಹ್ನೆಗಳನ್ನು ಮಾತ್ರ ಉಪಯೋಗಿಸಿಯೂ ಮೊತ್ತ ನೂರನ್ನು ಪಡೆಯಬಹುದು.

೧೨೩+೪-೫+೬೭-೮೯ =೧೦೦

ಇಲ್ಲೀಗ ನೀವು ಮಾಡಬೇಕಾದುದಿಷ್ಟೇ: ಅಂಕೆಗಳ ಸ್ಥಾನ ಬದಲಿಸದೆ ಕೇವಲ

## ಜ್ಞಾನನಿಧಿ

ಮೂರು ಚಿಹ್ನೆಗಳನ್ನು ಉಪಯೋಗಿಸಿ ಮೊತ್ತ ೧೦೦ ಬರಿಸಬೇಕು. ಹೇಗೆ?

೩) ಇಲ್ಲೀಗ ನೀವು ಎಲ್ಲ ಹತ್ತು ಅಂಕೆಗಳನ್ನು ಉಪಯೋಗಿಸಿಕೊಂಡು ಮೊತ್ತ ೧೦೦ ಬರಿಸಬೇಕು. ಇಲ್ಲಿ ಅಂಕೆಗಳ ಸ್ಥಾನ ಬೇಕಾದರೆ ಬದಲಾಯಿಸ ಬಹುದು. ಆದರೆ ನೀವು ಕಡಿಮೆ ಎಂದರೆ ೪ ಉತ್ತರಗಳನ್ನು ಇದಕ್ಕೆ ಕಂಡುಹಿಡಿಯಬೇಕು. ಹೇಗೆ?

೪) ಎಲ್ಲ ಹತ್ತು ಅಂಕೆಗಳನ್ನು ಉಪಯೋಗಿಸಿಕೊಂಡು ಉತ್ತರ ಒಂದು ಬರಿಸುವುದು ಹೇಗೆ ಸಾಧ್ಯ?

೫) ಈಗ ಐದು ೨ಗಳಿಂದ ಈ ಕೆಳಗಿನ ಸಂಖ್ಯೆಗಳನ್ನು ಹೇಗೆ ಪಡೆಯಬಹುದು?

೧೫

೧೧

೧೨,೩೨೧

೬) ಈಗ ಐದು ೨ಗಳಿಂದ ೨೮ನ್ನು ಹೇಗೆ ಪಡೆಯಬಹುದು?

೭) ನಾಲ್ಕು ೨ಗಳನ್ನು ಉಪಯೋಗಿಸಿ ೧೧೧ಅನ್ನು ಹೇಗೆ ಪಡೆಯುವಿರಿ?

೮) ಐದು ೩ಗಳನ್ನು ಉಪಯೋಗಿಸಿ ೧೦ಅನ್ನು ಹೇಗೆ ಪಡೆಯಬಹುದು?

೯) ಐದು ೩ಗಳನ್ನು ಉಪಯೋಗಿಸಿ ೧೦೦ಅನ್ನು ಹೇಗೆ ಪಡೆಯಬಹುದು?

೧೦) ಐದು ೩ಗಳನ್ನು ಉಪಯೋಗಿಸಿ ೩೭ಅನ್ನು ಪಡೆಯುವುದು ಹೇಗೆ ಸಾಧ್ಯ?

೧೧) ೧೦೦ ಮೊತ್ತವನ್ನು ಐದು ಒಂದೇ ರೀತಿಯ ಅಂಕೆಗಳಿಂದ ಹೇಗೆ ಪಡೆಯಬಹುದು? ಕಡಿಮೆ ಎಂದರೆ ೩ ಉತ್ತರಗಳನ್ನು ಹೇಗೆ ನೀಡುವಿರಿ?

೧೨) ಈ ಶತಮಾನದ ಒಂದು ವರ್ಷವನ್ನು (ಅಂದರೆ ಅದರ ಅಂಕೆಗಳನ್ನು) ಮೇಲೆ ಕೆಳಗೆ ಮಾಡಿ ಬರೆದರೂ ಬೆಲೆಯಲ್ಲಿ ವ್ಯತ್ಯಾಸವಾಗುವುದಿಲ್ಲ. ಆ ವರ್ಷ ಯಾವುದು?

೧೩) ಎಂಟು ಒಂದೇ ರೀತಿಯ ಅಂಕೆಗಳನ್ನುಪಯೋಗಿಸಿ ೧,೦೦೦ವನ್ನು ಹೇಗೆ ಪಡೆಯಬಹುದು?

೧೪) ನಾಲ್ಕು ಒಂದು (೧)ಗಳನ್ನು ಉಪಯೋಗಿಸಿ ಪಡೆಯಬಹುದಾದ ಅತಿ ದೊಡ್ಡ ಸಂಖ್ಯೆ ಯಾವುದು?

೧೫) ಕೇವಲ ಎರಡು ಅಂಕೆಗಳನ್ನು ಉಪಯೋಗಿಸಿಕೊಂಡು ಪಡೆಯಬಹುದಾದ ಅತಿ ಸಣ್ಣ ಸಂಖ್ಯೆ ಯಾವುದು?

*ಉತ್ತರಗಳು:*

೧) ೧೨೩+೪-೫-೬೭= ೫೫

೧-೨-೩-೪+೫೬+೭= ೫೫

೧೨-೩+೪೫-೬+೭= ೫೫

೨) $೧೨೩-೪೫-೬೭+೮೯=೧೦೦$

೩) (i) $೭೦+೨೪+\frac{೯}{೧೮}+\frac{೩}{೬}+೫=೧೦೦$

(ii) $೮೦+೧೯+\frac{೨೭}{೫೪}+\frac{೩}{೬}=೧೦೦$

(iii) $೮೭+೯+\frac{೪}{೫}+\frac{೧೨}{೬೦}+೩=೧೦೦$

(iv) $೫೦+೪೯+\frac{೧}{೨}+\frac{೩೮}{೭೬}=೧೦೦$

೪) $\frac{೧೪೮}{೨೯೬}+\frac{೩೫}{೭೦}=೧$

$೧೨೩,೪೫೬,೭೮೯^{೦}=೧$

$೧=೨೩೪,೫೬೭^{೯-೮-೧}$ ಇತ್ಯಾದಿ.

೫) ೧೫: $(೨+೨)^{೨}-\frac{೨}{೨}=೧೫$ $\frac{೨೨}{೨}+೨\times೨=೧೫$

$(೨\times೨)^{೨}-\frac{೨}{೨}=೧೫$ $೨೨+೨೨=೧೫$

$(೨+೨)^{೨}-\frac{೨}{೨}=೧೫$ $\frac{೨೨}{೨}+೨^{೨}=೧೫$

$೨^{(೨+೨)}-\frac{೨}{೨}=೧೫$ $\frac{೨೨}{೨}+೨+೨=೧೫$

೧೧: $\frac{೨೨}{೨}+೨-೨=೧೧$

೧೨,೩೨೧: $\left(\frac{೨೨೨}{೨}\right)^{೨}=೧೧೧^{೨}=೧೧೧\times೧೧೧=೧೨,೩೨೧$

೬) $೨೨+೨+೨+೨=೨೮$.

೭) $\frac{೨೨೨}{೨}=೧೧೧$

೮) $\frac{೩೩}{೩}-\frac{೩}{೩}=೧೦$ ಅಥವಾ $\frac{೩\times೩\times೩+೩}{೩}=೧೦$

೯) $೩೩\times೩+\frac{೩}{೩}=೧೦೦$

ಇಂಗ್ಲೆಂಡಿನ ನ್ಯಾಯದಾನದ ವ್ಯವಸ್ಥೆಯೂ ತುಂಬ ವಿಚಿತ್ರ. ದೊರೆ ನಾಲ್ಕನೆಯ ಹೆನ್ರಿಯನ್ನು ಅಪಹರಿಸಲು ಸನ್ನಾಹ ನಡೆದಿತ್ತೆಂದೂ ಅದರಲ್ಲಿ ಭಾಗಿಯಾದವರ ಪೈಕಿ ಸರ್ ರಾಬರ್ಟ್ ಲೋಗನ್ ಎನ್ನುವವರೂ ಒಬ್ಬರೆನ್ನುವುದು ಗೊತ್ತಾದಾಗ ರಾಬರ್ಟ್ ಲೋಗನ್ ಗತಿಸಿ ಮೂರು ವರ್ಷಗಳೇ ಸಂದಿದ್ದವು. ಆದರೂ ಆ ಕುರಿತು ವಿಚಾರಣೆ ನಡೆದು ರಾಜದ್ರೋಹದ ಆಪಾದನೆ ಸಿದ್ಧವಾದಾಗ ಕೋರ್ಟಿನ ಆಜ್ಞೆಯ ಮೇರೆಗೆ ಲೋಗನ್ನರ ಸಮಾಧಿಯಿಂದ ಎಲವುಗಳನ್ನು ತೆಗೆದು ಚಿತೆಗೇರಿಸಲಾಯಿತು.

# ಜ್ಞಾನನಿಧಿ

೧೦) $೩೩+೩+\frac{೩}{೩}=೩೭$

$\frac{೩೩೩}{೩x೩}=೩೭$

೧೧) ೧೧೧-೧೧=೧೦೦

$೩೩x೩+\frac{೩}{೩}=೧೦೦$

೫x೫x೫-೫x೫=೧೦೦

(೫+೫+೫+೫)x೫=೧೦೦

೧೨) ೧೯೬೧

೧೩) ೮೮೮+೮೮+೮+೮+೮=೧೦೦೦

೧೪) ಸಾಮಾನ್ಯವಾಗಿ ಎಲ್ಲರೂ ೧, ೧೧ ಈ ಉತ್ತರವನ್ನೇ ನೀಡುತ್ತಾರೆ. ಆದರೆ ಅತ್ಯಂತ ದೊಡ್ಡ ಸಂಖ್ಯೆಯೆಂದರೆ $೧೧^{೧೧}$ ಇದು ಮೊದಲ ಸಂಖ್ಯೆಗಿಂತ ೨೫೦,೦೦೦,೦೦೦ ಪಾಲು ದೊಡ್ಡದು!

೧೫) ತುಂಬಾ ಜನರ ಉತ್ತರ ೧೦ ಆಗಿರುತ್ತದೆ. ಆದರೆ ನಿಜವಾದ ಉತ್ತರ ೧. ಹೇಗೆಂದರೆ,

$\frac{೧}{೧}=\frac{೨}{೨}=\frac{೩}{೩}=\frac{೪}{೪}$ ಇತ್ಯಾದಿ. ಅಲ್ಲಿಂದ $\frac{೯}{೯}=೧$

ಅಥವಾ

$೧^{೦}=೨^{೦}=೩^{೦}=೪^{೦}=೫^{೦}=೬^{೦}=೭^{೦}=೮^{೦}=೯^{೦}=೧.$

• ಸಂಗ್ರಹ: ಬಿ.ಕೆ. ವರದರಾಜ

ಗಡಿಯಾರವಿಲ್ಲದೆ ವೇಳೆಯನ್ನು ತಿಳಿದುಕೊಳ್ಳುವುದು ಹೇಗೆ? ಅದಕ್ಕಾಗಿ ಜಪಾನೀಯರು ವಿಚಿತ್ರವಾದ ಉಪಾಯವನ್ನೇ ಕಂಡು ಹಿಡಿದಿದ್ದರು. ಅವರು ಉರಿಸುವ ಮೊಂಬತ್ತಿಗೆ ಸರಿಯಾಗಿ ಹನ್ನೆರಡು ಭಾಗಗಳು. ಒಂದೊಂದು ಭಾಗಕ್ಕೂ ಒಂದೊಂದು ಪರಿಮಳ. ಒಂದು ಭಾಗ ಉರಿಯಲು ಸರಿಯಾಗಿ ಒಂದು ಗಂಟೆ ತಗಲುತ್ತಿತ್ತು. ಹೀಗೆ ಕೋಣೆಯಲ್ಲಿ ಹರಡಿದ ಪರಿಮಳದಿಂದಲೇ ಅವರಿಗೆ ವೇಳೆಯನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತಿತ್ತು.

## ಅಧಿಕ ಮಾಸದ ವ್ಯವಸ್ಥೆ

ಅಧಿಕ ಮಾಸದ ವ್ಯವಸ್ಥೆಯು ಹಿಂದು ಪಂಚಾಂಗದಲ್ಲಿ ಇರುವಂತೆಯೇ ಪ್ರಪಂಚದ ಇನ್ನಿತರ ದೇಶಗಳಲ್ಲಿಯೂ ಇದೆ ಎಂದು ಹೇಳಬಹುದು. ಬೆಬಿಲಾನಿನ ಪ್ರಾಚೀನ ಕ್ಯಾಲೆಂಡರ್ (ಪಂಚಾಂಗ)ಗಳಲ್ಲಿ ಈ ಪದ್ಧತಿಯನ್ನು ಕಾಣಬಹುದು. ಪಾರಸಿ ಕ್ಯಾಲೆಂಡರಿನಲ್ಲಿ ೩೦ ದಿನಗಳ ಹನ್ನೆರಡು ತಿಂಗಳುಗಳು ಇರುತ್ತಿದ್ದವು. ಮತ್ತು ಐದು ದಿನಗಳನ್ನು ಪ್ರತ್ಯೇಕವಾಗಿ ಇಡಲಾಗುತ್ತಿತ್ತು. ಇದೇ ಪದ್ಧತಿ ಈಜಿಪ್ತದಲ್ಲಿಯೂ ಇತ್ತು. ಗ್ರೀಕ್ ದೇಶದಲ್ಲಿ ಅಧಿಕಮಾಸದ ಪದ್ಧತಿ ಇತ್ತು. ಅಲ್ಲಿ ಪ್ರತಿ ಎರಡು ವರ್ಷಕ್ಕೊಮ್ಮೆ ಒಂದು ತಿಂಗಳನ್ನೂ ಜೋಡಿಸಲಾಗುತ್ತಿತ್ತು. ರೋಮನ್ ಕ್ಯಾಲೆಂಡರಿನಲ್ಲಿಯೂ ಇದೇ ಪದ್ಧತಿ ಕಂಡು ಬಂದಿದೆ ಮತ್ತು ಅಲ್ಲಿ ಫೆಬ್ರುವರಿ ೨೩ರ ನಂತರ ಒಂದು ತಿಂಗಳನ್ನು ಜೋಡಿಸಲಾಗುತ್ತಿತ್ತು.

• ವೆಂಕಟೇಶ ಗಂಗಾವತಿ

# ಭಾರತದಲ್ಲಿ ಮುದ್ರಣ ಕಲೆ

**ಮು**ದ್ರಣ ಕಲೆ ಭಾರತಕ್ಕೆ ಆಗಮಿಸಿದ್ದು ೧೫೫೬ ರಲ್ಲಿ. ಆ ವರ್ಷದ ಸೆಪ್ಟೆಂಬರ್ ತಿಂಗಳಿನಲ್ಲಿ ಪೋರ್ಚುಗೀಸ್‌ನ ಪಾದ್ರಿಗಳು 'ಕಾಬೋಲ' ಎಂಬ ಸ್ಥಳದಲ್ಲಿಯ 'ಸೆಂಟ ಪಾಲ್ ಕಾಲೇಜ್'ನಲ್ಲಿ ಒಂದು ಮುದ್ರಣ ಗೃಹವನ್ನು ಪ್ರಾರಂಭಿಸಿದರು. ನವೆಂಬರ್ ತಿಂಗಳೊಳಗಾಗಿ ಅವರು ಅಲ್ಲಿ 'Conclusoes Publicas' ಎಂಬ ಗ್ರಂಥ ವನ್ನು ಮುದ್ರಿಸಿ ಪ್ರಕಟಿಸಿದರು.

ಮುದ್ರಣ ಗೃಹವನ್ನು ಸ್ಥಾಪಿಸಿದ ಪ್ರಥಮ ಭಾರತೀಯನೆಂದರೆ ಶಿವಾಜಿ ಮಹಾರಾಜನು. ತಾನು ಸ್ಥಾಪಿಸಿದ ಮುದ್ರಣಗೃಹವನ್ನು ನಡೆಸಿ ಕೊಂಡು ಹೋಗಲು ಆತನಿಗೆ ಯಾರೂ ದೊರೆಯದ್ದರಿಂದ ಶಿವಾಜಿಯು ೧೬೭೪ರಲ್ಲಿ ಮುದ್ರಣ ಗೃಹವನ್ನು ಗುಜರಾತಿನ ಪ್ರಜೆ ಭೀಮಜಿ ಪಾರೇಖ ಎಂಬುವವನಿಗೆ ಮಾರಿ ದನು. ಭೀಮಜಿ ಪಾರೇಖನು ಬಹು ಬುದ್ಧಿ ವಂತನಾಗಿದ್ದುದರಿಂದ ಮುದ್ರಣ ಗೃಹವನ್ನು ನಡೆಸಲು ಇಂಗ್ಲೆಂಡಿನಿಂದ ಒಬ್ಬ ಮುದ್ರಣ ಕಲೆ ತಜ್ಞನನ್ನು ಕರೆಸಿಕೊಂಡನು.

ಮುದ್ರಣ ಯುಗ ಆರಂಭವಾದಂದಿ ನಿಂದ ಮೊತ್ತ ಮೊದಲು ಭಾರತದಲ್ಲಿ ಭಾರ ತೀಯ ಭಾಷೆಯಲ್ಲಿ ಅಚ್ಚಾದ, ಇಂದಿಗೂ ನೋಡಲು ಸಿಗುವ ಗ್ರಂಥವೆಂದರೆ ಮಲ ಬಾರಿ ತಮಿಳಿನಲ್ಲಿರುವ "ಕ್ರಿಸ್ತುವಣ್ಣ ಕಣಂ." ಈ ಗ್ರಂಥ ಮೊದಲ ಬಾರಿ ೧೫೭೭ ರಲ್ಲಿ ಪ್ರಕಟಗೊಂಡಿತು. ಇದರ ಪುನರ್ ಮುದ್ರ ಣದ ಒಂದು ಪ್ರತಿಯು ಫ್ರಾನ್ಸಿನ ರಾಷ್ಟ್ರೀಯ ಗ್ರಂಥಾಲಯದಲ್ಲಿದೆ.

ಕಾಲಗತಿಸಿದಂತೆ ಎಲ್ಲ ಭಾರತೀಯ ಭಾಷೆಗಳಲ್ಲಿ ಗ್ರಂಥಗಳನ್ನು ಮುದ್ರಿಸುವ ಕಾರ್ಯ ಪ್ರಾರಂಭವಾಯಿತು. ಆರಂಭದಲ್ಲಿ ತಮಿಳು ಪುಸ್ತಕಗಳೆಲ್ಲ ಮಲೆಯಾಳಿ ಲಿಪಿಯ ಲ್ಲಿಯೇ ಅಚ್ಚಾಗುತ್ತಿದ್ದವು. ಈ ಲಿಪಿಯು ಬಹುಜನ ತಮಿಳರಿಗೆ ಅಪರಿಚಿತವಿದ್ದುದ ರಿಂದ 'ಇಗ್ನೇಷಿಯಸ್ ಐರಾಮೋನಿ' ಎಂಬ ತಮಿಳನು, ತಮಿಳು ಲಿಪಿಯಲ್ಲಿಯೇ ಕಟ್ಟಿ ಗೆಯ ಮೇಲೆ ಅಚ್ಚಿನ ಮೊಳೆಗಳನ್ನು ತಯಾ ರಿಸಿದನು. ಈ ಮೊಳೆಗಳ ಸಹಾಯದಿಂದಲೇ 'ತಮಿಳು-ಪೋರ್ಚುಗೀಸ್ ನಿಘಂಟು' ತಯಾ ರಾಯಿತು.

೧೭೭೮ ರಲ್ಲಿ 'ಚಾರ್ಲ್ಸ್ ವಿಲ್‌ಕಿನ್ಸ್' ಬಂಗಾಲಿ ಲಿಪಿಯಲ್ಲಿ ಅಚ್ಚು ಮೊಳೆಗಳನ್ನು ತಯಾರಿಸಿ ಹಾಲ್‌ಹೆಡ್‌ನು ಬರೆದ 'ಗ್ರಾಮರ್ ಆಫ್ ದಿ ಬೆಂಗಾಲಿ ಲಾಂಗ್ ವೆಜ್' ಎಂಬ ಗ್ರಂಥವನ್ನು ಮುದ್ರಿಸಿದನು.

ಮರಾಠಿ ಹಾಗೂ ಅಸ್ಸಾಮಿ ಭಾಷೆಗಳ ಲ್ಲಿಯ ಮೊತ್ತ ಮೊದಲಿನ ಪುಸ್ತಕಗಳು ಸಿರಾಂ ಪುರ ಮುದ್ರಣಾಲಯದಲ್ಲಿ ಅಚ್ಚಾದವು. ೧೮೦೭ರಲ್ಲಿ 'ಮರಾಠಿ ಬೈಬಲ್' ೧೮೧೦ರಲ್ಲಿ 'ಮರಾಠಿ-ಇಂಗ್ಲೀಷ್ ನಿಘಂಟು'ಗಳೆರಡೂ ಇಲ್ಲಿಯೇ ಅಚ್ಚಾದವು.

ಗುಜರಾತಿ ಅಚ್ಚುಗಳು ಮೊದಲು ತಯಾ ರಾದುದು ೧೭೯೭. ರಲ್ಲಿ. 'Bombay Courier ಎಂಬ ವರ್ತಮಾನ ಪತ್ರಿಕೆಯ ಮುದ್ರಕನಾಗಿದ್ದ 'ಬೈರಾಮಜಿ-ಜೀಜಿಭಾಯ್' ರವರು ಗುಜರಾತಿ ಅಚ್ಚುಗಳನ್ನು ತಯಾರಿಸಿ ದರು.

ಕನ್ನಡ ಅಚ್ಚುಗಳನ್ನು ಮೊದಲು ಉಪ ಯೋಗಿಸಿಕೊಂಡ ಗ್ರಂಥವೆಂದರೆ ಸಿರಾಂಪು ರದಲ್ಲಿ ೧೮೧೭ರಲ್ಲಿ ಅಚ್ಚಾದ 'ಡಾ.

## ಜ್ಞಾನನಿಧಿ

ವಿಲಿಯಂ ಕ್ಯಾರಿ' ಅವರ "Grammar of the Karnata Language" ಎಂಬುದು.

ಕನ್ನಡ ಅಚ್ಚುಗಳನ್ನು ಎರಡನೆಯದಾಗಿ ಉಪಯೋಗಿಸಿದ ಪುಸ್ತಕವೆಂದರೆ 'ಜಾನ್ ಮೆಕೆರಲ್' ಎಂಬುವರು ಬರೆದ "Grammar of the Carnataca Language" ಎಂಬುದು. ಇದು ೧೮೨೦ರಲ್ಲಿ ಮದ್ರಾಸಿನಲ್ಲಿ ಅಚ್ಚಾಯಿತು.

ಕನ್ನಡದಲ್ಲಿ ಮೊತ್ತ ಮೊದಲಿನ ಪ್ರಾಥಮಿಕ ಪಠ್ಯ ಪುಸ್ತಕಗಳು ಅಚ್ಚಾದುದು ಮುಂಬೈಯಲ್ಲಿಯ Education Society's Printing press ಎಂಬಲ್ಲಿ.

(ಆಧಾರ: ಶ್ರೀ ಕೆ. ಎಸ್. ದೇಶಪಾಂಡೆಯವರ 'ಭಾರತದಲ್ಲಿ ಮುದ್ರಣ ಕಲೆ)
ಸಂಗ್ರಹ: ಶಿ.ಜು. ಪಾಶ, ಶಿವಮೊಗ್ಗ

# ತೀಕ್ಷ್ಣಮತಿಯ ಪಾರಿವಾಳಗಳು

ಇಟಲಿಯ ದುರ್ಗಮ ಪ್ರದೇಶದಲ್ಲಿ ಲಾ ರಾಪಿಟಾ ಎಂಬ ಹಳ್ಳಿ. ಒಂದು ಬೆಂಕಿಪೊಟ್ಟಣ ಬೇಕೆಂದರೂ ಹದಿನಾಲ್ಕು ಮೈಲುಗಳಷ್ಟು ದೂರ ಹೋಗಬೇಕು. ಅದಕ್ಕಾಗಿ ಹಳ್ಳಿಗರು ಒಂದು ಉಪಾಯವನ್ನು ಕಂಡುಹಿಡಿದರು. ಪಾರಿವಾಳವೊಂದನ್ನು ಹಿಡಿದು ಸಂದೇಶವನ್ನು ಒಯ್ಯುವ ಹಾಗೆ ಪಳಗಿಸಿದರು. ತಮಗೆ ಸಾಮಾನು ಬೇಕಾದಾಗಲೆಲ್ಲ ಹಳ್ಳಿಯ ಜನ ಚೀಟಿಯಲ್ಲಿ ಪದಾರ್ಥದ ಹೆಸರನ್ನು ಬರೆದು ತಮ್ಮ ವಿಳಾಸವನ್ನು ಸೂಚಿಸಿ, ಚೀಟಿಯನ್ನು ಪರಿವಾಳದ ಕಾಲಿಗೆ ಕಟ್ಟಿ ಹಾರಿಬಿಡುತ್ತಿದ್ದರು. ಪಾರಿವಾಳ ನಿಯತವಾದ ಸ್ಥಳ ತಲುಪಿ ಅಂಗಡಿಕಾರನಿಗೆ ಚೀಟಿಯನ್ನು ಮುಟ್ಟಿಸಿ ಕಾಳುಗಳ ರೂಪದಲ್ಲಿ ಬಹುಮಾನ ಪಡೆಯುತ್ತಿತ್ತು. ಹೀಗೆ ಬಂದ ಆರ್ಡರುಗಳನ್ನೆಲ್ಲ ಒಟ್ಟುಗೂಡಿಸಿ ಅಂಗಡಿಕಾರ ಸಾಮಾನುಗಳನ್ನು ಲಾ ರಾಪಿಟಾಕ್ಕೆ ಕಳಿಸಿಕೊಡುತ್ತಿದ್ದ.

ಪಾರಿವಾಳ ಕುಶಾಗ್ರಮತಿಯಷ್ಟೆ ಅಲ್ಲ, ಅದರ ಕಣ್ಣೂ ಬಲು ಸೂಕ್ಷ್ಮ ಎನ್ನುವುದನ್ನು ಅರಿತ ರಶಿಯನ್ನರು ಅವುಗಳನ್ನು ಕಾರಖಾನೆಯಲ್ಲೂ ದುಡಿಸಿಕೊಳ್ಳುತ್ತಿದ್ದಾರೆ. ಬಾಲ್‌ಬೇರಿಂಗ್‌ನಲ್ಲಿ ಸರಿಯಾದದ್ದು ಯಾವುದು, ದೋಷಯುಕ್ತವಾದದ್ದು ಯಾವುದು ಎಂಬುದನ್ನು ಗುರುತಿಸುವ ಹಾಗೆ ಐದು ವಾರಗಳ ಕಾಲ ತರಬೇತು ಕೊಟ್ಟು ಅವುಗಳನ್ನು ಆ ಕೆಲಸಕ್ಕೆಂದೇ ಕಾರಖಾನೆಯಲ್ಲಿ ತೊಡಗಿಸುತ್ತಾರೆ. ಕಾರಖಾನೆಯಲ್ಲಿ ಕನ್ವೇಯರ್ ಬೆಲ್ಟಿನ ಮೇಲೆ ಬಾಲ್‌ಬೇರಿಂಗ್ ಬರುತ್ತಲೂ ಅವುಗಳನ್ನು ವಿಂಗಡಿಸುವುದೇ ಈ ಪಾರಿವಾಳಗಳ ಕೆಲಸ. ಹುರಿಗಡಲೆಯಾಕಾರದ ಬಾಲ್‌ಬೇರಿಂಗ್‌ನ ಮೇಲೆ ಕೈ ಬೆರಳಿನ ಗುರುತನ್ನೂ ಗುರುತಿಸಬಲ್ಲಂತಹ ತೀಕ್ಷ್ಣ ದೃಷ್ಟಿಯ ಇವು ಗಂಟೆಗೆ ನಾಲ್ಕು ಸಾವಿರ ಬಾಲ್ ಬೇರಿಂಗ್‌ಗಳನ್ನು ಪರೀಕ್ಷಿಸುತ್ತವೆಯಂತೆ. ದೋಷಯುಕ್ತವಾದ ಬಾಲ್‌ಬೇರಿಂಗನ್ನು ಕಂಡು ಹಿಡಿದಾಗಲೆಲ್ಲ ಬಕ್ಷೀಸಾಗಿ ಜೋಳದ ಕಾಳುಗಳನ್ನು ಅವುಗಳಿಗೆ ಕೊಡಲಾಗುತ್ತದೆ.

● 'ಎಂ. ಕಲ್ಲಪ್ಪಾಚಾರ್ಯ'

# ದೈವದ ಆಟ

ವಿಯೆನ್ನಾದ ಫ್ರಾಂತ್ಸ್ ಮೆಂಡ್ಲ್ ಎಂಬಾತ ವಾಸಿಸಲು ಒಂದು ಮನೆಯನ್ನು ಕೊಂಡ. ದೇಹಬಾಧೆಯನ್ನು ತೀರಿಸಿಕೊಂಡು ಶೌಚಾಲಯದಿಂದ ಹೊರಬರುವಾಗ ಬಾಗಿಲನ್ನು ಎಳೆದ. ಬಾಗಿಲು ದಪ್ಪವಾಗಿ ಭಾರವಾಗಿದ್ದುದರಿಂದ ಸುಲಭವಾಗಿ ತೆರೆದುಕೊಳ್ಳಲಿಲ್ಲ. ಹೇಳಿಕೇಳಿ ಹಳೆಗಾಲದ ಮನೆ, ಶೌಚಾಲಯಕ್ಕೂ ಕಳ್ಳರು ನುಗ್ಗಬಹುದು ಎಂದು ಭಾವಿಸಿ ಇಷ್ಟು ಭದ್ರವಾದ ಬಾಗಿಲನ್ನು ಅಳವಡಿಸಿದ್ದಾರೋ ಏನೋ ಎಂದು ಮನೆಯ ಜನರೆದುರು ನಗೆಯಾಡಿ ಸುಮ್ಮನಾದ.

ಇದಾಗಿ ಕೆಲ ದಿನಗಳ ನಂತರ ಮೆಂಡ್ಲ್‌ನ ಹೆಂಡತಿ ಕಸ ಗುಡಿಸುತ್ತಿರುವಾಗ ಆಯತಪ್ಪಿ ಶೌಚಾಲಯದ ಬಾಗಿಲಿಗೆ ಅಪ್ಪಳಿಸಿದಳು. ಏಕೋ ಒಳಗಿನ ಜಾಗ ಖಾಲಿಯಿರುವಹಾಗಿದೆ ಎಂದು ಅವಳಿಗೆ ಅನ್ನಿಸಿ ಇದನ್ನು ಗಂಡನಿಗೆ ತಿಳಿಸಿದಾಗ ಆತ ಪರೀಕ್ಷಾರ್ಥವಾಗಿ ಬಾಗಿಲು ಬಡಿದ. ಹೆಂಡತಿ ಹೇಳಿದ್ದು ನಿಜವಾಗಿತ್ತು. ಹಾಗಾದರೆ ಮನೆಕಟ್ಟಿದವರು ಇಂತಹ ಬಾಗಿಲನ್ನೇಕೆ ಕೂಡಿಸಿದ್ದಾರೆ ಎನ್ನುವುದನ್ನು ನೋಡಿಯೇ ಬಿಡುವಾ ಎಂದು ಗರಗಸದಿಂದ ಬಾಗಿಲನ್ನು ಕೊರೆದಾಗ ಎರಡು ಹಲಗೆಗಳ ನಡುವೆ ಭದ್ರಪಡಿಸಿದ ಚೀಲವೊಂದು ಹೊರಬಿತ್ತು. ಆ ಚೀಲದ ತುಂಬಾ ಇನ್ನೂ ಸಾಣೆ ಹಿಡಿಯದ ಕಚ್ಚಾ ವಜ್ರಗಳು. ಅವುಗಳನ್ನು ಮಾರಿದಾಗ ಮನೆ ಕೊಂಡದ್ದಕ್ಕಿಂತಲೂ ಹೆಚ್ಚು ಹಣ ಫ್ರಾತ್ಸ್ ಮೆಂಡ್ಲ್‌ನಿಗೆ ಬಂತು.

ಲಂಡನ್ನಿನ ಫ್ರೆಡ್ ರೈಸ್ ಎನ್ನುವವನ ದೈವವೂ ಪಾಯಖಾನೆಯಲ್ಲೇ ತೆರೆಯಿತು. ಅವನದು ದುಮ್ಮಜಲಿನ ಮನೆ. ಮನೆಯ ಕೆಳಭಾಗದಂತೆ ಮೇಲಿನ ಮಹಡಿಯಲ್ಲೂ ಸಕಲ ಸೌಲಭ್ಯಗಳು. ಒಮ್ಮೆ ಆತ ಮೇಲ್ಮಹಡಿಯ ಶೌಚಾಲಯದಿಂದ ಹೊರಬರುವಾಗ ಕೆಳಗೆ ಎಲ್ಲಕಡೆ ಹಲಗೆಗಳಿಗೆ ಮೊಳೆ ಬಡಿದಿದ್ದರೂ ಒಂದು ಕಡೆ ಮಾತ್ರ ಹಾಗೆಯೆ ಬಿಟ್ಟಿರುವುದನ್ನು ಗಮನಿಸಿದ. ದಪ್ಪವಾದ ಆ ಹಲಗೆಯನ್ನು ಎತ್ತಿನೋಡಿದಾಗ ಕೆಳಗೆ ಒಂದು ಸಂದೂಕ. ಆ ಸಂದೂಕದ ಬೀಗವನ್ನು ತೆರೆದಾಗ ಒಳಗೆಲ್ಲಾ ಕರೆನ್ಸಿ ನೋಟು

# ನಿರಾಶೆ ಮತ್ತು ದಣಿವು

ನಮಗೆ ನಿರಾಶೆಯುಂಟಾದಾಗಲೆಲ್ಲ ಹೆಚ್ಚು ದಣಿವುಂಟಾದ ಅನುಭವವಾಗುತ್ತದಲ್ಲವೆ? ಕೆಲವೊಮ್ಮೆ ನಿರಾಶೆಗೆ ಯಾವ ಕಾರಣಗಳಿಲ್ಲದಿದ್ದರೂ ದಣಿದಂತೆನಿಸುತ್ತದೆ. ಹಾಗೆಯೇ ದಣಿವಿಗೆ ಕಾರಣವಿಲ್ಲದೆಯೇ ನಿರಾಶೆಯೂ ಆವರಿಸುತ್ತದೆ. ಇವೆರಡಕ್ಕೂ ಅದಾವ ಸಂಬಂಧವಿದೆ?

ಶರೀರ ಮತ್ತು ಮನಸ್ಸು ಪರಸ್ಪರ ಪ್ರಭಾವಕ್ಕೊಳಗಾಗುತ್ತಲಿರುತ್ತವೆ. ಆದರೆ ನಿರಾಶೆ ಮತ್ತು ದಣಿವು ಅಥವಾ ಆಯಾಸಗಳ ವಿಷಯ ಹಾಗಲ್ಲ, ನಿರಾಶೆಯ ಕಾರಣದಿಂದ ಆಯಾಸವುಂಟಾಗುವುದು ನಿಜ, ದಣಿವಿನ ಕಾರಣದಿಂದ ನಿರಾಶೆ ಆವರಿಸಬೇಕೆಂದೇನೂ ಇಲ್ಲ. ಶ್ರಮಜೀವಿಗಳಿಗೆ ದಣಿವಾಗುತ್ತದೆಯೆ ವಿನಾ ನಿರಾಶೆಯಲ್ಲ. ಆ ದಣಿವು ಪರಿಹರಿಸಿಕೊಳ್ಳುತ್ತಲೇ ಅವರು ಅನ್ಯತ್ರ ವಿಷಯಗಳಲ್ಲೂ ಆಸಕ್ತಿ ತೋರುತ್ತಿರುತ್ತಾರೆ.

ಆದರೆ ದುರ್ಬಲ ಮನಸ್ಸಿನವರು ಸದಾ ನಿರಾಶರಾಗಿಯೆ ಇರುತ್ತಾರೆ. ಹಾಗೂ ಅಲ್ಪಶ್ರಮವೂ ಅವರನ್ನು ದಣಿಸಿಬಿಡುತ್ತದೆ.

ಗಳು. ಬ್ಯಾಂಕುಗಳಲ್ಲಿ ವಿಶ್ವಾಸವಿಲ್ಲದ ಅವನ ಅಜ್ಜ ಜೀವಮಾನವಿಡಿ ಕೂಡಿ ಹಾಕಿದ ಹಣವನ್ನೆಲ್ಲಾ ಅಲ್ಲಿ ಇಟ್ಟಿದ್ದ.

ಸ್ಟಾಕ್‌ಹೋಮ್‌ನಲ್ಲೊಬ್ಬಾತ ಹಳೆಯ ವಾಲ್‌ಪೇಪರುಗಳನ್ನೆಲ್ಲ ಕಿತ್ತಿ ಹೊಸ ವಾಲ್ ಪೇಪರನ್ನು ಅಂಟಿಸುತ್ತಿದ್ದಾಗ ಒಂದು ಹಳೆ ಪಾಕೀಟನ್ನು ಕಂಡ. ಅದರ ಮೇಲೆ ೧೮೮೦ರ ಇಸವಿಯ ಸ್ಟಾಂಪು. ಹಳೆ ಅಂಚೆ ಚೀಟಿಗಳನ್ನು ಸಂಗ್ರಹಿಸುವವರಲ್ಲಿ ಅದನ್ನು ಮಾರಿದಾಗ ಇಂದಿನ ಲೆಖ್ಖದಲ್ಲಿ ಸುಮಾರು ಆರು ಲಕ್ಷ ರೂಪಾಯಿಗಳು ಬಂದವು.

ನಿಜ. ದೈವದ ಆಟವನ್ನು ಬಲ್ಲವರಾರು?

● 'ಎಂ.ಆರ್.ಎಸ್.ರಾವ್'

## ನಾವು ಅದೃಶ್ಯರಾಗಬಹುದೆ?

**ಖಂ**ಡಿತ. ನೀವು ಅವರಕ್ತ (Infra Red) ಕಿರಣಗಳ ಜಾಲವನ್ನು ನಿಮ್ಮ ಸುತ್ತಮುತ್ತ ಹೆಣೆದುಕೊಂಡರೆ ಖಂಡಿತವಾಗಿಯೂ ಅದೃಶ್ಯರಾಗಬಹುದಲ್ಲದೆ ಉಳಿದವರನ್ನು ನೋಡಲೂಬಹುದು.

ಇದಕ್ಕೇನು ಕಾರಣ? ಅವರಕ್ತ ಕಿರಣಗಳಿಂದ ಉತ್ಪನ್ನವಾಗುವ ಪ್ರಕಾಶವು ದೃಶ್ಯಪ್ರಕಾಶ ಕಿರಣಗಳ ಮಾರ್ಗದಲ್ಲಿ ಅಡ್ಡಿಯುಂಟು ಮಾಡುತ್ತದೆ. ಹೀಗಾಗಿ ಆ ಅವರಕ್ತ ಕಿರಣ ಜಾಲದಲ್ಲಿರುವ ವಸ್ತು ಯಾ ವ್ಯಕ್ತಿ ಅದೃಶ್ಯನಾಗಿಬಿಡುತ್ತಾನೆ; ಅಥವಾ ಕಾಣುವುದೇ ಇಲ್ಲ.

ಹಾಂ, ಅಂದಹಾಗೆ ಈ ಅವರಕ್ತ ಕಿರಣ ಜಾಲವನ್ನು ಸುತ್ತಲೂ ಹೇಗೆ ಹೆಣೆದುಕೊಳ್ಳುತ್ತೀರೆಂಬುದೇ ನೀವು ಯೋಚಿಸಬೇಕಾದ ವಿಚಾರ.

## ಶೀಘ್ರಲಿಪಿಯ ಶೋಧಕನಾರು?

**ಶೀ**ಘ್ರಲಿಪಿ, ಶಾರ್ಟ್‌ಹ್ಯಾಂಡ್, ಸ್ಟೆನೋಗ್ರಫಿ ಎಂದೆಲ್ಲ ಕರೆಯಲ್ಪಡುವ ವೇಗ ಲೇಖನ ವಿಧಾನವನ್ನು ಮೊಟ್ಟಮೊದಲ ಬಾರಿಗೆ ಗಣಪತಿ ಬಳಸಿದನೆಂದು ಭಾರತೀಯ ಶೀಘ್ರಲಿಪಿಕರು ಹೇಳುತ್ತಾರೆ. ವ್ಯಾಸ ಮಹರ್ಷಿಗಳು ಹೇಳುತ್ತ ಹೋದುದನ್ನೆಲ್ಲ ಅದೇ ವೇಗದಲ್ಲಿ ಬರೆದುಕೊಂಡು 'ಮಹಾಭಾರತ' ನಮಗೆ ದೊರೆಯುವಂತೆ ಆತ ಮಾಡಿ ಉಪಕಾರಗೈದನಂತೆ.

ಆದರೆ, ಮೊಟ್ಟಮೊದಲ ಶೀಘ್ರಲಿಪಿ ವಿಧಾನವನ್ನು ಇಂಗ್ಲೆಂಡಿನ ಡಾ. ತಿಮೋತಿ ಬ್ರೈಟ್ ಎಂಬಾತ ಆವಿಷ್ಕರಿಸಿದ. ಕ್ರಿಸ್ತಶಕ ೧೫೮೮ರಲ್ಲಿ ಆತ ಶೀಘ್ರಲಿಪಿ ಅಭ್ಯಾಸಿಗಳಿಗೆಂದು ಪುಸ್ತಕವೊಂದನ್ನು ಬರೆದ. ಆದರೆ ಕೆಲವು ಅಡೆತಡೆಗಳಿದ್ದ ಇದು ವ್ಯಾವಹಾರಿಕವಾಗಿ ಬಳಕೆಗೆ ಸುಲಭದ್ದಾಗಿರಲಿಲ್ಲ.

ಈ ತೊಂದರೆಗಳನ್ನೆಲ್ಲ ನಿವಾರಿಸಿ ಒಂದು ಉತ್ತಮ ಹಾಗೂ ಸರ್ವಮಾನ್ಯವೆನಿಸುವಂಥ ವಿಧಾನವನ್ನು ಕಂಡುಹಿಡಿದಾತ ಐಜಾಕ್ ಪಿಟ್‌ಮನ್. ಇಂದು ಪಿಟ್‌ಮನ್ ಶೀಘ್ರಲಿಪಿ ವಿಧಾನ ಭಾರತವೂ ಸೇರಿದಂತೆ ಜಗತ್ತಿನಾದ್ಯಂತ ಬಳಸಲ್ಪಡುತ್ತಿದೆ. ಧ್ವನ್ಯಾಧಾರಿತವಾದ ಈ ಕ್ರಮವನ್ನು ಯಾವುದೇ ಭಾಷೆಗೂ ಅಳವಡಿಸಿಕೊಳ್ಳಬಹುದೆಂಬುದು ತಿಳಿದ ಮೇಲಂತೂ ಆಯಾ ಪ್ರಾದೇಶಿಕ ಭಾಷೆಗಳಲ್ಲೂ ಶೀಘ್ರಲಿಪಿ ಬೆಳೆದು ಬಂತು.

ಅಂದಹಾಗೆ ನಮ್ಮ ರಾಷ್ಟ್ರಭಾಷೆ ಹಿಂದಿಯಲ್ಲೂ, ಮಾತೃಭಾಷೆ ಕನ್ನಡದಲ್ಲೂ ಶೀಘ್ರಲಿಪಿ ತುಂಬ ಜನಪ್ರಿಯವಾಗಿದೆಯಲ್ಲದೆ ಅನೇಕರಿಗೆ ವೃತ್ತಿಯೂ ಆಗಿದೆ.

# ನಿಮ್ಮ ಶಬ್ದಭಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ವಿವರ್ಣ
(ಅ) ತೂತು
(ಆ) ಬಣ್ಣಗೆಟ್ಟ
(ಇ) ತಿಳಿವಳಿಕೆ
(ಈ) ಸುತ್ತುಹಾಕುವಿಕೆ

೨. ವಿಕ್ರಯ
(ಅ) ಕಷ್ಟ
(ಆ) ಕೊಳ್ಳುವಿಕೆ
(ಇ) ಪಾಳುಬೀಳುವುದು
(ಈ) ಮಾರಾಟ

೩. ವಿದಲನ
(ಅ) ಹರಿಯುವುದು
(ಆ) ಅರಳುವುದು
(ಇ) ಚಿಗುರುವುದು
(ಈ) ವಿವರಿಸುವುದು

೪. ಸಿಗ್ಗಾಳಿ
(ಅ) ಬಿರುಗಾಳಿ
(ಆ) ನಾಚುಗುಳಿ
(ಇ) ಚಳಿ
(ಈ) ದುಷ್ಟ ಹೆಂಗಸು

೫. ಸರಣಿ
(ಅ) ಜಾಳಿಗೆ
(ಆ) ದಾರಿ
(ಇ) ಬಳಿಯುವಿಕೆ
(ಈ) ಪೋಣಿಸುವಿಕೆ

೬. ಸನ್ನಿವಿಷ್ಟ
(ಅ) ರೋಗಿಷ್ಠ
(ಆ) ಬಹಳ ಮೆಚ್ಚುಗೆಯ
(ಇ) ಒಳಗೆ ಸೇರಿಕೊಂಡ
(ಈ) ಎದುರಿಗೆ ಇರುವ

೭. ಸಿಂಡರಿಸು
(ಅ) ಅಲಂಕರಿಸು
(ಆ) ಕಡಿದು ಹಾಕು
(ಇ) ನಡುಗು
(ಈ) ಮುಖದಲ್ಲಿ ಕೋಪ ತೋರಿಸು

೮. ಯತ್ಕಿಂಚಿತ್
(ಅ) ಯಾವುದಾದರೂ
(ಆ) ಉರುಳಿಬಿದ್ದದ್ದು
(ಇ) ಎದ್ದು ಹಾರಿದ್ದು
(ಈ) ಸಾಧ್ಯವಿಲ್ಲದ್ದು

೯. ಮಾರ್ಫತ್ತು
(ಅ) ಮೂಲಕ
(ಆ) ದುರಸ್ತಿ
(ಇ) ಮೊಳ
(ಈ) ಅಟ್ಟ

೧೦. ನಿಷ್ಣಾತ
(ಅ) ನಂಬಿಕೆಯುಳ್ಳ
(ಆ) ಚತುರ
(ಇ) ಕೊಲೆಗಡಕ
(ಈ) ಗಾಳಿಯಿಲ್ಲದ

೧೧. ಪರಿಭ್ರಮಣ
(ಅ) ತಲೆ ಕೆಡುವುದು
(ಆ) ತಪ್ಪು
(ಇ) ತಯಾರಿ
(ಈ) ಸುತ್ತು ಹಾಕುವುದು

೧೨. ಬೇಗುದಿ
(ಅ) ಜಾರುವಿಕೆ
(ಆ) ಅವಸರದ ಓಟ
(ಇ) ತಾಪ
(ಈ) ಕೆಲಸವಿಲ್ಲದಿರುವುದು

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ವಿವರ್ಣ

(ಅ) ಬಣ್ಣಗೆಟ್ಟ, ಕಳೆಗುಂದಿದ; ಬಣ್ಣ ಮಾಸಿದ, ಹೊಲಸು ಬಣ್ಣದ. ಉದಾ- ಅವನ ಮುಖ ವಿವರ್ಣವಾಯಿತು. (ಸಂ. ವಿ=ಹೊರಟು ಹೋದ, ವರ್ಣ =ಬಣ್ಣ)

೨. ವಿಕ್ರಯ

(ಈ) ಮಾರಾಟ, ಬೆಲೆ ತೆಗೆದುಕೊಂಡು ಕೊಡುವುದು. (ಸಂ. ವಿ = ತಿರುಗಿ, ಕ್ರಯ = ಕೊಳ್ಳುವಿಕೆ)

೩. ವಿದಲನ

(ಅ) ಹರಿಯುವುದು, ಕಿತ್ತು ಹಾಕುವುದು, ಛಿದ್ರ ಛಿದ್ರವಾಗುವುದು. ಉದಾ:- ಸಿಡಿಲಿನ ಆಘಾತಕ್ಕೆ ಪರ್ವತವು ವಿದಲನಗೊಂಡಿತು. (ಸಂ. ವಿ = ವಿಶೇಷವಾಗಿ, ದಲನ = ಹರಿಯುವಿಕೆ.)

೪. ಸಿಗ್ಗಾಳಿ

(ಅ) ನಾಚುಗುಳಿ, ಹಿಂಜರಿಯುವ ಸ್ವಭಾವದವ, ಸಂಕೋಚಶೀಲ. (ಕನ್ನಡ)

೫. ಸರಣಿ

(ಅ) ದಾರಿ, ಮಾರ್ಗ; ರೀತಿ, ಕ್ರಮ, ಎಳೆ. ಉದಾ- ಅವನ ವಿಚಾರ ಸರಣಿ ಸರಿಯಲ್ಲ. (ಸಂ. ಸೃ=ಸರಿ ಎಂಬುದರಿಂದ)

೬. ಸನ್ನಿವಿಷ್ಟ

(ಇ) ಒಳಗೆ ಸೇರಿಕೊಂಡ, ಜೋಡಿಯಾಗಿ ಕೂಡಿದ; ಆಳವಾಗಿ ಹೊಕ್ಕ. ಉದಾ- ಪರಮಾತ್ಮನು ಪ್ರತಿಯೊಬ್ಬನ ಹೃದಯದಲ್ಲಿ ಸನ್ನಿವಿಷ್ಟನಾಗಿದ್ದಾನೆ. (ಸಂ. ಸಂ+ನಿ = ಹೆಚ್ಚಾಗಿ, ವಿಷ್ಟ = ಹೊಕ್ಕ)

೭. ಸಿಂಡರಿಸು

(ಈ) ಮುಖದಲ್ಲಿ ಕೋಪ, ಸಿಡುಕು, ಉದ್ರೇಕ ಅಥವಾ ಹುಬ್ಬು ಗಂಟನ್ನು ಪ್ರದರ್ಶಿಸು. ಉದಾ- ಗಂಡನನ್ನು ಕಂಡೊಡನೆ ಅವಳು ಮುಖ ಸಿಂಡರಿಸಿಕೊಳ್ಳುತ್ತಿದ್ದಳು (ಕನ್ನಡ.)

೮. ಯತ್ಕಿಂಚಿತ್

(ಅ) ಯಾವುದಾದರೂ, ಏನಾದರೂ, ಎಷ್ಟಾದರೂ, ಕೈಲಾದಷ್ಟು, ಅಲ್ಪಸ್ವಲ್ಪ. ಉದಾ- ಯತ್ಕಿಂಚಿತ್ ದಾನಮಾಡಿ. (ಸಂ. ಯತ್ = ಯಾವುದು ಕಿಂಚಿತ್ = ಯಾವುದಾದರೂ.

೯. ಮಾರ್ಫತ್ತು

(ಅ) ಮೂಲಕ, ಮುಖಾಂತರ; ತಾಬೆ, ವಶ, ಉದಾ- ಅವನ ಮಾರ್ಫತ್ತಾಗಿ ಇವನಿಗೆ ಹಣ ಸಲ್ಲಿಸಿದೆ; ಈ ಸೊತ್ತು ಅವನ ಮಾರ್ಫತ್ತು ಇದೆ. (ಉರ್ದು.)

೧೦. ನಿಷ್ಣಾತ

(ಅ) ಚತುರ, ನಿಪುಣ, ಪಾರಂಗತ, ಕುಶಲ, ಪಳಗಿದ, ಬುದ್ಧಿವಂತ. ಉದಾ- ಅವನು ಈ ವಿದ್ಯೆಯಲ್ಲಿ ನಿಷ್ಣಾತ. (ಸಂ.)

೧೧. ಪರಿಭ್ರಮಣ

(ಈ) ಸುತ್ತು ಹಾಕುವುದು; ಯಾವುದಾದರೊಂದರ ಸುತ್ತಲೂ ತಿರುಗುವುದು; ಅಲೆದಾಟ. ಉದಾ- ಪೃಥ್ವಿ ಸೂರ್ಯನ ಸುತ್ತ ಪರಿಭ್ರಮಣ ಮಾಡುತ್ತದೆ. (ಸಂ. ಪರಿ = ಸುತ್ತಲೂ, ಭ್ರಮಣ = ತಿರುಗುವುದು.)

೧೨. ಬೇಗುದಿ

(ಇ) ತಾಪ, ಸಂತಾಪ; ವ್ಯಥೆ, ಸಂಕಟ. ಉದಾ- ಅವನ ಮನಸಿನ ಬೇಗುದಿಯನ್ನು ಹೇಳತೀರದು. (ಕನ್ನಡ, ಬೇಯ್ +ಕುದಿ)

**ನಿಮ್ಮ ಶಬ್ದ ಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬–೮ ಸರಿಯಿದ್ದರೆ | ... | ಸಾಧಾರಣ |
| ೯–೧೦ ಸರಿಯಿದ್ದರೆ | ... | ಉತ್ತಮ |
| ೧೧–೧೨ ಸರಿಯಿದ್ದರೆ | ... | ಅತ್ಯುತ್ತಮ |

# ಜೈವಿಕ ತಂತ್ರಜ್ಞಾನದ ವಿಶ್ವಾಮಿತ್ರ ಸೃಷ್ಟಿ

● ಬೋನ್ಸಾಯ್ ಶ್ರೀನಿವಾಸ

ಜೈವಿಕ ತಂತ್ರಜ್ಞಾನದಿಂದ ಹೊಸಬಗೆಯ ಪದಾರ್ಥಗಳನ್ನೇ ಸೃಷ್ಟಿಸಲಾಗುತ್ತಿದೆ. ಆದರೆ ಈ ಜೈವಿಕ ತಂತ್ರಜ್ಞಾನ ಪ್ರತಿಯೋರ್ವ ಗೃಹಿಣಿಗೂ ಗೊತ್ತಿದ್ದದ್ದೆ. ಪ್ರತಿರಾತ್ರಿ ಹಾಲಿಗೆ ಹೆಪ್ಪುಹಾಕುವಾಗ ಆಕೆ ಮಾಡುವ ಕಾರ್ಯ ಜೈವಿಕ ತಂತ್ರಜ್ಞಾನಕ್ಕೆ ಸಂಬಂಧಿಸಿದ್ದೆ. ಹೆಪ್ಪಿನಲ್ಲಿರುವ ಸೂಕ್ಷ್ಮಾಣುಗಳು ಹಾಲನ್ನು ಮೊಸರನ್ನಾಗಿ ಪರಿವರ್ತಿಸುತ್ತವೆ.

ಸ್ವಿಟ್ಜರ್‌ಲಂಡ್, ಹಾಲೆಂಡ್ ದೇಶಗಳು ಗಿಣ್ಣ ಅಥವಾ 'ಚೀಸ್'ಗಾಗಿ ಹೆಸರುವಾಸಿ. ಕಿಣ್ವಗಳನ್ನು ಅರ್ಥಾತ್ ಜೀವಂತ ಸೂಕ್ಷ್ಮಾಣುಗಳನ್ನು ಹಾಲಿಗೆ ಬೆರೆಸಿದಾಗ, ಸೂಕ್ಷ್ಮಾಣುಗಳು ಹಾಲನ್ನು ಮೊಸರಾಗಿ ಪರಿವರ್ತಿಸುವಾಗ ಹೇರಳವಾಗಿ ಇಂಗಾಲದ-ಡೈ-ಆಕ್ಸೈಡ್‌ನ್ನು ಬಿಡುಗಡೆ ಮಾಡುತ್ತವೆ. ಈ ಅನಿಲವೇ ಚೀಸ್‌ನಲ್ಲಿರುವ ರಂಧ್ರಗಳಿಗೆ ಕಾರಣ. ಅತ್ಯುತ್ತಮ ಚೀಸ್‌ನಲ್ಲಿ ಈ ರಂಧ್ರಗಳು ಗೋಲಿ ಗಾತ್ರದಷ್ಟು ದೊಡ್ಡದಾಗಿ ಇರಬೇಕು. ಗುಂಡಾಗಿ, ತಮಟೆಯಾಕಾರದ ಚೀಸ್‌ನ ಹೊರಮೈ ನುಣುಪಾಗಿದ್ದರೂ, ಹೊರಮೈಮೇಲೆ ಸಣ್ಣ ಸುತ್ತಿಗೆಯಿಂದ ತಟ್ಟಿ, ಒಳರಂಧ್ರಗಳಿಂದ ಬರುವ ಮೃದುಧ್ವನಿಯನ್ನಾಲಿಸಿ ಅದು ಪಕ್ವವೇ, ಅಪಕ್ವವೇ ಎಂಬುದನ್ನು ಪತ್ತೆಹಚ್ಚಿ ವರ್ಗೀಕರಿಸಲಾಗುತ್ತದೆ.

ಸಾವಿರಾರು ವರ್ಷಗಳಿಂದ ಹುದುಗು ಹಾಕಿ, ಹುಳಿ ಬರಿಸಿ, ಹೆಂಡ ತಯಾರಿಸುವ ಕಾರ್ಯದಲ್ಲಿರುವ ಕಿಣ್ವಗಳೂ ಸೂಕ್ಷ್ಮಾಣುಯುಕ್ತವೆ. ಇದೂ ಒಂದು ವಿಧದ ಜೈವಿಕ ತಂತ್ರಜ್ಞಾನದ ಕಾರ್ಯವೆ.

ಭಾರಿ ಒಲೆಗಳಲ್ಲಿ ಬ್ರೆಡ್ ಬೇಯಿಸುವ ಮೊದಲು ಹಿಟ್ಟನ್ನು ನಾದುವಾಗ ಅದಕ್ಕೆ ಒಂದು ಬಗೆಯ ಕಿಣ್ವವನ್ನು ಬೆರೆಸಲಾಗುತ್ತದೆ. ಈ ಕಿಣ್ವದಲ್ಲಿನ ಸೂಕ್ಷ್ಮಾಣುಗಳು (ಯೀಸ್ಟ್) ಹಿಟ್ಟನ್ನು ಉಬ್ಬಿಸಿ, ಹುಳಿ ತರಿಸಿ, ಬ್ರೆಡ್ಡಿಗೆ ರುಚಿಯನ್ನೂ ಪರಿಮಳವನ್ನೂ ಮೃದುತ್ವವನ್ನೂ ನೀಡುತ್ತವೆ.

ಜೈವಿಕ ತಂತ್ರಜ್ಞಾನದಲ್ಲಿನ ಇತ್ತೀಚಿನ ಸಾಧನೆಗಳೆಂದರೆ ಇವು:

೧೯೭೨ರಲ್ಲಿ ಅಮೆರಿಕದಲ್ಲಿ ಭಾರತೀಯ ವಿಜ್ಞಾನಿ ಆನಂದ್ ಚಕ್ರವರ್ತಿ ಎಂಬುವವರು ಹಲವಾರು ರೀತಿಯ ಸೂಕ್ಷ್ಮಾಣುಗಳನ್ನು DNA ಪರಿವರ್ತನೆಯ ಮೂಲಕ, ತೈಲವನ್ನು ಕಬಳಿಸುವ ಸೂಕ್ಷ್ಮಾಣುಗಳನ್ನಾಗಿ ಪರಿವರ್ತಿಸಿದರು. ಭಾರಿ ತೈಲ ವಾಹಕಗಳು ಸಾಗರದಲ್ಲಿ ಅಪಘಾತಕ್ಕೀಡಾಗಿ ಎಣ್ಣೆ ಹೊರಸೋರಿದಾಗ, ಆ ಕಲ್ಮಷ ತಂತಾನೆ ದೂರವಾಗಬೇಕೆಂದರೆ ಸುಮಾರು ೫೫ ವರ್ಷಗಳೇ

**ಹೌದು. ಹಸಿದ ಜಗತ್ತಿಗೆ ಆಹಾರ ಒದಗಿಸಲು ಜೈವಿಕ ತಂತ್ರಜ್ಞಾನಕ್ಕೆ ಮೊರೆ ಹೋಗದೇ ವಿಧಿಯಿಲ್ಲ. ಅದು ಹೊಟ್ಟೆಯನ್ನು ತುಂಬಿಸಬಲ್ಲುದಷ್ಟೇ ಅಲ್ಲ, ಹೊಸ ತಳಿಗಳನ್ನು ನಿರ್ಮಿಸುತ್ತದೆ.**

ಬೇಕು. ಆದರೆ ಸಮುದ್ರತಳದಲ್ಲಿ ಎಣ್ಣೆ ಸೋರಿದ ಕ್ಷೇತ್ರಗಳಲ್ಲಿ ಆ ಮೈಕ್ರೋಬ್‌ಗಳ ಅಂಗಾಂಶ ಕೃಷಿ (Tissue culture)ಗೊಳಿಸಿದರೆ ಹೆಚ್ಚಿನ ಸಂಖ್ಯೆಯಲ್ಲಿ ಪುನರುತ್ಪಾದನೆಗೊಂಡ ಆ ಸೂಕ್ಷ್ಮಾಣುಗಳು ಶುದ್ಧೀಕರಿಸುವ ಕಾರ್ಯವನ್ನು ಕೇವಲ ಐದಾರು ವಾರಗಳಲ್ಲೇ ಮುಗಿಸಬಲ್ಲವು.

ಅಂದಿನಿಂದ ಇಂದಿನವರೆಗೆ ಇಂತಹ ಸಾವಿರಾರು ಬಗೆಯ ಸೂಕ್ಷ್ಮಾಣುಗಳನ್ನು ಹೊಸದಾಗಿ ಸೃಷ್ಟಿಸಲಾಗಿದೆ. ಒಂದೊಂದು ಸೂಕ್ಷ್ಮಾಣುವಿಗೂ ಒಂದೊಂದು ಕೆಲಸ. ಇಂತಹ ಸುಮಾರು ೫೫,೦೦೦ ಮೈಕ್ರೋಬ್‌ಗಳ ಶೈತ್ಯೀಕರಿಸಿದ ಅಂಗಾಂಶಗಳ ಸಂಗ್ರಹ ಅಮೆರಿಕದಲ್ಲಿದೆ.

ನೀರಿನಲ್ಲಿನ ಕಲ್ಮಷಗಳನ್ನು ಜೀರ್ಣಿಸಿಕೊಳ್ಳಬಲ್ಲ ಸೂಕ್ಷ್ಮಾಣುಗಳನ್ನು ಇಂದು ಅಮೆರಿಕದಲ್ಲಿ ನದಿ, ಜಲಾಶಯ ಇತ್ಯಾದಿಗಳಲ್ಲಿ ನೀರನ್ನು ಶುದ್ಧಗೊಳಿಸಲು ಉಪಯೋಗಿಸಲಾಗುತ್ತಿದೆ.

ಜಪಾನಿನ ಸೋನಿ ಕಾರ್ಪೋರೇಶನ್ ಸುಮಾರು ೧,೨೦,೦೦೦ ರೂಪಾಯಿ ಬೆಲೆ ಬಾಳುವ ಸಂಗೀತ ವ್ಯವಸ್ಥೆಯಲ್ಲಿ ಅಳವಡಿಸಿರುವ 'ಹೆಡ್ ಫೋನ್'ಗಳಲ್ಲಿನ ಸ್ಪೀಕರ್‌ಗಳ ತೆಳು ಪೊರೆ (ಡಯಾಫ್ರಮ್) ಸೆಲ್ಯುಲೋಸ್‌ನಿಂದ ತಯಾರಿಸಲ್ಪಡುತ್ತದೆ. ಈ ಸೆಲ್ಯುಲೋಸ್ ಸೂಕ್ಷ್ಮಾಣುಗಳ ಸೃಷ್ಟಿ.

ಸೂಕ್ಷ್ಮಾಣುಗಳನ್ನು ಔಷಧಿ, ಅನ್ನಾಂಗಗಳ ಉತ್ಪಾದನೆಯಲ್ಲಿಯೂ ಬಳಸಲಾಗುತ್ತಿದೆ.

ನಮ್ಮ ಪರಿಸರದ ಮೇಲೆ ಪ್ಲಾಸ್ಟಿಕ್‌ನಿಂದಾಗುವ ಭಯಂಕರ ದುಷ್ಪರಿಣಾಮಗಳ ಬಗೆಗೆ ನೀವು ಸಾಕಷ್ಟು ಓದಿಯೇ ಇದ್ದೀರಿ. ಆದರೆ ಇನ್ನು ಆ ಚಿಂತೆಗೆ ಅವಕಾಶವೇ ಇಲ್ಲ. ಕೆಲವೇ ಗಂಟೆಗಳಲ್ಲಿ ಪ್ಲಾಸ್ಟಿಕ್ ಮಾಲಿನ್ಯವನ್ನು ತಿಂದು ಜೀರ್ಣಿಸಿಕೊಳ್ಳಬಲ್ಲ ಸೂಕ್ಷ್ಮಾಣುಗಳನ್ನು ವಿಜ್ಞಾನಿಗಳು ಇತ್ತೀಚೆಗಷ್ಟೆ ಸೃಷ್ಟಿಸಿದ್ದಾರೆ.

ಅಷ್ಟೇ ಅಲ್ಲ, ಇಡಿ ನಮ್ಮ ಶರೀರವೇ ಸೂಕ್ಷ್ಮಾಣುಮಯ. ನಮ್ಮ ದೊಡ್ಡ ಕರುಳಿನಲ್ಲಿ ಸುಮಾರು ೧೦೦ ಟ್ರಿಲಿಯನ್ * ವಿವಿಧ ಬ್ಯಾಕ್ಟೀರಿಯಾಗಳು, ಅನೇಕ ಇತರ ಅಪಾಯಕಾರಿ ಜೀವಾಣುಗಳ ವಿರುದ್ಧ ಸದಾ ಹೋರಾಡುತ್ತಲೇ ಇರುತ್ತವೆ. ಅಲ್ಲದೆ ದೊಡ್ಡ ಕರುಳಿನಲ್ಲಿರುವ ಮೈಕ್ರೋಬ್‌ಗಳು, ಸಣ್ಣ ಕರುಳು ಜೀರ್ಣಿಸಿಕೊಳ್ಳಲಾರದಂಥ ಕಫ, ಲೋಳೆಯಂತಹ ಪದಾರ್ಥಗಳನ್ನು ವಿಘಟಿಸಿ, ಹೀರಿಕೊಂಡು, ದೇಹದ ವಿವಿಧ ಅಂಗಗಳಿಗೆ ಪೋಷಕಾಂಶಗಳನ್ನು ಒದಗಿಸುತ್ತವೆ.

ಈ ಸೂಕ್ಷ್ಮಾಣುಗಳಲ್ಲಿರುವ ಶೇಕಡಾ ೭೦ರಷ್ಟು ಬ್ಯಾಕ್ಟೀರೀಯಾಯ್ಡ್‌ಗಳು ಹಾಗೂ ಯೂ ಬ್ಯಾಕ್ಟೀರಿಯಾಯ್ಡ್‌ಗಳು ಹಾಗೂ ಬ್ಯಾಕ್ಟೀರಿಯಂಗಳು ನಾವು ಭುಂಜಿಸುವ ಧಾನ್ಯಗಳು, ಹಣ್ಣು ಮತ್ತು ಕಾಯಿಪಲ್ಯೆಗಳನ್ನು ವಿಭಜಿಸಿ, ಅದರಲ್ಲಿನ ಕ್ಲಿಷ್ಟವಾದ ಶರ್ಕರಪಿಷ್ಟಗಳನ್ನು ದೇಹದ ಅಂಗಗಳಿಗೆ ಒದಗಿಸುತ್ತವೆ. ಮತ್ತಿತರ ಸೂಕ್ಷ್ಮಾಣುಗಳಾದ ೧) ಆ್ಯಸಿಡ್ ಮೊನೋಕಾಕಸ್ ೨) ಬಿಫಿಟೋ ಬ್ಯಾಕ್ಟೀರಿಯಂ ೩) ಬ್ಯುಟರಿ ಫಿಬ್ರಿಯೊ ಕೊಪ್ರೋಕಾಕಸ್ ೪) ಫೋನೋ ಬ್ಯಾಕ್ಟೀರಿಯಂ ೫) ಲ್ಯಾಕ್ಟೊ ಬ್ಯಾಸಿಲಸ್ ೬) ಪೆಪ್ಟೊಸ್ಟ್ರೆಪ್ಟೊಕಾಕಸ್ ಮತ್ತು ೭) ರೊಮಿನೋಕಾಕಸ್‌ಗಳು ಉಳಿದ ಪದಾರ್ಥಗಳ ವಿಭಜನೆಯನ್ನು ನೆರವೇರಿಸುತ್ತವೆ.

ಕರುಳಿನಲ್ಲಿ ಇನ್ನೂ ಹಲವಾರು ಬಗೆಯ ಸೂಕ್ಷ್ಮಾಣುಗಳಿದ್ದು ಅವು ಇನ್ನೂ ಪೂರ್ಣವಾಗಿ ಉಪಕಾರಿಗಳೋ ಅಪಕಾರಿಗಳೋ ಎನ್ನುವುದನ್ನು ತಿಳಿದುಕೊಳ್ಳಲು ಸಾಧ್ಯವಾಗಿಲ್ಲ. ನಮ್ಮ ಶ್ವಾಸಕೋಶದ ಮೇಲ್ಭಾಗದಲ್ಲಿರುವ ಸ್ಟೇಫಿಲೋಕಾಕಸ್‌ನಂತಹ ಸೂಕ್ಷ್ಮಾಣುಗಳು ಒಮ್ಮೊಮ್ಮೆ ಕರುಳಿನ ಮಾರ್ಗದ ಮೂಲಕ ಪಯಣಿಸಿದಾಗ ಕರುಳಿಗೆ ತೊಂದರೆಗಳುಂಟಾಗಬಹುದಾಗಿದೆ.

ಸಸ್ಯಗಳ ಬೇರಿನಲ್ಲಿದ್ದು ಸಸ್ಯಕ್ಕೆ ಉಪಯುಕ್ತವಾದ ಸಾರಜನಕವನ್ನು ಉತ್ಪಾದಿಸುವುದೂ ಸೂಕ್ಷ್ಮಾಣುವಿನ ಕೆಲಸ. ಜೀವದ್ರವ್ಯಕ್ರಿಯೆಯಲ್ಲಿಯೂ (Metabolism) ದ್ಯುತಿಸಂಶ್ಲೇಷಣೆಯಲ್ಲಿಯೂ ಸೂಕ್ಷ್ಮಾಣುಗಳ ಪಾತ್ರ ಹಿರಿದು.

ಸೂಕ್ಷ್ಮಾಣುಗಳು ತಾಮ್ರದ ಅದುರಿನಿಂದ ತಾಮ್ರವನ್ನು ಬೇರ್ಪಡಿಸಬಲ್ಲವು. ಸ್ಕೀ ಆಡಲ್ಪಡುವ ಹಿಮಪ್ರದೇಶಗಳಲ್ಲಿ ಹಿಮಪಾತವನ್ನು ಉಂಟುಮಾಡಬಲ್ಲವು. ಕೃತಕ ಮಳೆಯನ್ನೂ ತರಿಸಬಲ್ಲವು.

* ಟ್ರಿಲಿಯನ್ ಎಂದರೆ ಹತ್ತು ಲಕ್ಷದ ಹತ್ತು ಲಕ್ಷದ ಹತ್ತು ಲಕ್ಷ.

ಕೆಲವು ತಿಂಗಳು ಹಿಂದೆ ಬೆಂಗಳೂರಿನ ಇಂಡೋ ಅಮೆರಿಕನ್ ಹೈಬ್ರಿಡ್ ಸೀಡ್ ಸಂಸ್ಥೆಯವರು, ಅವರ ಅಮೆರಿಕದ ಪಾಲುಗಾರ ಸಂಸ್ಥೆಯಾದ ಪ್ಯಾನ್ ಅಮೆರಿಕನ್ ಸೀಡ್ ಸಂಸ್ಥೆಯ ಸಹಯೋಗದೊಂದಿಗೆ ಒಂದು ವಿಚಾರ ಸಂಕಿರಣವನ್ನು ಏರ್ಪಡಿಸಿದ್ದರು. ಪ್ಯಾನ್ ಅಮೆರಿಕನ್ ಸೀಡ್ ಸಂಸ್ಥೆಯ ಸ್ಥಳೀಯ ಮ್ಯಾನೇಜರ್ ಸಿಮೆನ್ ಕ್ರಾಫೋರ್ಡ್‌ರೊಂದಿಗೆ ಚರ್ಚಿಸುತ್ತಿದ್ದಾಗ ನಾನೆಂದೆ, "ಪ್ರಕೃತಿಗೆ ಇಲ್ಲಿಯವರೆಗಿನ ಹಾದಿ ಸವೆಸಲು ಹಲವಾರು ಕೋಟಿ ಶತಮಾನಗಳೇ ಬೇಕಾದುವು. ಆದರೆ ಕಳೆದ ಒಂದು ದಶಕದಲ್ಲಿ ಮಾನವನ ಈ ಕಾರ್ಯ ಭಗವಂತನನ್ನೂ ಮೀರಿಸಿದೆ. ಬಯೋಟೆಕ್ನಾಲಜಿಯ ಸಹಾಯದಿಂದ ನಾವೀಗ ಸಾಧಿಸಿರುವುದನ್ನು ಪ್ರಕೃತಿಯೇ ಸಾಧಿಸಬೇಕಾದಲ್ಲಿ ಮತ್ತೆ ಹಲವಾರು ಕೋಟಿ ವರುಷಗಳೇ ಬೇಕಾದೀತು." ನನ್ನ ಮಾತನ್ನು ಸಂಪೂರ್ಣವಾಗಿ ಅನುಮೋದಿಸಿದ ಅವರು, ಕಡೆಯದಾಗಿ ಹೇಳಿದ ವಾಕ್ಯ ನನ್ನನ್ನು ಯೋಚನೆಗೀಡುಮಾಡಿತು: "ಬಯೋಟೆಕ್ನಾಲಜಿಯಿಂದಾದ ಅನುಕೂಲಗಳನ್ನು ಮಾತ್ರ ಚರ್ಚಿಸೋಣ, ಬೇರೆ ವಿಚಾರಗಳು ಸದ್ಯಕ್ಕೆ ಬೇಡ!!"

ಹೌದು. ಹಸಿದ ಜಗತ್ತಿಗೆ ಆಹಾರ ಒದಗಿಸಲು ಜೈವಿಕ ತಂತ್ರಜ್ಞಾನಕ್ಕೆ ಮೊರೆಹೋಗದೆ ವಿಧಿಯಿಲ್ಲ. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ, ಯುರೋಪ್ ಮತ್ತು ಅಮೆರಿಕದ ತಳಿಶಾಸ್ತ್ರಜ್ಞರು ಟೊಮೆಟೋ ಸಸ್ಯದ ಮೇಲೆ ಪ್ರಯೋಗ ನಡೆಸಿ, ವರ್ಣತಂತುಗಳ ಜಾಲವನ್ನೇ ಛೇದಿಸಿ, ತಮಗೆ ಬೇಕಾದ ವರ್ಣತಂತು ಹಾಗು ಡಿ.ಎನ್.ಎ. ಸರಪಳಿಯನ್ನು ಒಳಹೊಗಿಸಿ ಹೊಸಬಗೆಯ ಟೊಮೆಟೋವನ್ನು ಸೃಷ್ಟಿಸಿದ್ದು.

ಈ ಟೊಮೆಟೋವಿನಿಂದ ದೊರಕಬಹುದಾದಂತಹ ಲಾಭಗಳನ್ನು ಮಾತ್ರ ಹೇಳಬಯಸುತ್ತೇನೆ. ನಷ್ಟವೇನೆಂಬುದು ಇನ್ನೂ ಗೊತ್ತಾಗಿಲ್ಲ. ಪರಿಸರವಾದಿಗಳ ಪ್ರತಿಭಟನೆಗಳಿಂದ- ಅಮೆರಿಕದ ಎಫ್‌ಡಿಎ ಸಂಸ್ಥೆ ಈ ಟೊಮೆಟೋವನ್ನು ಮಾನವಯೋಗ್ಯ ಆಹಾರವೆಂದು ಘೋಷಿಸಿದ್ದರೂ- ಇಡಿ ಅಮೆರಿಕ ಮತ್ತು ಯುರೋಪಿನಲ್ಲಿ ಅದನ್ನು ಬಹಿ




ಷ್ಕರಿಸಲಾಗಿದೆ.

ಬೆಂಗಳೂರಿನ ಬಳಿ ಅಂತಾರಾಷ್ಟ್ರೀಯ ಸಂಸ್ಥೆಯೊಂದರ ಸಹಕಾರದಿಂದ ಈ ಟೊಮೆಟೋವನ್ನು ಹೇರಳವಾಗಿ ಬೆಳೆದು ಮಾರುಕಟ್ಟೆಗೆ ತರಲು ನಮ್ಮ ಕರ್ನಾಟಕ ಸರಕಾರ ಪರವಾನಗಿ ನೀಡಿದೆ.

ಯಾವುದೇ ಕ್ರಿಮಿಕೀಟ ಹಾಗೂ ರೋಗಾಣುಗಳ ಬಾಧೆಯೇ ಇಲ್ಲದಂತೆ ರೂಪಿಸಲಾಗಿದ್ದರಿಂದ ಈ ಟೊಮೆಟೋ ಸಸ್ಯಕ್ಕೆ ಔಷಧಿಯ ಸಿಂಪರಣೆಯೇ ಬೇಕಿಲ್ಲ. ಕಾಯಿಗಳು ಬಲಿಯುವವೇ ಹೊರತು ಗಿಡದಲ್ಲಿ ಹಣ್ಣಾಗುವುದೇ ಇಲ್ಲ. ಕೊಯ್ದ ಕಾಯಿಗಳನ್ನು ಯಾವ ನಷ್ಟದ ಭಯವೂ ಇಲ್ಲದೆ ದೇಶದ ಯಾವುದೇ ಭಾಗಕ್ಕೆ ರವಾನಿಸಬಹುದು. ಮಾರಾಟಗಾರ ಶೈತ್ಯಾಗಾರದ ಸಹಾಯವೇ ಇಲ್ಲದೆ ಹಲವಾರು ವಾರಗಳ ಕಾಲ ಟೊಮೆಟೋಗಳನ್ನು ಕಾಯ್ದಿಡಬಹುದು. ಅಂದಿನ ವ್ಯಾಪಾರ ಎಷ್ಟೆಂದು ಅಂದಾಜನ್ನು ಮಾಡಿದ ಬಿಡಿವ್ಯಾಪಾರಿಯು ಅಷ್ಟೇ ಕಾಯಿಗಳನ್ನು ಮಾರಾಟಮಳಿಗೆಗೆ ರವಾನಿಸಿ, ಅದರ ಮೇಲೆ ಒಂದು ಬಗೆಯ ಆಲ್ಕೋಹಾಲನ್ನು ಸಿಂಪಡಿಸಿದಾಗ, ಹಲವಾರು ಗಂಟೆಗಳಲ್ಲೇ ಅದು ನಯನ ಮನೋಹರವಾದ ಹಣ್ಣಾಗಿ, ತಿನ್ನಲು

ಯೋಗ್ಯವಾದ ರುಚಿಯನ್ನು ಪಡೆಯುತ್ತದೆ. ಅಷ್ಟೇ ಅಲ್ಲ, ಮನೆಗಳಲ್ಲಿ ಎರಡುವಾರಗಳ ಕಾಲ ಕೆಡದೆ ಇರಬಲ್ಲದು. ನಮಗೆ ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು? ಆದರೆ ಆ ದೇಶದ ಪರಿಸರಪ್ರಿಯರು ಇದನ್ನು ಅಲ್ಲಿಂದ ಒದ್ದೋಡಿಸಿದ್ದಾರೆ: ನಾವು ಅದನ್ನು ಇಲ್ಲಿ ಸ್ವಾಗತಿಸಿದ್ದೇವೆ. ಮನುಕುಲಕ್ಕೆ ಇದ ರಿಂದ ಅನಾಹುತವೇ ಕಾದಿದೆಯೆಂಬುದು ಅವರ ನಂಬಿಕೆ. ಕಾಲ ಮಾತ್ರ ಇದಕ್ಕೆ ಉತ್ತರವನ್ನು ನೀಡಬಲ್ಲದು. ಆ ವೇಳೆಗೆ ನಾವು ಆದರ 'ಬಲಿ ಪಶುಗಳಾಗಿರುತ್ತೇವೆಯೇ?'

### ವಂಶವಾಹಿನಿ ಎಂಜನಿಯರಿಂಗ್

ವಾಸ್ತವವಾಗಿ ಜೈವಿಕ ತಂತ್ರಜ್ಞಾನದ ಬೆಳವ ಣಿಗೆಗಳು ಡಿಎನ್‌ಎಯ ಪುನಸ್ಸಂಯೋಜಿತ ಕ್ಷೇತ್ರವೇ ಆಗಿರಬಹುದು; ಮೊನೊಕ್ಲೋನಲ್ ಪ್ರತಿ ರೋಧಕದಿಂದ ಬಂಧಿಸಿದ ಸೂಕ್ಷ್ಮಾಣುಗಳ ಕ್ಷೇತ್ರವೇ ಆಗಿರಬಹುದು. ಜೈವಿಕ ತಂತ್ರಜ್ಞಾನದ ಸಹಾಯದಿಂದ ಹಿಂದೆ ಯೋಚಿಸಲೂ ಆಗದಿದ್ದಂ ತಹ ಹಲವಾರು ಪ್ರಯೋಗಗಳನ್ನು ವಿಜ್ಞಾನಿಗಳೀಗ ಯಶಸ್ವಿಯಾಗಿ ಸಾಧಿಸಿದ್ದಾರೆ. ಜೀವವಿಜ್ಞಾನದ ಮೂಲದಿಂದ ನಮಗೆ ಮಿತವಾಗಿ ದೊರೆಯುತ್ತಿದ್ದ ಹಾರ್ಮೋನುಗಳನ್ನು, ಬೆಳವಣಿಗೆಯನ್ನು ತಡೆಯ ಬಹುದಾದ ಪದಾರ್ಥಗಳನ್ನು ಇನ್ನು ಮುಂದೆ ಸೂಕ್ಷ್ಮಜೀವಿಗಳ ಸಹಾಯದಿಂದ ಹೇರಳವಾಗಿ ಪಡೆ ಯಬಹುದು. ಜೈವಿಕ ತಂತ್ರಜ್ಞಾನದ ಸಹಾಯ ದಿಂದ ಉತ್ಪಾದಿಸಿದ ಲಸಿಕೆಗಳು ಮೊದಲು ದೊರೆ ಯುತ್ತಿದ್ದ ಲಸಿಕೆಗಳಿಗಿಂತ ಹೆಚ್ಚು ಕಾರ್ಯಕ್ಷಮವಾ ಗಿವೆ.

ಪುನಸ್ಸಂಯೋಜಿತ ಡಿಎನ್‌ಎ ಕ್ಷೇತ್ರದ ಸಂಶೋಧನೆಯ ಪ್ರಗತಿ ಮತ್ತು ನ್ಯೂಕ್ಲಿಯರ್ ಬಯಾಲಜಿ ಕ್ಷೇತ್ರಗಳ ಸಂಶೋಧನೆಯ ಲಾಭ ವನ್ನು ಪಡೆದ ಜೈವಿಕ ತಂತ್ರಜ್ಞಾನ ಇದುವರೆಗೆ ದುರ್ಭೇದ್ಯವಾಗಿದ್ದ ಪ್ರಾಣಿಗಳ ಜೀವಕೋಶವನ್ನು ಭೇದಿಸಿ, ಇಷ್ಟಬಂದಂತೆ ವರ್ಣತಂತುಗಳನ್ನು ಬದಲಾಯಿಸಿ, ಅಳವಡಿಸಬಹುದಾದ ತಂತ್ರವ ನ್ನಿಂದು ರೂಪಿಸಿದೆ. ಆದರೆ ಇದರಿಂದ ಹೊಸತ ರದ ಸಸ್ಯಗಳನ್ನು ಉತ್ಪಾದಿಸಬಹುದಾದರೂ ಹೊಸ ಬಗೆಯ ಪ್ರಾಣಿಗಳನ್ನು ನಿರ್ಮಿಸುವಷ್ಟು ಜೈವಿಕ ತಂತ್ರಜ್ಞಾನ ಇನ್ನೂ ಮುಂದುವರೆದಿಲ್ಲ.

### ವಿಜ್ಞಾನಿಗಳ ಗುರಿ:

ಹೆಚ್ಚು ಉಪಯೋಗಕರವಾದ ಸಸ್ಯಜನ್ಯ ಅಥವಾ ಪ್ರಾಣಿಜನ್ಯ ಪದಾರ್ಥಗಳನ್ನು ನಿರ್ಮಿಸು ವುದೇ ವಿಜ್ಞಾನಿಗಳ ಗುರಿ. ವಿಜ್ಞಾನಿಗಳ ದೃಷ್ಟಿಯಲ್ಲಿ ಈ ರೀತಿಯ ಬದಲಾವಣೆಗಳಲ್ಲಿ ಎಲೆಗಳೂ ಗಡ್ಡೆ ಗೆಣಸುಗಳೂ ಆಹಾರಧಾನ್ಯಗಳೂ ಫಲಗಳೂ ಅಥವಾ ಪ್ರಾಣಿಜನ್ಯವಾದ ಹಾಲು,. ಮೊಟ್ಟೆ, ಮಾಂಸ ಮತ್ತಿತರ ಉತ್ಪನ್ನಗಳೂ ಸೇರಿವೆ. ಅಷ್ಟೇ ಅಲ್ಲ, ತೋಟಗಾರಿಕೆಯ ಉತ್ಪನ್ನಗಳೂ ಎಣ್ಣೆಕಾಳು ಗಳೂ ಮತ್ತು ತಾಳೆ ಜಾತಿಯ ಸಸ್ಯಗಳೂ, ರಬ್ಬರ್ ಮರಗಳೂ ಮತ್ತು ಮುಖ್ಯವಾಗಿ ಅರಣ್ಯೋತ್ಪಾದನೆ ಸಹ ಸೇರಿವೆ. ಈಗಿರುವ ಸಾಂಪ್ರದಾಯಿಕ ಪದ್ಧತಿ ಗಳಿಗೆ ವಿರುದ್ಧವಾಗಿ, ಒಂದೇ ಹಂತದಲ್ಲಿ ಹತ್ತಿರ ವಾದ ನೇರ ಮಾರ್ಗದಲ್ಲಿ ಮೇಲೆ ವಿವರಿಸಿದ ಗುರಿಯನ್ನು ತಲಪುವುದೇ ತಳಿ ತಂತ್ರಜ್ಞಾನದ ಉಪಯೋಗ. ಬಳಕೆದಾರರು ಬಯಸಿದ ಮಾದ ರಿಯಲ್ಲೇ ಅವರಿಗೆ ಬೇಕಾದಂತೆ ಹೆಚ್ಚಿನ ಇಳುವರಿ ಕೊಡುವ ಉನ್ನತ ಗುಣಮಟ್ಟ, ಜೀವರಾಸಾಯನಿಕ ರಚನೆಗಳನ್ನು ಹೊಂದಿದ, ರೋಗ ಮತ್ತು ಕ್ರಿಮಿ ಕೀಟಗಳ ಬಾಧೆ ತಗುಲದ, ಶೀತ ನಿರೋಧಕ ಶಕ್ತಿಯಿರುವ, ಶುಷ್ಕ ವಾತಾವರಣಗಳನ್ನೆದುರಿಸ ಬಲ್ಲ, ತನಗೆ ಬೇಕಾದ ಸಾರಜನಕವನ್ನು ನೇರವಾಗಿ ವಾಯುಮಂಡಲದಿಂದ ಪಡೆಯುವಂತಹ, ತನ್ಮೂಲಕ ರಸಗೊಬ್ಬರಗಳ ವೆಚ್ಚ ಉಳಿಸುವಂತಹ ಸಸ್ಯಗಳ ನಿರ್ಮಾಣದಲ್ಲಿ ವಿಜ್ಞಾನಿಗಳು ಮಗ್ನರಾಗಿ ದ್ದಾರೆ.

ಹೀಗೆ ಹಸಿದ ಜಗತ್ತಿಗಿರುವ ಒಂದೇ ಒಂದು ಆಶಾಕಿರಣವೆಂದರೆ ಜೈವಿಕ ತಂತ್ರಜ್ಞಾನ. ಅದು ಹೊಟ್ಟೆಯನ್ನು ತುಂಬಿಸಬಲ್ಲದಷ್ಟೇ ಅಲ್ಲ, ಹೊಸ ತಳಿಗಳನ್ನು ನಿರ್ಮಿಸುವ ಮೂಲಕ ಹೊಸ ರುಚಿಯನ್ನೂ ನೀಡಬಲ್ಲದು. ●

## ಬೇಂದ್ರೆ ನೆನಪು



# ಕುರಿತೋದದೆಯುಂ ಅರಿವ ಮಾಂತ್ರಿಕನ ಮೋಡಿ!

ಹತ್ತಿರ ಹತ್ತಿರ ನಲವತ್ತು ವರ್ಷಗಳ ಹಿಂದಿನ ಮಾತು. ಆಗ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ತರಗತಿಯ ಕೆಲವರು ಧಾರವಾಡದ ಗಟ್ರೇಕಾ ಹಾಸ್ಟೇಲಿನ ಒಂದು ಭಾಗದಲ್ಲಿದ್ದೆವು. ಒಂದು ದಿನ ಗೆಳೆಯ ಗಂಗಾಧರ್ ಅವರು ತಮ್ಮೂರಾದ ತೀರ್ಥಹಳ್ಳಿಯಿಂದ ಬಂದ ಸ್ನೇಹಿತರ ಪತ್ರದಂತೆ, ಶ್ರೀ ಬೇಂದ್ರೆಯವರನ್ನು ಭೆಟ್ಟಿಯಾಗಲು ಹೊರಟಾಗ ನಾವೂ ಒಂದಿಬ್ಬರು ಜೊತೆ ಸೇರಿದೆವು, ಮಹಾನ್ ವ್ಯಕ್ತಿಯನ್ನು ಕಾಣುವ ಕುತೂಹಲದಿಂದ. ಬೇಂದ್ರೆಯವರು ಆಗ ನಿವೃತ್ತರಾಗಿ ಆಕಾಶವಾಣಿಯಲ್ಲಿ ಕೆಲಸಮಾಡುತ್ತಿದ್ದರು.

ನಾವು ಅವರ ಕೊಠಡಿಯ ಬಾಗಿಲಿಗೆ ಹೋದಾಗ, ಬೇಂದ್ರೆಯವರು ಎದುರಿನ ಬೀರುವೊಂದರ ಮುಂದೆ ನಿಂತು ಯಾವುದೋ ಪತ್ರವನ್ನೋ ಕಡತವನ್ನೋ ಹುಡುಕುತ್ತಿದ್ದರು. ಬಾಗಿಲಿಗೆ ಬಂದ ನಮ್ಮನ್ನು "ಬರ್ರಿ" ಎಂದು ಕರೆದರೂ, ತಮ್ಮ ಕೆಲಸದಲ್ಲಿ ಮಗ್ನರಾಗಿ, ಹಾಗೇ ಮಾತನ್ನೂ ಮುಂದುವರೆಸಿದರು. ಗಂಗಾಧರ್ ನಾವು ಬಂದ ವಿಷಯ ತಿಳಿಸಿದರು.

"ಹೌದ್ರಿ, ಸನ್ಮಾನ ಅಂದಿದಾರೆ, ಕರೆದಾರೆ, ಬರ್ತೀನಿ ಅಂತ ಒಪ್ಪೀನಿ, ಎಸ್.ವಿ. ಕೃಷ್ಣಮೂರ್ತಿರಾಯರೂ ಬರಲಿಲ್ಲ" ಎಂದರು.

"ಹಾಗಾದರೆ ಯಾವ ದಿನ ಅನುಕೂಲವಾದೀತು?" ಎಂದು ಗಂಗಾಧರ್ ಕೇಳಿದರು.

"ಹೇಳೀನಲಾ, ಕೃಷ್ಣಮೂರ್ತಿರಾಯರು ದಿಲ್ಲಿಯಿಂದ ಬಂದಾಗ ಅವರೊಟ್ಟಿಗೆ ಬರೋಣಂತೆ," ಎನ್ನುತ್ತಾ ತಮ್ಮ ಟೇಬಲ್ಲಿಗೆ ಬಂದರು.

"ಏರ್ಪಾಡಿಗೆ ಅನುಕೂಲವಾಗಲು ಸನ್ಮಾನ ಸಮಾರಂಭದ ದಿನ ನಿಗದಿ ಮಾಡಿದರೆ ಒಳಿತು. ಅದಕ್ಕಾಗಿ ಕೇಳಿ ಬರೆದಿದ್ದಾರೆ, ತಮ್ಮಿಂದ ಉತ್ತರ ಬರಲಿಲ್ಲವೆಂದು ನನ್ನನ್ನು ಕಳಿಸಿದ್ದಾರೆ, ದಿನ ಕೇಳಿ ಬರೆಯಲು," ಎಂದು ಗಂಗಾಧರ್ ಬಿಡದೆ ಅವರಿಂದ ನಿರ್ದಿಷ್ಟ ಉತ್ತರಕ್ಕಾಗಿ ಕೇಳೇ ಕೇಳಿದರು.

ಸೊಂಟದ ಮೇಲೆ ಒಂದು ಕೈಯಿಟ್ಟು, ಟೋಪಿಯನ್ನು ನಸು ಹಿಂದಕ್ಕೆ ಬಾಗಿಸಿದ್ದ ಬೇಂದ್ರೆಯವರು, ಮತ್ತೊಂದು ಕೈಯನ್ನು ಆಡಿಸುತ್ತಾ, "ಹಾಂ ಹಾಂ ಗೊತ್ತದೆ, ನಿಮ್ಮ ಸ್ನೇಹಿತರು ಪತ್ರಾ ಬರೆದಾರೆ. ಟೆಲಿಗ್ರಾಂ ಕೊಟ್ಟಾರೆ, ಎಲ್ಲಾ ಇಲ್ಲೇ ಇವೆ ನೋಡ್ರಿ, ಟೇಬಲ್ ಮೇಲೆ ಹಾಗೇ ಇಟ್ಟೇನಿ, ಒಂದೂ ಒಡೆದು ನೋಡಿಲ್ಲ, ಮೊನ್ನೇನೂ ಮತ್ತೆ ಟೆಲಿಗ್ರಾಂ ಬಂದದೆ, ಅದೂ ಹಂಗೇ ಅದೆ. ತೆಗೆದೇ ಇಲ್ಲ ನೋಡ್ರಿ. ಸ್ನೇಹಿತರಿಗೆ ತಿಳಿಸ್ರಿ, ದಿಲ್ಲಿಗೆ ಬರೆದು ಕೃಷ್ಣಮೂರ್ತಿರಾಯರು ಎಂದು ಬರೋರ‍್ರು ತಿಳಿದು, ದಿನ ನಿಗದಿ ಮಾಡಿ ನನಗೆ ಪತ್ರ ಹಾಕೂ ಅನ್ರಿ, ಆಯ್ತಲ್ಲ" ಎಂದು ಬಹಳ ಸರಳವಾಗಿ ಮುಗ್ಧ ರೀತಿಯಲ್ಲಿ ಹೇಳಿದರೂ, ಅವರ ಹಾವಭಾವ, ಮಾತಿನ ಸರಣಿಯ ಮೋಡಿ, ಅವು ಕುಣಿದು ಬರುವ ಧ್ವನಿ ಲಾಲಿತ್ಯ ನಮ್ಮನ್ನು ಮಂತ್ರಮುಗ್ಧರನ್ನಾಗಿ ಮಾಡಿತು.

ಅವರಿಗೆ ವಂದಿಸಿ ಹಿಂದೆ ಹೊರಟೆವು, ಬಂದ ದಾರಿಗೆ ಸುಂಕ ಇಲ್ಲವೆಂಬಂತೆ. ಪತ್ರ-ಟೆಲಿಗ್ರಾಂ ಯಾವುದನ್ನೂ ಒಡೆದು ಓದದೇ ಇದ್ದ ಮೇಲೆ, ಓದದೆಯೇ ವಿಷಯ ಗ್ರಹಿಸಿದ ನಂತರ ನಾವು ಹೇಳುವುದೇನು ಉಳಿದಿತ್ತು! ಉಳಿದದ್ದೆಂದರೆ ಅಳಿಸಲಾರದಂತಹ ಮೋಹಕ ಮೋಜಿನ ಪ್ರಸಂಗ ಮಾತ್ರ.

• ಕೆ. ರಾಮಮೋಹನ್

# ಸ್ಪಷ್ಟ ದಿಕ್ಕಿನಲ್ಲಿ ದಿಟ್ಟ ಹೆಜ್ಜೆಗಳು

ಹಣ್ಣೆಲೆಗಳು ಉದುರಿ ಮರಗಿಡಗಳಲ್ಲಿ ಹೊಸ ಚಿಗುರು ಸಂಭ್ರಮಿಸುವ ವಸಂತಕಾಲ.
ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತಿರುವ ಕರ್ನಾಟಕದ ಹೊಸ ಸರ್ಕಾರವು ಸಮೃದ್ಧ ಕರ್ನಾಟಕ ನಿರ್ಮಾಣದತ್ತ
ದೃಢ ಹೆಜ್ಜೆಗಳನ್ನು ಇಡುತ್ತಿರುವ ಪರ್ವಕಾಲವೂ ಹೌದು.
ನುಡಿದಂತೆ ನಡೆವ ಶ್ರೀ ಹೆಚ್.ಡಿ. ದೇವೇಗೌಡರ ನೇತೃತ್ವದ ಈ ಸರ್ಕಾರ ಅನುಷ್ಠಾನಕ್ಕೆ ತಂದಿರುವ ಯೋಜನೆಗಳು ಹತ್ತು ಹಲವು.




**ರಿಯಾಯಿತಿ ದರದಲ್ಲಿ ಅಕ್ಕಿ:**



ಹಸಿರು ಪಡಿತರ ಚೀಟಿ ಹೊಂದಿರುವ 52 ಲಕ್ಷ ಕುಟುಂಬಗಳಿಗೂ ರಿಯಾಯಿತಿ ದರದಲ್ಲಿ ಅಕ್ಕಿ ಪೂರೈಕೆ. ಕೊಟ್ಟ ಮಾತಿನಂತೆ ಬೇವು - ಬೆಲ್ಲ ಸವಿಯುವ ಶುಭದಿನದಿಂದ ಈ ಯೋಜನೆ ಆರಂಭವಾಗಿದೆ. ಕೆ.ಜಿ.ಗೆ ರೂ.3-20 ನಂತೆ ಪ್ರತಿತಿಂಗಳೂ 10 ಕೆ.ಜಿ. ಅಕ್ಕಿ

**ಕುಡಿಯುವ ನೀರು:**



ಕುಡಿಯುವ ನೀರು ಪೂರೈಕೆಗೆ ಈ ವರ್ಷ ಹೆಚ್ಚಿನ ಆದ್ಯತೆ. ಹಿಂದಿನ ವರ್ಷಕ್ಕಿಂತ ಶೇ. 19.8 ರಷ್ಟು ಹೆಚ್ಚಿನ ಅನುದಾನ. ಬಿರು ಬೇಸಿಗೆಯಲ್ಲಿ ನೀರಿನ ಸಮಸ್ಯೆಯ ಪರಿಹಾರಕ್ಕೆ ರೂ.104 ಕೋಟಿ ಬಿಡುಗಡೆಗೆ ಕ್ರಮ. ತಕ್ಷಣವೇ ಅಗತ್ಯವಿದ್ದೆಡೆ ಕೊಳವೆಬಾವಿ ಕೊರೆಯಲು ಆದೇಶ.



ಕರ್ನಾಟಕ ವಾರ್ತೆ

## ಆರೋಗ್ಯ ನಿಧಿ:

ಆಧುನಿಕ ಚಿಕಿತ್ಸಾ ಸೌಲಭ್ಯಗಳನ್ನು ಬಡಜನರಿಗೂ ವಿಸ್ತರಿಸಲು ಒಂದುನೂರು ಕೋಟಿ ರೂ.ಗಳ 'ಆರೋಗ್ಯ ನಿಧಿ' ಸ್ಥಾಪನೆ. ಸರ್ಕಾರದಿಂದ ಈ ನಿಧಿಗೆ **ಹತ್ತು ಕೋಟಿ ರೂ.** ವಂತಿಗೆ. ಹೃದ್ರೋಗ, ಕ್ಯಾನ್ಸರ್, ನ್ಯೂರೊಸರ್ಜಿಕಲ್ ಖಾಯಿಲೆಗಳು, ಮೂತ್ರಪಿಂಡ ಸಂಬಂಧಿತ ರೋಗಪೀಡಿತ ಬಡಜನರಿಗೆ ಈ ನಿಧಿಯಿಂದ ನೆರವು.

## ರಾಜ್ಯ ಯುವ ಪರಿಷತ್ತು:

ಯುವ ಜನ ಶಕ್ತಿಯನ್ನು ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗಿಸುವ ಸಲುವಾಗಿ ನೀತಿ ರೂಪಿಸಲು ಯುವ ಪರಿಷತ್ತಿನ ಸ್ಥಾಪನೆ. ಇದಕ್ಕಾಗಿ **5 ಕೋಟಿ** ರೂ.ಗಳ ಅನುದಾನ.

## ಬಡ್ಡಿಮನ್ನಾ:

ರೈತಾಪಿ ಜನರಿಗಾಗಿ ಹಲವಾರು ಕಾರ್ಯಕ್ರಮಗಳು. ನಿಗದಿತ ಅವಧಿಯೊಳಗೆ, ಮರುಪಾವತಿ ಮಾಡಿದ ಸಹಕಾರೀ ಸಾಲಕ್ಕೆ ಬಡ್ಡಿ ಮನ್ನಾ ಯೋಜನೆಯ ಅನುಷ್ಠಾನ.

## ಆಡಳಿತ ವಿಕೇಂದ್ರೀಕರಣ:

ಹೊಸ ಸರ್ಕಾರ ರಚನೆಗೆ ಜನತೆ ತೋರಿರುವ ಒಲವಿಗೆ ಪ್ರತಿಯಾಗಿ ಜನತೆಗೇ ಅಧಿಕಾರ ನೀಡುವ ಪಂಚಾಯತ್ ವ್ಯವಸ್ಥೆಯ ಬಲವರ್ಧನೆ.

**ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯಿತಿಗಳಿಗೆ ಮಾರ್ಚ್ '95ರಲ್ಲೇ ಶಾಂತಿಯುತ ಚುನಾವಣೆ ನಡೆಸಿದ ಸಂತಸ.**

## ಮನೆ ಬೆಳಕು:

ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಗಾಗಿ, 'ಮನೆ ಬೆಳಕು' ನೂತನ ಯೋಜನೆ. ಗ್ರಾಮೀಣ ಪ್ರದೇಶದ ಮಹಿಳೆಯರೂ ಸೇರಿದಂತೆ ಎಲ್ಲರನ್ನೂ ಆರ್ಥಿಕ ಚಟುವಟಿಕೆಗಳಿಗೆ ತೊಡಗಿಸುವ ಕಾರ್ಯಕ್ರಮ. ಇದಕ್ಕೆ **ರೂ.60 ಲಕ್ಷ** ನಿಗದಿ.

## ನೀರಾವರಿ:



ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ತ್ವರಿತವಾಗಿ ಪೂರ್ಣಗೊಳಿಸಲು ಕ್ರಮ. 'ಕೃಷ್ಣಾ ಭಾಗ್ಯ ಜಲ ನಿಗಮ' ಸರ್ಕಾರದ ಅನುದಾನ ಹಾಗೂ ಬಂಡವಾಳ ಮಾರುಕಟ್ಟೆಯಿಂದ ಸಾಲ ಪಡೆದು ಬಂಡವಾಳ ಪೂರೈಕೆ.

## ಆಧಾರ:



ನಾಲ್ಕು ಲಕ್ಷಕ್ಕೂ ಹೆಚ್ಚಿರುವ ಅಂಗವಿಕಲರಿಗಾಗಿ, 'ಆಧಾರ' ಯೋಜನೆ ಅನುಷ್ಠಾನ. ಈ ವರ್ಷ ಒಂದುಸಾವಿರ ಅಂಗಡಿಗಳನ್ನು ಆರಂಭಿಸಲು ಅಂಗವಿಕಲರಿಗೆ ಪ್ರತಿಯೊಂದು ಅಂಗಡಿಗೂ **10** ಸಾವಿರ ರೂ. ನೆರವು. ಇದಕ್ಕಾಗಿ ಒಂದು **ಕೋಟಿ** ರೂ.ಗಳ ನಿಗದಿ. ಅಂಗವಿಕಲರಿಗಾಗಿಯೇ ದುಡಿಯುತ್ತಿರುವ ಸ್ವಯಂ ಸೇವಾ ಸಂಘ - ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಲು **50** ಲಕ್ಷ ರೂ. ಅನುದಾನ.

## ಜನತಾ ದರ್ಶನ:



ಜನತೆಯ ಸಂಕಷ್ಟಗಳಿಗೆ ಮುಖ್ಯಮಂತ್ರಿಗಳಿಂದ ನೇರ ಸ್ಪಂದನ. ಸಮಸ್ಯೆಗಳ ನೇರಪರಿಹಾರಕ್ಕೆ ಮುಖ್ಯಮಂತ್ರಿಗಳಿಂದಲೇ ಅಹವಾಲು ಸ್ವೀಕಾರ. ಹಲವು ಸಮಸ್ಯೆಗಳಿಗೆ ಖಚಿತ ಪರಿಹಾರ.

## ವಸತಿ:

ದುರ್ಬಲ ವರ್ಗದವರಿಗೆ ವಿವಿಧ ಯೋಜನೆಗಳನ್ವಯ **ಒಂದು ಲಕ್ಷ** ಮನೆಗಳ ನಿರ್ಮಾಣ. ಫಲಾನುಭವಿಗಳ ಆಯ್ಕೆಗೆ ಹೊಸ ಸೂತ್ರ.

## ಶಿಕ್ಷಣ:



**12,000** ಶಾಲಾ ಕೊಠಡಿಗಳ ನಿರ್ಮಾಣ.

ಪಾಲಿಟೆಕ್ನಿಕ್‌ಗಳಲ್ಲಿ ಮಹಿಳೆಯರಿಗೆ ಶೇ.**30** ಸ್ಥಾನ. ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ತೀರ್ಮಾನ. ಸಂಪೂರ್ಣ ಸಾಕ್ಷರತಾ ಆಂದೋಲನದಿಂದ **9** ರಿಂದ **35** ವರ್ಷ ವಯಸ್ಸಿನ **80** ಲಕ್ಷ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವುದು ಸರ್ಕಾರದ ಗುರಿ.

**ನುಡಿದಂತೆ ನಡೆಯುತ್ತಿರುವ ಸರ್ಕಾರ**

## ತೆಲುಗು ಕಥೆ

# ತೃಪ್ತ ಹೃದಯಿ

ಮೂಲ: ಬೊಂಪಿಳ್ಳಿ ಪದ್ಮ                ಅನುವಾದ: ಪದ್ಮಜಾ ವಾದಿರಾಜ್

ವಯಸ್ಸಾದಂತೆಲ್ಲಾ.... ಯೋಚಿಸುವ ಶಕ್ತಿ ಜಾಸ್ತಿಯಾದಂತೆ.... ರಾತ್ರಿಯ ನಿದ್ದೆಯ ಸುಖ ಕ್ರಮವಾಗಿ ದೂರವಾಗುತ್ತದೇನೋ ಅಂದರೆ ನನ್ನ ಉದ್ದೇಶದಲ್ಲಿ, ಬಹಳ ಹೊತ್ತಿನವರೆಗೂ ನಿದ್ರೆಬಾರದಿರುವುದು ಬೆಳಗಾಗುವ ಮುನ್ನವೇ ಎಚ್ಚರವಾಗುವುದು.... ಇವೆಲ್ಲಾ ಕ್ರಮೇಣ ಆಗುತ್ತಿರುವಾಗ ನನ್ನ ಚಿಕ್ಕಂದಿನಲ್ಲಿ ನನ್ನ ಅಜ್ಜಿಯ ಪಕ್ಕದಲ್ಲಿ ಮಲಗಿ ಅವರ ಹೊಟ್ಟೆಯ ಮೇಲೆ ಕೈ ಹಾಕಿಕೊಂಡು ಒತ್ತಿಕೊಂಡು ಮಲಗುತ್ತಿದ್ದುದು ಒಂದು ರೀತಿಯಾದರೆ, ಅವರು ಗೊರಕೆ ಹೊಡೆಯುವುದನ್ನು ಕೇಳಿದಾಗ ಉಂಟಾಗುತ್ತಿದ್ದ ಅಸಹನೆ!... ಯಾವಾಗಲೊ.... ಅರ್ಧ ರಾತ್ರಿಯಲ್ಲಿ ನಿದ್ರೆಯಿಂದೆದ್ದು.... ಬದುಕಿನಲ್ಲಿ ಎದುರಾಗುತ್ತಿರುವ ಸಮಸ್ಯೆಗಳನ್ನು ನೆನೆಸಿಕೊಂಡು..... ಅದನ್ನು ಮರೆಯಲು ಪ್ರಯತ್ನಿಸುತ್ತಿದ್ದಾಗ.... 'ಈ ಮುದುಕರಿಗೇನು ಕೆಲಸವಿರೊಲ್ಲ' ಎಂದು ಬೈದುಕೊಂಡು ಹೋಗುತ್ತಿದ್ದೆ! ನಮ್ಮಜ್ಜಿಯ ಅವಸ್ಥೆಯೇ ನನಗೂ ಬಂದಿತ್ತು.

ತಲೆ ಎತ್ತಿ ಗೋಡೆ ಗಡಿಯಾರದತ್ತ ನೋಡಿದೆ.... ಐದೂವರೆ ಗಂಟೆ ಇರಬಹುದು..... ನನಗೆ ಎಚ್ಚರವಾಗಿ ಸುಮಾರು ಎರಡು ಘಂಟೆಗಳ ಕಾಲ ಆಗಿರಬಹುದು. ಆಗಿನಿಂದಲೂ ಆ ಪಕ್ಕಕ್ಕೆ ಈ ಪಕ್ಕಕ್ಕೆ ಹೊರಳಾಡಿ ಕಣ್ಣನ್ನು ಗಟ್ಟಿಯಾಗಿ ಮುಚ್ಚಿಕೊಂಡರೂ..... ಸ್ಥಿಮಿತದಿಂದಿರದಾದೆ.

ಇನ್ನು ನಿದ್ರೆ ಬಾರದೆಂದು ತಿಳಿದು ಎದ್ದು ಕುಳಿತು ಪಕ್ಕಕ್ಕೆ ನೋಡಿದೆ.

ಪಕ್ಕದ ಮಂಚದಲ್ಲಿ.... ನನ್ನ ಶ್ರೀಮತಿ, ಚಿಕ್ಕಮಗಳು ಪ್ರದೀಪಾ ಶಾಂತರಾಗಿ ನಿದ್ರಿಸುತ್ತಿದ್ದರು..... ಇನ್ನೊಂದು ಮಂಚದಲ್ಲಿ ಮೂರನೆಯವಳು ತೇಜಸ್ವಿ.... ಅವಳ ಮುಖದಲ್ಲಿ ಕಿರುನಗೆ ಸ್ಪಷ್ಟವಾಗಿ ಕಾಣುತ್ತಿತ್ತು..... ನಿದ್ರೆಯಲ್ಲಿನ ಸುಖವನ್ನು ಅನುಭವಿಸುತ್ತಿರುವ ಅವರೆಲ್ಲರ ಅದೃಷ್ಟವನ್ನು ಕಂಡು ಅಸೂಯೆಪಡುವಂತಾಯ್ತು. ಬಾಗಿಲು ತೆರೆದುಕೊಂಡು ಹೊರಗಡೆ ಬಂದೆ.

ಸಣ್ಣಗೆ ಛಳಿ... ತುಂತುರು ತುಂತುರಾಗಿ ಮಂಜು ಸುರಿಯುತ್ತಿತ್ತು. ಹುಲ್ಲಿನ ಮೇಲೆ ಮಂಜು ಸುರಿದು ಬಿಳಿ ಬಟ್ಟೆ ಹಾಸಿದಂತಿತ್ತು. ಹತ್ತಿರವೇ ಹಾಕಿದ್ದ ನೈಟ್‌ಕ್ವೀನ್ ಸುವಾಸನೆ ಹೊರಸೂಸುತ್ತಿತ್ತು. ಆ ಪರಿಸರವನ್ನು ಬಿಟ್ಟು ಬರಲು ಮನಸ್ಸಾಗದೆ.... ಆ ಸುವಾಸನೆ ಮತ್ತು ಬರಿಸುವಂತಿದ್ದು.... ಅದನ್ನು ಆಸ್ವಾದಿಸಲು ಅಗತ್ಯವಾದ ಸಹನೆ, ಭಾವುಕತೆ ನನ್ನಿಂದ ಎಂದೋ ದೂರವಾಗಿದ್ದರೂ ಮನಸ್ಸು ಕೊಂಚ ಚಂಚಲವಾಯಿತು.

ನೇರವಾಗಿ ಎದುರಿಗೆ ನೋಡಿದೆ ಕೆಲ ಗಜಗಳ ದೂರದಲ್ಲಿದ್ದ ಎದುರು ಮನೆಯ ಮುಂದೆ... ದಾವಣಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಒಬ್ಬ ಹುಡುಗಿ ರಂಗವಲ್ಲಿ ಹಾಕುತ್ತಿದ್ದಳು. ಆ ಹುಡುಗಿ ವೈಶಾಲಿ.... ಹೌದು ವೈಶಾಲಿಯೇ. ನನ್ನನ್ನು ನೋಡಿದ ತಕ್ಷಣವೇ ಅವಳ ತುಟಿಗಳ ಮೇಲೆ ನಗೆಯ ಮಿಂಚು ಹೊಳೆಯಿತು.

ಅವರು ಹಿಂದಿನ ದಿನ ತಾನೇ ಆ ಮನೆಗೆ

ಬಾಡಿಗೆಗೆ ಬಂದಿದ್ದರು. ಮನೆಗೆ ಬಂದ ಸ್ವಲ್ಪ ಹೊತ್ತಿನಲ್ಲೇ ದಾವಣಿಯ ತುದಿಯನ್ನು ಬೆರಳಿಗೆ ಸುತ್ತಿಕೊಂಡು ಮನೆಯ ಮುಂದೆ ಕುಳಿತಿದ್ದ ನನ್ನ ಬಳಿಗೆ ಬಂದು...

"ಆಗಿನಿಂದ ನೋಡ್ತಾ ಇದೀನಿ.... ನಿಮ್ಮ ಮುಖದಲ್ಲಿ ನಗುವಿನ ಸುಳಿವೇ ಕಾಣ್ತಿಲ್ಲ.... ಯಾಕೆ?... ನಗ್ಬೇಕು ಅಂಕಲ್.... ಈ ಜಿಗುಪ್ಸಾ ಮಯವಾದ ಜೀವನದಲ್ಲಿ ನಮಗಿರುವ ಒಂದೇ ಒಂದು ಅದೃಷ್ಟ ಅಂದರೆ 'ನಗು...' " ಎಂದು ಸರಸರನೆ ಹೇಳಿದಾಗ.... ನಿಜ ಹೇಳಬೇಕೆಂದರೆ.... ಆ ಹುಡುಗಿಯ ಧೈರ್ಯವನ್ನು ಕಂಡು ತಕ್ಷಣ ಏನೋ ಒಂದು ರೀತಿಯ ಆಪ್ಯಾಯತೆಯುಂಟಾಯ್ತು. ಅದೇ ಮೊದಲು! ಅವಳ ಮುಖವನ್ನು ಪರೀಕ್ಷಾ ದೃಷ್ಟಿಯಿಂದ ನೋಡಿದ್ದು....

ಅವಳು ಮೊದಲ ಬಾರಿಗೆ ನನ್ನನ್ನು ನೋಡುತ್ತಿದ್ದರೂ ಈ ಹುಡುಗಿಗೆ ಎಷ್ಟು ಧೈರ್ಯ, ಸಲಿಗೆ ಇದೆ ಎನ್ನಿಸಿತು!

"ಲೇ..... ವೈಶೀ..." ಎಂದು ಎದುರು ಮನೆಯಿಂದ ಕೀಚಲು ಧ್ವನಿಯ ಕರೆ ಕೇಳಿಸಿತು. ಅದು ಹೆಂಗಸಿನದೇ ಕರೆ....

"ಓ.... ನಮ್ಮ ಹಿಟ್ಲರ್‌ನಿಂದ ಕರೆ ಬಂದಿದೆ. ಆಮೇಲೆ ಬರ್ತೀನಿ ಅಂಕಲ್.." ಎನ್ನುತ್ತಾ, "ಅಂದ ಹಾಗೆ.... ನನ್ನ ಹೆಸರು ವೈಶಾಲಿ.... ನನ್ನ ಹೆಸರು ಅಂದ್ರೆ ನಂಗೆ ತುಂಬಾ ಇಷ್ಟ..... ಯಾಕೆಂದ್ರೆ.... ಅದು ನಮ್ಮಮ್ಮ ಇಟ್ಟ ಹೆಸರಲ್ವಾ?" ಎಂದು ಹೇಳಿ, ಕ್ಷಣದಲ್ಲೇ ಮಾಮೂಲಾಗಿ ನನ್ನ ಎದಿರಿ



ನಿಂದ ಮಾಯವಾಗಿದ್ದಳು.

"ಯಾರ್ರೀ ಅದು!" ಆಗ ತಾನೇ ಹೊರಬಂದ ಶಾರದ ಕೇಳಿದಳು.

"ಎದುರು ಮನೆಗೆ ಬಂದಿದಾರಲ್ಲಾ.... ಆ ಮನೆಯ ಹುಡುಗಿ..."

"ಆ ಹುಡುಗೀನ ನೋಡಿದ್ರೆ ಬಹಳ ಚುರುಕಾಗಿ ಕಾಣಿಸ್ತಾಳೆ.... ಆಗಲೇ ಏನೋ ನಿಮಗೆ ಸಲಹೆ ಕೊಡ್ತಾ ಇದ್ಲು...?"

"ಹೌದು," ಎಂದು ಹೇಳಿ ಮೆಲುನಗೆ ನಕ್ಕೆ. ಶಾರದಾ ಕದ್ದು ಕೇಳಿಸಿಕೊಂಡಿದ್ದಾಳೆ ಅನ್ನಿಸಿತು.

ಹಿಂದಿನ ದಿನದ ಘಟನೆಯನ್ನು ನೆನೆಸಿಕೊಂಡು.... ವೈಶಾಲಿ ಬರುತ್ತಿದ್ದಾಳೇನೋ ಎಂದು ನೋಡಿದೆ.

ಅವಳನ್ನು ನೋಡುತ್ತಿದ್ದರೆ.... ಎಂದೋ ಕಾಲೇಜು ದಿನಗಳಲ್ಲಿ ನನ್ನ ಕ್ಲಾಸ್‌ಮೇಟ್ ಆಗಿದ್ದ ಶಾರ್ವರಿಯ ನೆನಪು ಬರುತ್ತಿತ್ತು.

ಅರ್ಧ ರಾತ್ರಿಯಲ್ಲಿ.... ಒಂಟಿಯಾಗಿ ಕುಳಿತು.... ಡೈರಿಯಲ್ಲಿ ಬರೆಯುತ್ತಿದ್ದುದು ನೆನಪಿಗೆ ಬಂತು. ಆ ಬರಹಗಳನ್ನು ನಾನು ಕವಿತೆ ಎಂದೇ ಭಾವಿಸುತ್ತಿದ್ದೆ.

**ಮೋಹದ ಕತ್ತಲು ಕವಿಯುತ್ತಿದ್ದಾಗ**
**ಮೇಘ ಒಂದು ಬಾಗಿ ಹೇಳಿತ್ತು ಗುಟ್ಟಾಗಿ,**
**ನಕ್ಷತ್ರ ಗುಂಪಿನಿಂದ ಒಂಟಿ ನಕ್ಷತ್ರ**
**ಒಂದು ಜಾರಿತೋ,**
**ಈ ಮಂಜು ಪರ್ವತದ ಮೇಲೆ**
**ಕಂಡೆಯಾ ನೀನು?**
**ನೋಡಿದರೆ ಹೇಳು**
**ಕೊಂಡೊಯ್ಯುವೆ ನಾನು**
**ಅನುಮಾನ ನನಗೆ, ಆ ನಕ್ಷತ್ರವೇ ನೀನೋ!**

ನಂತರ ಎಂದೋ ಒಂದು ದಿನ ಶಾರ್ವರಿ ತನ್ನ ಲಗ್ನ ಪತ್ರಿಕೆಯನ್ನು ನನ್ನ ಕೈಲಿಟ್ಟು ಹೋಗುವಾಗ.... "ರಹಸ್ಯವಾಗಿ ಪ್ರೇಮಿಸುವುದರಿಂದ ಉಪಯೋಗವೇನಿಲ್ಲ ಬಾಲೂ," ಎಂದಿದ್ದಳು.

ಕೆಲದಿನಗಳ ಕಾಲ ನನ್ನ ಅಸಮರ್ಥತೆಯ ಮೇಲೆ ನನಗೇ ಕೋಪ ಬಂದು ನೊಂದುಕೊಂಡರೂ ಕ್ರಮೇಣ ಆ ದಿನಗಳನ್ನು ಮರೆತೆ.... ಹಾಗೇ ನನ್ನ ಮನಸ್ಸಿನಿಂದ ಶಾರ್ವರಿಯನ್ನು ದೂರಮಾಡಿಕೊಂಡೆ!!

ಈಗ ಇಲ್ಲಿ.... ಅಂದಿನ ಶಾರ್ವರಿಯ ಮುಗ್ಧತೆ.... ಆ ಪ್ಲಸೆಂಟ್‌ನೆಸ್... ಎಲ್ಲಾ ಈ ವೈಶಾಲಿಯಲ್ಲಿ ಕಂಡು ಬರುತ್ತಿದ್ದುವು.

ಇವನ್ನೆಲ್ಲಾ ವೈಶಾಲಿಯಲ್ಲಿ ನೋಡಿ...

'ವೈಶಾಲಿ ಆ ಶಾರ್ವರಿಯ ಮಗಳಲ್ಲವಷ್ಟೇ!' ಎಂದುಕೊಂಡೆ.

ವೈಶಾಲೀ!... ಛೆ... ನನ್ನ ಅನುಮಾನ ನನ್ನನ್ನ ಣಕಿಸಿತ್ತು. ಶಾರ್ವರಿ ಒಬ್ಬ ದೊಡ್ಡ ಬಿಸಿನೆಸ್ ಮ್ಯಾಗ್ನೆಟ್‌ನನ್ನು ಮದುವೆಯಾಗಿ ಸ್ಟೇಟ್ಸ್‌ನಲ್ಲೇ ನೆಲೆಸಿದ್ದವಳು. ಈ ಬಾಡಿಗೆ ಕೊಂಪೆಗೇಕೆ ಬರುತ್ತಾಳೆ? ಅದೂ ಅವಳಿಗ್ಯಾಕೆ ಈ ಬಡತನದ ಬದುಕು? ನನ್ನ ಯೋಚನೆಯೆಲ್ಲಾ ನಿಂತು ಹೋದುವು.... ಸ್ವಪ್ನಿಲ ಜಗತ್ತಿನಿಂದ ಹೊರಬಂದೆ.

ಹಾಳು ಬಾಳು.... ಹೌದು.... ಮಧ್ಯಮ ವರ್ಗದಲ್ಲಿ ಬಾಳ ಬಂಡಿ ಎಳೆಯುತ್ತಿರುವ ಪ್ರತಿಯೊಬ್ಬ ಪ್ರತಿದಿನ ಈ ಮಾತನ್ನು ಎಷ್ಟುಬಾರಿ ಪುನರಾವರ್ತಿಸಿಕೊಳ್ಳುತ್ತಾರೋ! ನಿಟ್ಟುಸಿರಳೆಯುತ್ತಾರೋ ಅರಿಯೆ.... ನಾನು ಮಾತ್ರ ಅದನ್ನೆಲ್ಲಾ ನನ್ನ ಚಿತೆಯೆಂಬಂತೆ ಪೇರಿಸಿಕೊಳ್ಳುತ್ತಿದ್ದೆ. ಆ ಬಿಸಿಯುಸಿರಿನಲ್ಲಿ ಬೇಯುತ್ತಿದ್ದೆ.

"ಅಪ್ಪಾ, ಫೀಜು ಕಟ್ಟುವುದಕ್ಕೆ ಇವತ್ತೇ ಕೊನೆಯ ದಿನ..."

"ಏನ್ರಿ! ಮನೆಯಲ್ಲಿನ ಪದಾರ್ಥಗಳೆಲ್ಲಾ ಮುಗಿದು ಹೋಗಿದೇರಿ..."

"ಅಪ್ಪಾ.... ಈ ತಿಂಗಳು ನೀನು ಒಂದು ಸಿನಿಮಾಕ್ಕೂ ಕರೆದುಕೊಂಡು ಹೋಗಿಲ್ಲ..."

"ಏನೂಂದ್ರೆ... ದೊಡ್ಡ ಮಗಳಿಗೆ ಇಪ್ಪತ್ತೇಳು ವರ್ಷ ತುಂಬಿತು. ಅವಳಿಗೊಂದು ಮದುವೆ ಮಾಡೋ ಯೋಚನೆ ಇದೆಯೋ ಇಲ್ವೋ...? ಎಷ್ಟು ಸಾರಿ ಹೇಳಿದ್ರು ಕಿವಿಗೇ ಹಾಕ್ಕೋತಿಲ್ಲ. ಅವಳಿಗೆ ಗಂಡು ಹುಡುಕ್ತಿರೋ ಇಲ್ವೊ?!"

"ಅಪ್ಪಾ.... ಒಂದಾದ್ರೂ ಗಟ್ಟಿಯಾದ ಲಂಗ ಇಲ್ಲ.... ಆ ಶ್ರೀಲೇಖ ಒಂದು ದಿನ ಹಾಕಿಕೊಂಡ ಡ್ರೆಸ್ಸು ಇನ್ನೊಂದು ದಿನ ಹಾಕ್ಕೋಳ್ಳೊಲ್ಲ ಗೊತ್ತಾ?"

ಸ್ಚ್.... ಇದೇ ಮಾತುಗಳನ್ನು ನನ್ನ ಬದುಕಿನಲ್ಲಿ

ದಿನದಿನವೂ ಕೇಳೀ ಕೇಳೀ ಸಾಕಾಗಿದೆ.... ಏನು ಮಾಡುವುದು? ಗುಮಾಸ್ತಗಿರಿಯಿಂದ ರಿಟೈರಾಗಿ.... ಒಮ್ಮೆಲೇ ಬಂದ ಅರವತ್ತು ಸಾವಿರ ಖರ್ಚು ಮಾಡಿ ಒಂದು ಸಣ್ಣ ಮನೆ ಕಟ್ಟಿಸಿದ್ದೆ.... ಅದೂ ಮನೆಯವರ ಬಲವಂತದಿಂದಲೇ.....

"ಬಾಡಿಗೆ ಮನೆಯಲ್ಲಿ.... ಮನೆಯ ಮಾಲೀಕ ತುಂಬಾ ತೊಂದರೆ ಕೊಡ್ತಿದಾನೆ.... ನಮ್ಮದೂ ಅಂತ ಒಂದು ಗುಡಿಸಿಲಾದ್ರೂ ಇರಬೇಕು.... ರಿಟೈರಾಗಿ ಬರುವ ದುಡ್ಡಿನಿಂದ ಒಂದು ಸಣ್ಣದಾದರೂ ಪರವಾಗಿಲ್ಲ, ಮನೆಯನ್ನು ಕಟ್ಟಿಸಿ," ಎಂದು ಶಾರದ ಯಾವಾಗಲೂ ಭೈರಿಗೆ ಕೊರೆಯುತ್ತಿದ್ದಳು. ಮಕ್ಕಳ ಒತ್ತಾಯ... ಸರಿ! ಮನೆ ಕಟ್ಟಿಸಿದೆ.... ಆ ಮನೆ ಕಟ್ಟಿಸಿದ ಮೇಲೆ, ಆ ಮನೆಗೆ ಹಾಕಿದ ದುಡ್ಡಿದ್ದಿದ್ದರೆ ತೇಜಸ್ವಿಯ ಮದುವೆ ಆಡಂಬರವಿಲ್ಲದೇ ನಡೆಯುತ್ತಿತ್ತಲ್ಲಾ ಅನ್ನಿಸಿತ್ತು!

ಅದನ್ನ ಈಗ ಯೋಚಿಸಿದರೆ ಉಪಯೋಗ ವೇನು?... ಅವೆಲ್ಲಾ ಮುಗಿದ ಕತೆ! ಏನು ಮಾಡಲೂ ನನ್ನ ಶರೀರವೂ ಸಹಕರಿಸುತ್ತಿರಲಿಲ್ಲ. ಜೊತೆಗೆ ನನ್ನ ಮನೆಯ ಜನರೂ ನನಗೆ ಸಹಕಾರಿಗಳಾಗಲಿಲ್ಲ.... ಜೊತೆಗೆ ಷುಗರ್.... ಬಿ.ಪಿ., ಕೈ ಕಾಲು ಸೆಳೆತ... ಇವೆಲ್ಲಾ ನನ್ನನ್ನು ಇನ್ನೂ ದುರ್ಬಲನನ್ನಾಗಿ ಮಾಡಿದ್ದುವು.

ಸರ್ವಿಸ್‌ನಲ್ಲಿದ್ದಾಗಲೇ ಹೆಣ್ಣು ಮಕ್ಕಳಿಬ್ಬರೂ ಬೆಳೆದು ನಿಂತಿದ್ದರು. ಈಗ ಇವರಿಬ್ಬರೂ ಜ್ವಲಂತ ಸಮಸ್ಯೆಯಾಗಿದ್ದರು.

ಅಯ್ಯೋ! ಇನ್ನು ನನ್ನ ಏಕಮಾತ್ರ ಪುತ್ರ.... ಹರಿ.... ಅವನ ವಿಷಯವಾಗಿ ಏನೂ ಹೇಳಲಿಕ್ಕಾಗದು. ಅವನು ನನಗೆ ಪುನ್ನಾಮ ನರಕದಿಂದ ಮುಕ್ತಿ ದೊರಕಿಸುತ್ತಾನೋ ಇಲ್ಲವೋ ತಿಳಿಯದು..... ಆದರೀಗ ನನ್ನನ್ನು ನರಕಯಾತನೆಗೆ ಗುರಿಮಾಡಿದ್ದ. ಅವನು ಮನೆಯ ಒಂದು ಸಮಸ್ಯೆಯನ್ನೂ ಹಚ್ಚಿಕೊಳ್ಳುತ್ತಿರಲಿಲ್ಲ. ಅವನಿಗೆ ತನ್ನ ನೋಡಿಕೊಳ್ಳುವುದಕ್ಕೇ ವೇಳೆ ಸಾಲದಾಗಿರುವಾಗ ಮನೆಯ ಬಗ್ಗೆ, ಮನೆಯವರ ಬಗ್ಗೆ ಅವನೇನು ಯೋಚಿಸುತ್ತಾನೆ.... ಅವನೇನು ಯೋಚಿಸಬಲ್ಲ?

"ಅಂಕಲ್" ಎಂಬ ಕರೆ ನನ್ನನ್ನು ಎಚ್ಚರಿಸಿತು.

ಎದುರಿಗೆ ವೈಶಾಲಿ ನಿಂತಿದ್ದಳು.

"ಅಂಕಲ್.... ನಾನು ನಿಮಗೆ ನಿನ್ನೇನೇ ಹೇಳ್ದೆ... ಹೀಗೆ ಈ ಸುಂದರವಾದ ಬೆಳಗನ್ನು ನೋಡುತ್ತಲೇ ದಿಗಿಲು ಪಡುತ್ತಿದ್ದರೆ.... ತುಂಬಾ ಬೇಸರವಾಗುತ್ತದೆ ಅಂಕಲ್."

ಒಂದು ನಿರ್ಮಲ ನಗೆ ಅವಳ ಮುಖದಲ್ಲಿ ಮಿಂಚಿ ತುಟಿಯಲ್ಲಿ ತುಳುಕಿತು.

"ಹೋಗ್ಲೀ.... ನಿಮಗೆ ಒಂದು ಜೋಕ್ ಹೇಳ್ತೀನಿ.... ಆದರೆ ಅದು ನಿಮಗೆ ವಲ್ಗರ್ ಅನ್ನಿಸಬಹುದು...." ಎಂದು ಸಂದೇಹದಿಂದ ನನ್ನ ಮುಖ ನೋಡಿದಳು.

"ಪರವಾಗಿಲ್ಲ ಹೇಳು...." ಆಸಕ್ತಿಯಿಂದ ಕೇಳಿದೆ.

"ಧೈರ್ಯಸ್ಥರು ಯಾರು ಎಂದು ನಿರ್ಧರಿಸಲು ಒಂದು ಸ್ಪರ್ಧೆಯನ್ನು ಏರ್ಪಡಿಸಿದ್ದರು. ಆ ಸ್ಪರ್ಧೆಯಲ್ಲಿ ಪಾಲ್ಗೊಳ್ಳುವ ವ್ಯಕ್ತಿಯನ್ನು ಮೊದಲು ಒಂದು ಬೋನಿಗೆ ಕಳಿಸುತ್ತಾರೆ. ಅಲ್ಲವನು ಸಿಂಹದೊಂದಿಗೆ ಹೋರಾಡಿ ಅದನ್ನು ಕೊಲ್ಲಬೇಕು.... ಆಮೇಲೆ ಒಬ್ಬ ಮುದುಕೀನ ಶಾರೀರಿಕವಾಗಿ ಸ್ಯಾಟಿಸ್‌ಫೈ ಮಾಡಬೇಕು.... ಸರಿ, ಒಬ್ಬೊಬ್ಬರೇ ಹೋಗುತ್ತಿದ್ದರು.... ಸಿಂಹವನ್ನು ಏನೂ ಮಾಡಲಾಗದೇ ವಾಪಸ್ಸು ಬರುತ್ತಿದ್ದರು. ಒಬ್ಬ ಸಿಂಗ್ ಬೋನಿನೊಳಗೆ ಹೋಗಿ ಆಯಾಸದಿಂದ ಹೊರಬಂದು, 'ಎಲ್ಲಿ ಆ ಸತ್ತ ಮುದುಕಿ?' ಎಂದು ಕೇಳಿದನಂತೆ..."

ಅವಳು ಜೋಕ್ ಹೇಳಿದ ಅರ್ಥ ನಿಮಿಷದವರೆಗೂ ನನಗೆ ಅರ್ಥವಾಗಲಿಲ್ಲ.... ಅರ್ಥವಾಗುತ್ತಲೇ ತೆರೆತೆರೆಯಾಗಿ ಜೋರಾಗಿ ನಕ್ಕೆ. ನಾನು ಅಷ್ಟು ಜೋರಾಗಿ ನಕ್ಕಿದ್ದನ್ನು ಇದುವರೆಗೂ ನನ್ನ ಮನೆಯಲ್ಲಿ ಯಾರೂ ಕಂಡಿರಲಿಲ್ಲವಾದ್ದರಿಂದ

**ಜನಿತಕ್ಕೆ ತಾಯಿಯಾಗಿ ಹೆತ್ತಳು ಮಾಯೆ. ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ. ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ**
**- ಶಿರೋಮಣಿ ಲಕ್ಕಮ್ಮ**

ಎಲ್ಲರೂ ಹೊರಗೋಡಿ ಬಂದರು.

"ಅಪ್ಪಾ... ನೀವೇನಾ ನಕ್ಕಿದ್ದು!" ಪ್ರದೀಪಾ ಆಶ್ಚರ್ಯದಿಂದ ಕೇಳಿದಳು. ನಗುತ್ತಲೇ ಉತ್ತರಿಸಿದೆ. ಒಂದೇ ವಯಸ್ಸಿನವರಾದ ವೈಶಾಲಿ, ಪ್ರದೀಪಾ, ತೇಜಸ್ವಿ ಹತ್ತೇ ನಿಮಿಷದಲ್ಲಿ ಸ್ನೇಹಿತರಾದರು. ನಗೆಯ ಹೂವರಳಿ ಅವರ ಮಾತಿನಲ್ಲಿ ತುಪತುಪನೆ ಉದುರಿದವು.

ಅವರೆಲ್ಲಾ ನಗುನಗುತ್ತಲೇ ಮಾತನಾಡಿಕೊಳ್ಳುತ್ತಿದ್ದರು.

"ವೈಶೀ," ಎಂದು ಕೀರಲು ಧ್ವನಿಯಿಂದ ಜೋರಾಗಿ ಕೂಗುತ್ತಾ, ಒಬ್ಬ ಮಧ್ಯವಯಸ್ಸಿನ ಹೆಂಗಸು ಹತ್ತಿಯ ಮೂಟೆಯಂತೆ.... ಗುಡುಗುತ್ತಾ ದಾಪುಗಾಲು ಹಾಕುತ್ತಾ ನಮ್ಮ ಮನೆಯವರೆಗೂ ಬಂದು,

"ಏನೇ.... ಮನೆಗೆ ಬರುವುದಕ್ಕೆ ಇಷ್ಟವಿಲ್ವಾ? ಅದೇ ರಾಮಾಯಣ ಶುರುವಾಯ್ತಾ? ನಾಚಿಕೆ ಹೇಸಿಗೆ ಇದ್ದಿದ್ದರೆ ಮನೆಯಲ್ಲೇ ಬಿದ್ದಿರುತ್ತಿದ್ದೆ... ಹೀಗೆ ಮನೆ ಮನೆ ತಿರುಗುತ್ತಿದ್ಯಾ? ಮನೆಯಲ್ಲಿ ಒಂದು ರಾಶಿ ಕೆಲಸ ಬಿದ್ದಿದೆ!... ಅವನ್ನೆಲ್ಲಾ ಯಾರಪ್ಪಾ ಬಂದು ಮಾಡ್ತಾನೆ?" ಕೈ ಬಾಯಿ ತಿರುಗಿಸುತ್ತಾ ಬಾಯಿ ಮಾಡುತ್ತಿದ್ದ ಆ ಹೆಂಗಸನ್ನು ನೋಡಿ ನನಗೆ ಒಂದು ರೀತಿಯ ಅಸಹ್ಯವುಂಟಾಯ್ತು.

ಆ ಹೆಂಗಸು ಅನ್ನುವುದೆಲ್ಲಾ ಅಂದು, ಬಂದ ವೇಗದಲ್ಲೇ 'ಉರುಳಿ ಹೋದಳು'. ವೈಶಾಲಿ ನಮ್ಮ ಮುಖವನ್ನೆಲ್ಲಾ ಒಮ್ಮೆ ನೋಡಿ, "ಅವರು ನಮ್ಮಮ್ಮ ಅಲ್ಲ... ಚಿಕ್ಕಮ್ಮ... ಅಮ್ಮ ಸತ್ತ ಮೇಲೆ ಅಪ್ಪ ಇವರನ್ನ ಮದುವೆಯಾದರು..." ಎಂದು ಹೇಳಿ ಹೊರಟು ಹೋದಳು.

ಆಗ ವೈಶಾಲಿಯ ಕಥೆ ಪೂರ್ತಿ ಅರ್ಥವಾಯ್ತು.

ಮಲಮಗಳು ವೈಶಾಲಿ ನಮ್ಮ ಜೊತೆ ಹೊಂದಿಕೊಂಡಿದ್ದನ್ನು ನೋಡಿ ಅವಳ ಚಿಕ್ಕಮ್ಮನಿಗೆ ಸಹಿಸಲಾಗದೇ ಬಾಯಿಗೆ ಬಂದಂತೆ ಬಯ್ದು ಹೋಗಿದ್ದಳು.

ದಿನಗಳುರುಳಿದಂತೆ ವೈಶಾಲಿ ನಮ್ಮ ಮನೆಯ ಒಬ್ಬಳಂತೆ ಎಲ್ಲರೊಂದಿಗೆ ಬೆರೆತುಹೋಗಿದ್ದಳು.

ಅವಳ ಮಾತಿನ ರೀತಿಯಲ್ಲಿ... ಸದಾ.... ನಗುತ್ತಾ.... ಎಲ್ಲರನ್ನೂ ನಗಿಸುತ್ತಾ ಜಗಿಯುತ್ತಿರುತ್ತಿದ್ದ ವೈಶಾಲಿಯಿಂದ ನಿಜಕ್ಕೂ ನಮ್ಮಲ್ಲಿ ನವೋತ್ಸಾಹ ಉಕ್ಕಿ ಬರುತ್ತಿತ್ತು.... ಬದುಕು ಹೊಸ ಚಿಗುರೊಡೆಯುತ್ತಿತ್ತು.

"ಅಂಕಲ್ ಇಷ್ಟು ದಿನದ ಪರಿಚಯದಲ್ಲಿ ನನಗೆ ಅರ್ಥವಾಗಿದ್ದೇನೆಂದರೆ, ನಿಮಗಿರುವ ದೊಡ್ಡ ಸಮಸ್ಯೆ ತೇಜಸ್ವಿ ಪ್ರದೀಪಾರ ಮದುವೆ ಹೇಗೆ ಸಾಧ್ಯ ಎಂಬುದು! ಅಷ್ಟೇ ತಾನೇ? ನಾನೊಂದು ಮಾತು ಹೇಳೀದ್ರೆ ನೀವು ಏನೂ ಅಂದ್ಕೊಳೊಲ್ಲ ಅಲ್ವಾ?" ಕೇಳಿದಳು ವೈಶಾಲಿ.

"ಹೇಳು," ಎನ್ನುವಂತೆ ಅವಳತ್ತ ನೋಡಿದೆ. ವೈಶಾಲಿಯ ಬುದ್ಧಿಶಕ್ತಿಯ ಮೇಲೆ ನನಗೆ ಅಪಾರ ನಂಬಿಕೆಯಿತ್ತು.

"ನೀವು ದೀರ್ಘವಾಗಿ ಯೋಚಿಸುತ್ತಾ ಜಗುಲಿಯ ಮೇಲೆ ಕುಳಿತು ಮೀನ ಮೇಷ ಎಣಿಸುತ್ತಾ ಕಾಲ ಕಳೆಯುವ ಬದಲು.... ಯಾವುದಾದರೂ ಬಿಸಿನೆಸ್ ಮಾಡಬಹುದಲ್ವಾ ಅಂಕಲ್?..." ನೇರವಾಗಿ ಕೇಳಿದಳು.

"ಈ ವಯಸ್ಸಿನಲ್ಲಿ ನನ್ನ ಕೈಲೇನಾಗತ್ತೆ ನೀನೇ ಹೇಳು ವೈಶಾಲಿ..." ನನ್ನ ಸ್ವರದಲ್ಲಿ ನಿರ್ಲಿಪ್ತತೆ ತುಂಬಿತ್ತು.

ಅದಕ್ಕವಳು ನಕ್ಕು,

"ನೀವೇನೂ ಭಾರಿ ಹೊರೆಹೊರುವ ಅಗತ್ಯವಿಲ್ಲ ಅಂಕಲ್.... ನಿಮ್ಮಲ್ಲಿರುವಷ್ಟೇ ಬಂಡವಾಳ ಹಾಕಿ ಯಾವುದಾದರೂ ಒಂದು ಸಣ್ಣ ವ್ಯಾಪಾರ ಮಾಡಿ!

'ಸ್ಚ್' ಎಂದು ತುಟಿ ಬಿರುಕಿಸಿದೆ.

"ಯಾವ ಸಣ್ಣ ವ್ಯಾಪಾರಕ್ಕಾದ್ರೂ ಒಂದು ಹತ್ತು ಸಾವಿರ ರೂಪಾಯಿಯಾದ್ರೂ ಬೇಕು..... ಅಷ್ಟೊಂದು ಹಣಕ್ಕೆ ಎಲ್ಲಿ ಹೋಗ್ಲೀ?.... ಬ್ಯಾಂಕಿನಲ್ಲಿ ಅಬ್ಬಬ್ಬಾ ಎಂದರೆ ಆರು ಸಾವಿರ ರೂಪಾಯಿ ಇರಬಹುದು ಅಷ್ಟೇ!"

ವೈಶಾಲಿ, ನನ್ನ ಮಾತನ್ನು ಕೇಳಿ ಮೌನವಾಗಿ ನನ್ನತ್ತ ನೋಡಿ,

"ಒಂದೈಡಿಯಾ ಅಂಕಲ್" ಎಂದಳು.

"ಏನದು?" ಆಸಕ್ತಿಯಿಂದ ಕೇಳಿದೆ.

"ಒಂದು ಫಾಸ್ಟ್ ಫುಡ್ ಸೆಂಟರ್ ಪ್ರಾರಂಭಿಸಿ. ಸುತ್ತಾಮುತ್ತಾ ಇಲ್ಲೆಲ್ಲೂ ಇಲ್ಲವಲ್ಲಾ!.... ಅದಕ್ಕೆ ಒಳ್ಳೇ ಗಿರಾಕಿ ಸಿಗುತ್ತೆ ಅಂಕಲ್!" ಸಂತೋಷದಿಂದ ಹೇಳಿದಳು.

ಫಾಸ್ಟ್‌ಫುಡ್ ಬಗೆಗೆ ನನಗೆ ಅಲ್ಪಸ್ವಲ್ಪ ಐಡಿಯಾ.... ಅಲ್ಲ.... ತಿಳುವಳಿಕೆ ಇದ್ದಿದ್ದರಿಂದ ಅವಳು ಹೇಳಿದ್ದನ್ನು ಗಂಭೀರವಾಗಿ ಯೋಚಿಸಿದೆ.

"ಉಮೆನ್ಸ್ ಕಾಲೇಜಿನ ಮುಂದೆ.... ಸೆಂಟರ್ ಪ್ರಾರಂಭಿಸಿ ಅಂಕಲ್. ಆಗ ಎಲ್ಲಾ ಮುಗಿಬೀಳ್ತಾರೆ," ಸ್ಥಳವನ್ನೂ ಅವಳೇ ನಿರ್ಧರಿಸಿದ್ದಳು.

ಅವಳು ಹೇಳಿದಂತೆಯೇ ಒಂದು ವಾರದ ನಂತರ ಆ ಸೆಂಟರ್ ಪ್ರಾರಂಭಿಸಿದೆ.... ನಿಜವಾಗಿಯೂ ಒಳ್ಳೆಯ ಗಿರಾಕಿಗಳಿದ್ದರು.... ವೈಶಾಲಿಯೇ ಹೇಳಿದಂತೆ ಬೆರಕೆ ಪದಾರ್ಥಗಳಿಂದ ಒಳ್ಳೇ ಲಾಭ ಬಂದರೂ ವ್ಯಾಪಾರ ಸ್ಥಿರವಾಗಿರದು. 'ಜನರಲ್ಲಿ ಕ್ರಮೇಣ ಆಸಕ್ತಿ ಕಡಿಮೆಯಾಗುತ್ತದೆ.' ಅದನ್ನೇ ಗಮನದಲ್ಲಿರಿಸಿಕೊಂಡು ರೆಡಿಮೇಡ್ ಮಿಕ್ಸ್‌ಗಳನ್ನು ಆಹಾರ ಪದಾರ್ಥಗಳನ್ನು ಮತ್ತಷ್ಟು ರುಚಿಯಾಗಿ ತಯಾರಿಸಲು ಪ್ರಾರಂಭಿಸಿದೆ....

ಅಂದಿನವರೆಗೂ 'ಅಲೆಯಾಲಜಿ' ಮಾಡುತ್ತಿದ್ದ ನನ್ನ ಮಗ.... ಹರಿ.... ಯಾವುದೋ ಒಂದು ಪ್ರೈವೇಟು ಕಂಪೆನಿಯಲ್ಲಿ ಕೆಲಸಕ್ಕೆ ಸೇರಿಕೊಂಡ.... ಅದೂ ವೈಶಾಲಿಯ ಬಲವಂತದಿಂದ! ತಿಂಗಳಿಗೆ ಆರುನೂರು ರೂಪಾಯಿ ಸಂಬಳ ಬರುತ್ತಿತ್ತು...... ಸ್ವಲ್ಪ ಖರ್ಚೆಗಿಟ್ಟುಕೊಂಡು ಮಿಕ್ಕಿದ್ದನ್ನು ಮನೆಗೆ ಕೊಡತೊಡಗಿದ್ದ..... ಮೊದಲು ಮನೆಗೇನೂ ಕೊಡುತ್ತಿರಲಿಲ್ಲ.... ಆದರೆ.... ಗೂಳಿಯಂತೆ ಬೀದಿ ಬೀದಿ ತಿರುಗುತ್ತಿದ್ದವನು ವೈಶಾಲಿಯಿಂದ ಈಗ ಯಾವುದೋ ಒಂದು ಕೆಲಸಕ್ಕೆ ಸೇರಿದ್ದರಿಂದ ಏನನ್ನಿಸಿತೋ ಸ್ವಲ್ಪ ತನ್ನ ಖರ್ಚನ್ನು ಕಡಿಮೆ ಮಾಡಿಕೊಂಡಿದ್ದ.

ಪುನಃ ವೈಶಾಲಿ ಬಲವಂತ ಮಾಡಿ..... ತೇಜಸ್ವಿಗೆ ಒಂದು ಹೊಲಿಗೆ ಮಶಿನ್ ತರಿಸಿದಳು. ತೇಜಸ್ವಿ, ಪ್ರದೀಪಾ ಇಬ್ಬರಿಗೂ ಹೊಲಿಗೆ ಬರುತ್ತಿದ್ದರಿಂದ, "ಸುಮ್ಮನೆ ಕುಳಿತು ತಿನ್ನುವುದರ ಬದಲು.... ಹೊಲಿಗೆ ಕೆಲಸ ಮಾಡಿದರೆ ದಿನಕ್ಕೆ ಒಂದಿಪ್ಪತ್ತು ರೂಪಾಯಿಯಾದರೂ ಬರುತ್ತದೆ,"



ಎಂದಿದ್ದಳು. ಅವರಿಬ್ಬರೂ ಹೊಲಿಗೆ ಕೆಲಸ ಪ್ರಾರಂಭಿಸಿದ ಮೇಲೆ ಹೊಲಿಗೆಗಾಗಿ ಬರುವವರ ಸಂದಣಿ ಜಾಸ್ತಿಯಾಗುತ್ತಿತ್ತು. ಜೊತೆಗೆ ಅವರಿಬ್ಬರೂ ಕಸೂತಿ, ಹೆಣಿಗೆಯ ಕೆಲಸವನ್ನೂ ಮಾಡಲಾರಂಭಿಸಿದರು.

ಎಲ್ಲರ ಕೈಲೂ ದುಡ್ಡು ಓಡಾಡಲಾರಂಭಿಸಿದ ಮೇಲೆ ನಮ್ಮ ಮನೆಯಲ್ಲಿ ಜೀವಕಳೆ ತುಂಬುತ್ತಿತ್ತು.

ನನ್ನ ವ್ಯಾಪಾರ ಸಹ ದಿನೇ ದಿನೇ ಹಂತ ಹಂತವಾಗಿ ಅಭಿವೃದ್ಧಿಯಾಗಿ ಪ್ರಬಲವಾಯ್ತು. ಅದನ್ನು ಮುಂದುವರೆಸುತ್ತಲೇ ಅಲ್ಲಿಯೇ ಒಂದು 'ತ್ರೀಸ್ಟಾರ್' ಹೊಟೇಲನ್ನು ಕೊಂಡುಕೊಂಡೆ. ಅದೂ ವೈಶಾಲಿಯ ಸಲಹೆಯೇ!'

ಅಂದಿನಿಂದ ನಾನೆಂದೂ ವ್ಯಾಪಾರದಲ್ಲಿ ಹಿಂದಿರುಗಿ ನೋಡಲೇ ಇಲ್ಲ! ಒಂದು ಮರ್ಸಿಡೆಸ್ ಕಾರು..... ಮಾರುತಿ ಕಾರು.... ಎರಡು ಹೋಂಡಾಗಳು.... ಇವೆಲ್ಲಾ ನನ್ನ ಮನೆಯ ಗ್ಯಾರೇಜನ್ನು ತುಂಬಿದವು.... ಶಾರದಳ ಮೈಮೇಲಿನ ಒಡವೆಗಳ ಸಂಖ್ಯೆ ಒಂದೊಂದಾಗಿ ಜಾಸ್ತಿಯಾಗುತ್ತಿತ್ತು. ಜೊತೆಗೆ ಬ್ಯಾಂಕ್ ಬ್ಯಾಲೆನ್ಸ್ ಬೆಳೆಯುತ್ತಿತ್ತು!

ಬೀಳು ಬಿದ್ದಿದ್ದ ಒಂದು ಸಿನಿಮಾ ಥಿಯೇಟರನ್ನು ಕೊಂಡುಕೊಂಡು ಆಧುನೀಕರಿಸಿದೆ. ಹರಿಯನ್ನು ಜೊತೆಯಲ್ಲಿರಿಸಿಕೊಂಡು ಇಡೀ ಏರಿಯಾಕ್ಕೆ ಸರಬರಾಜು ಮಾಡುವಂತೆ ಒಂದು ಹೋಲ್‌ಸೇಲ್ ವೈನ್ ಶಾಪ್ ಪ್ರಾರಂಭಿಸಿದೆ.

ದುಡ್ಡು.... ದುಡ್ಡು... ದುಡ್ಡು....!

ಬೇಕಾದಷ್ಟು ಗಳಿಕೆ! ಆದರೆ ಲೋಪವೆಂದರೆ ದುಡ್ಡಿನೊಂದಿಗೆ ಮನೆಯಲ್ಲಿರುವವರ ದರ್ಪ, ಅಹಂಕಾರ, ಗರ್ವ... ಇವೆಲ್ಲಾ ಹೆಚ್ಚಾದುವು. ಕೆಟ್ಟು ಬದುಕುವವರ ಹಣೆಯ ಬರಹವೇ ಹೀಗೇನೋ!

ಅರ್ಧ ರಾತ್ರಿಯಲ್ಲಿ ಕೊಡೆ ಹಿಡಿಯುವವರ ಸ್ಥಿತಿಯಂತಾಗಿತ್ತು. ಇದ್ದಕ್ಕಿದ್ದಂತೆ ಅದೃಷ್ಟ ಒಲಿದರೆ ಹೀಗೇ! ಎಲ್ಲಾ ನಗುನಗುತ್ತಾ ಇರುತ್ತಿದ್ದರು. ಆದರೆ ಒಂದೇ ಒಂದು ನೋವಿನ ವಿಷಯವೆಂದರೆ ನಮ್ಮ ಮನೆಯಲ್ಲಿ ಎಲ್ಲರೂ ವೈಶಾಲಿಯನ್ನು ಅಲಕ್ಷ್ಯದಿಂದ ನೋಡುತ್ತಿದ್ದುದು.

ಅಧ್ವಾನವಾಗುತ್ತಿದ್ದ ಮನೆಯನ್ನು ಬೀಳದಂತೆ ನಿಲ್ಲಿಸಿ ಎದೆಗುಂದಿದ್ದ ನಮಗೆ ವೈಶಾಲಿ ಕೊಟ್ಟ ಪ್ರೋತ್ಸಾಹವನ್ನೆಲ್ಲಾ ಇವರು ಮರೆಯುತ್ತಿದ್ದರು.

ಈಗ ವೈಶಾಲಿಯ ಮನೆಯಲ್ಲಿ ಕಷ್ಟ ಹೆಚ್ಚಾಗ ತೊಡಗಿತ್ತು. ಆಕೆಯ ತಂದೆ ಹಾರ್ಟ್ ಅಟ್ಯಾಕ್‌ನಿಂದ ತೀರಿಕೊಂಡರು. ನಂತರ ವೈಶಾಲಿಯ ಕಷ್ಟದ ಹೊರೆ ಮತ್ತೂ ಜಾಸ್ತಿಯಾಯ್ತು.

ಒಂದು ದಿನ ರಾತ್ರಿ ಹನ್ನೊಂದು ಘಂಟೆಯಲ್ಲಿ ವೈಶಾಲಿ ನಮ್ಮ ಮನೆಗೆ ಬಂದು ಬಾಗಿಲು ತಟ್ಟಿದಳು. ಎಲ್ಲರೂ ಅವರವರ ರೂಮಿನಲ್ಲಿ ನಿದ್ರಿಸುತ್ತಿದ್ದರಾದ್ದರಿಂದ ನಾನು ಹೋಗಿ ಬಾಗಿಲು ತೆರೆದೆ. ವೈಶಾಲಿ ಅಳುತ್ತಾ ಬಂದು ನನ್ನನ್ನು ಗಟ್ಟಿಯಾಗಿ ಆಲಂಗಿಸಿಕೊಂಡಳು. ಅವಳ ಕಣ್ಣಲ್ಲಿ ಎಂದೂ ನೀರನ್ನು ನೋಡದಿದ್ದ ನನಗೆ ಆಶ್ಚರ್ಯವೂ ವ್ಯಥೆಯೂ ಆಯ್ತು.

"ಏನಾಯ್ತಮ್ಮಾ?" ಸಾಂತ್ವನದ ಧ್ವನಿಯಿಂದ ಕೇಳಿದೆ.

ಅದಕ್ಕವಳು ಬಿಕ್ಕಳಿಸುತ್ತಲೇ,

"ಅಂಕಲ್, ನಮ್ಮ ಚಿಕ್ಕಮ್ಮ ಏನಂದ್ರು ಗೊತ್ತಾ... 'ನೀನು ಆ ಮುದುಕ ಯಾವಾಗ ನೋಡಿದರೂ ಕಿಲಕಿಲ ಅಂತ ನಲೀತಾ ಇರ್ತೀರಿ. ನೀನು ಇಪ್ಪತ್ನಾಲ್ಕು ಘಂಟೇನೂ ಅವರ ಮನೆಯಲ್ಲೇ ಕಳೀತೀಯಾ... ಯಾಕೆ? ಏನು ಕಾರಣ? ಆ ಕಾರಣ ಗೊತ್ತಾಗುವವರೆಗೂ ನೀನು ಆ ಮನೆಯಲ್ಲೇ ಇದ್ದುಬಿಡು.' ಎಂದು ನನ್ನನ್ನು ಹೊರಗೆ ದಬ್ಬಿದರು," ಎಂದು ಹೇಳಿ ಪುನಃ ಅಳಲು ಪ್ರಾರಂಭಿಸಿದಳು.

ಅಂದು ರಾತ್ರಿ ನಮ್ಮ ಮನೆಯಲ್ಲೇ ಮಲಗಿಕೊಂಡಿದ್ದ ವೈಶಾಲಿಯನ್ನು ಮಾರನೆಯ ದಿನ ಬೆಳಿಗ್ಗೆ ಕರೆದುಕೊಂಡು ನಾನೇ ಅವರ ಮನೆಗೆ ಹೋದೆ. ಯಾಕೆಂದರೆ ಅವರು ಮಾಡುತ್ತಿದ್ದ ತಪ್ಪನ್ನು ಎತ್ತಿ ತೋರಿಸಿ ವೈಶಾಲಿಯನ್ನು ಪುನಃ ಅವರ ಹತ್ತಿರವೇ ಬಿಟ್ಟು ಬರುವುದು ನನ್ನ ಉದ್ದೇಶವಾಗಿತ್ತು. ಅವರ ಮನೆಗೆ ಹೋದರೆ ಅಲ್ಲಿ ಬೀಗ ಬಡಿದಿತ್ತು! ಅವರು ರಾತ್ರಿಯೇ ಮನೆ ಖಾಲಿ ಮಾಡಿ ಹೊರಟು ಹೋದರೆಂದು ಅಕ್ಕಪಕ್ಕದವರಿಂದ ತಿಳಿಯಿತು. ಆದರೆ ಎಲ್ಲಿ ಹೋದರೆಂದು ಗೊತ್ತಾಗಲಿಲ್ಲ.... ಪುನಃ ವೈಶಾಲಿಯನ್ನು ನಮ್ಮ ಮನೆಗೇ ಕರೆದುಕೊಂಡು ಬಂದೆ. ಅವಳನ್ನು ನಮ್ಮ

ಮನೆಯಲ್ಲೇ ಇರಲು ಹೇಳಿದೆ.

ವೈಶಾಲಿಯನ್ನು ನೋಡಿ ಶಾರದಾ ಮುಖ ದುಮ್ಮಿಸಿಕೊಂಡಳು.

ವೈಶಾಲಿಯ ಬಗ್ಗೆ ತೇಜಸ್ವಿ, ಪ್ರದೀಪಾ ಗುಸು ಗುಸು ಪ್ರಾರಂಭಿಸಿದರು.

ಅದಕ್ಕೆ ಸರಿಯಾಗಿ ಬಿಸಿನೆಸ್ ಅಕೌಂಟ್ಸ್ ಎಲ್ಲವನ್ನು ವೈಶಾಲಿಯೇ ನೋಡಿಕೊಳ್ಳಲಾರಂಭಿಸಿದಳು. ಅದನ್ನು ನಾನೇ ಅವಳಿಗೆ ಒಪ್ಪಿಸಿದ್ದೆ. ಶಾರದ, ವೈಶಾಲಿಯ ಬಗ್ಗೆ ತನ್ನ ಮನಸ್ಸಿನಲ್ಲಿದ್ದ ವಿಷವನ್ನೆಲ್ಲಾ ವೈಶಾಲಿಯ ಎದಿರಿಗೇ ಕಕ್ಕಿದಳು.

"ನಿಮಗೂ ವೈಶಾಲಿಗೂ ಏನು ಸಂಬಂಧ ಇಲ್ದೇ ಅವಳನ್ನು ಅಷ್ಟೊಂದು ಮೆರೆಸುತ್ತಿದ್ದೀರಿ?" ಎಂದು ಹುಚ್ಚು ಹುಚ್ಚಾಗಿ ಪ್ರಶ್ನಿಸಿದಳು.

ಅವಳ ಪ್ರಶ್ನೆಯನ್ನು ಕೇಳಿ ಒಂದು ಕ್ಷಣ ನನ್ನ ತಲೆ ಕೆಲಸ ಮಾಡುವುದನ್ನೇ ನಿಲ್ಲಿಸಿತ್ತು.

ಇಷ್ಟು ವರ್ಷ ನಾನು ಇವಳ ಜೊತೆಗೇ ಸಂಸಾರ ಮಾಡಿದ್ದು ಎಂಬ ಅನುಮಾನ ಉಂಟಾಯ್ತು.

ನನಗೆ ತೇಜಸ್ವಿ, ಪ್ರದೀಪಾ ಹೇಗೋ ಹಾಗೇ ವೈಶಾಲೀನೂ.... ಆದರೆ ಅದನ್ನು ಬಾಯಿ ಬಿಟ್ಟು ಹೇಳಲಿಲ್ಲ, ಹೇಳಿದರೂ ಇವರಿಗೆಲ್ಲಾ ಅರ್ಥವಾಗುವುದಿಲ್ಲ ಎಂದು ಸುಮ್ಮನಾದೆ.

"ವೈಶಾಲಿಗೂ ನನಗೂ ಇರುವ ಸಂಬಂಧ ಏನು ಅನ್ನುವುದು ಇನ್ನು ಸ್ವಲ್ಪ ದಿನದಲ್ಲೇ ತಿಳಿಸುತ್ತೇನೆ," ಎಂದು ಸಮಾಧಾನದಿಂದ ಹೇಳಿದೆ.

ಅದೇ ದಿನವೇ ನಮ್ಮ ಹೊಟೇಲ್ ಮ್ಯಾನೇಜರ್ ಸುದಾಮನ ಹತ್ತಿರ ಮಾತನಾಡಿದೆ. ಹುಡುಗ ಬುದ್ಧಿವಂತ, ಅವನಿಗೂ ಅಪ್ಪ ಅಮ್ಮ ಯಾರೂ ಇರಲಿಲ್ಲ. ನಾನು ಹೇಳಿದ್ದಕ್ಕೆ ಗೌರವ ಕೊಟ್ಟು ನನ್ನ ಜೊತೆಯಲ್ಲೇ ಬಂದು ವೈಶಾಲಿಯನ್ನು ನೋಡಿದ. ಮದುವೆಯಾಗಲು ಒಪ್ಪಿದ. ವೈಶಾಲಿಯೂ ಒಪ್ಪಿದಳು.

ವೈಶಾಲಿಯ ಮದುವೆಯ ದಿನ...

ಮದುವೆಯ ಸಿದ್ಧತೆಯನ್ನೆಲ್ಲಾ ನಾನೇ ಖುದ್ದಾಗಿ ನಿಂತು ಬ್ರಹ್ಮಾಂಡವಾಗಿ ಮಾಡಿದ್ದೆ. ಆದರೆ ಒಂದು ಸಮಸ್ಯೆ ಎದುರಾಯಿತು. ಕನ್ಯಾದಾನ ಮಾಡುವುದಕ್ಕೆ ನನ್ನ ಜೊತೆಗೆ ನನ್ನ ಹೆಂಡತಿ ಇರಬೇಕಾಗಿತ್ತು. ಆದರೆ ವೈಶಾಲಿಯ ಮೇಲೆ ಇಲ್ಲ ಸಲ್ಲದ ಅಪವಾದ ಹೊರೆಸಿದ್ದ ಶಾರದಳನ್ನು ಆ ಸ್ಥಾನದಲ್ಲಿ ಕೂಡಿಸಲು ನನಗೆ ಸ್ವಲ್ಪವೂ ಇಷ್ಟವಾಗಲಿಲ್ಲ. ಏನು ಮಾಡುವುದೆಂದು ತೋಚಲಿಲ್ಲ. ಕೊನೆಗೆ ಒಂದು ನಿರ್ಧಾರ ಮಾಡಿ, ನಮ್ಮ ಮನೆಗೆ ದಿನವೂ ಬರುತ್ತಿದ್ದ ಭಿಕ್ಷುಕಿಯನ್ನೇ ದುಡ್ಡು ಕೊಟ್ಟು ವರನ ಕಾಲು ತೊಳೆಯುವಾಗ ಸಹಕರಿಸಲೆಂದು ಕರೆಸಿದೆ. ಇದೆಲ್ಲಾ ನೋಡುತ್ತಿದ್ದ ಶಾರದ ಬೆಕ್ಕಸಬೆರಗಾಗಿ, ಕಣ್ಣು ಕೆಂಪಗೆ ಮಾಡಿಕೊಂಡು ಚಟಿಗೆ ಮುರಿದದ್ದನ್ನು ನಾನು ಗಮನಿಸದಿರಲಿಲ್ಲ.

ಮದುವೆ ವೈಭವದಿಂದ ಸುಸೂತ್ರವಾಗಿ ನೆರವೇರಿತು.

ಇನ್ನು ಉಳಿದದ್ದು.. ರಿಸೆಪ್ಷನ್... ಡ್ರಿಂಕ್ಸ್... ಡಿನ್ನರ್....

**ಸತಿಪತಿಗಳೊಂದಾದ ಭಕ್ತಿ**
**ಹಿತವಪ್ಪುದು ಶಿವಂಗೆ**
**ಅಮೃತದೊಳು ವಿಷಯುವ**
**ಬೆರೆಸಿದಂತೆ ಕಾಣಾ ರಾಮನಾಥಾ**
**- ದೇವರ ದಾಸಿಮಯ್ಯ**

ಆ ಗಡಿಬಿಡಿಯಲ್ಲೇ ವೈಶಾಲಿ ನನ್ನ ಹತ್ತಿರ ಬಂದು,

"ಅಂಕಲ್ ಈ ದಪ್ಪನಾದ ರೇಷ್ಮೆ ಸೀರೆ ನನಗೆ ತುಂಬಾ ಮುಜುಗರ ಉಂಟು ಮಾಡುತ್ತಿದೆ," ಎಂದು ಮುದ್ದುಮುದ್ದಾಗಿ ಚಿಕ್ಕ ಮಗುವಿನಂತೆ ಹೇಳಿದಳು.

"ಸರಿ, ನಿನಗಿಷ್ಟವಾದದ್ದನ್ನೇ ಉಟ್ಟುಕೋ," ಎಂದೆ.

ಆ ರಾತ್ರಿಯ ಪಾರ್ಟಿಗೆ ಊರಿನ ದೊಡ್ಡ ದೊಡ್ಡ ಗಣ್ಯರನ್ನೆಲ್ಲಾ ಆಹ್ವಾನಿಸಿದ್ದೆ. ಪಾರ್ಟಿಯಲ್ಲಿ ಎಲ್ಲರೂ ಕುಡಿಯುತ್ತಿದ್ದರು. ಆ ಗಲಾಟೆಯಲ್ಲಿ ವೈಶಾಲಿ ಕೋಣೆಯತ್ತ ಓಡುತ್ತಿದ್ದುದನ್ನೂ ಅವಳ ಹಿಂದೆ ನನ್ನ ಮಗ ಹರಿಯೂ ಓಡಿದ್ದನ್ನೂ ಗಮನಿಸಿದೆ. ಸ್ವಲ್ಪ ಹೊತ್ತು ಮಾಮೂಲಾಗೇ ಇದ್ದೆ. ಎಷ್ಟು ಹೊತ್ತಾದರೂ ಅವಳು ಬರಲಿಲ್ಲ.

ನಂಗೇನೋ ಅನುಮಾನ ಬಂದು ಅವರುಗಳು ಹೋದತ್ತ ನಾನೂ ಹೋಗಿ ನೋಡಿದೆ. ಹರಿಯಿಂದ ಬಿಡಿಸಿಕೊಳ್ಳಲು ವೈಶಾಲಿ ಒದ್ದಾಡುತ್ತಿದ್ದಳು! ಮೈಗಾಡ್! ಕೂಡಲೇ ಇಬ್ಬರ ಮಧ್ಯೆ ಹೋಗಿ ಹರಿಯನ್ನು ಪಕ್ಕಕ್ಕೆ ತಳ್ಳಿ "ಸ್ಟುಪಿಡ್, ವೈಶಾಲಿ ನಿನ್ನ ತಂಗಿ ಹಾಗೆ. ಅಂಥವಳನ್ನು .... ನನ್ನ ಮಾತಿಗೆ ಹರಿ ಅಡ್ಡ ಬಂದು "ಏನೀಗ... ಚಿಕ್ಕಮ್ಮನ ಹಾಗಲ್ವೇ?" ಎಂದು ಕೆಟ್ಟದಾಗಿ ನಗುತ್ತಾ ವೈಶಾಲಿಯತ್ತ ಪುನಃ ಲಂಘಿಸಿದ.

ಅವನ ಮಾತು ಕೇಳಿ ನನಗೆ ವಿಪರೀತ ಕೋಪ ಬಂತು. ನಾನೇನು ಮಾಡುತ್ತಿದ್ದೇನೋ ನನಗೇ ತಿಳಿಯಲಿಲ್ಲ.

ನನ್ನ ಎದುರಿಗೇ ಇದ್ದ ಹಾಕಿಸ್ಟಿಕ್‌ನಿಂದ ಬಲವಾಗಿ ಹರಿಯ ತಲೆಗೆ ಬಡಿದೆ. ಅವನ ತಲೆಯೊಡಿಯಿತು. ಅವನ ಚೀರಾಟ ಕೇಳಿ ಎಲ್ಲಾ ಧಾವಿಸಿ ಬಂದರು.

ಅಲ್ಲಿ ನಡೆದ ವಿಷಯವನ್ನೆಲ್ಲಾ ತಿಳಿದ ಶಾರದ, "ಅವನಿಗಿಷ್ಟವಾದದ್ದನ್ನು ಅವನು ಮಾಡ ಹೋದ.... ಅಷ್ಟಕ್ಕೇ ಅವನು ಸಾಯುವ ಹಾಗೆ ಹೊಡೆಯಬೇಕೇ...?" ಎಂದಳು ಅಂದಿನವರೆಗೂ ನನ್ನಲ್ಲೇ ಅಡಗಿಸಿಕೊಂಡಿದ್ದ ರೋಷದ ಜ್ವಾಲೆ ನಾಲಿಗೆ ಚಾಚಿತು.

"ನಾಳೆ ಹೀಗೇ ಕುಡಿದ ಮತ್ತಿನಲ್ಲಿ ನಿನ್ನ ಮಕ್ಕಳ ಮೇಲೆ ಕೊನೆಗೆ ನಿನ್ನ ಮೇಲೂ ಕೈ ಹಾಕ್ತಾನೆ-ಆಗ್ಲೂ ನೀನು ಹೀಗೆ ಮಾತಾಡ್ತೀಯಾ?" ಆವೇಶದಲ್ಲಿ ನನ್ನ ಬಾಯಲ್ಲಿ ಅವಾಚ್ಯ ಶಬ್ದಗಳೆಲ್ಲಾ ಬಂದುವು.

ಅಷ್ಟರಲ್ಲಿ ಪೊಲೀಸರಿಗೆ ಯಾರು ದೂರು ಕೊಟ್ಟಿದ್ದರೋ ತಿಳಿಯಲಿಲ್ಲ... ಪೊಲೀಸರು ಬಂದು ನನ್ನನ್ನು ಬಂಧಿಸಿದರು.

ಸೆರೆಗೆ ಹೋದೆ... ನಂತರ ಕೋರ್ಟಿಗೆ... ನನಗಿದ್ದ ದುಡ್ಡಿನ ಬಲದಿಂದ ನ್ಯಾಯವನ್ನೇ ಕೊಂಡುಕೊಳ್ಳಬಹುದಾಗಿತ್ತು. ಆದರೆ ಅದು ನನಗಿಷ್ಟವಾಗಲಿಲ್ಲ.

'ಮಗನ ಹತ್ಯೆಯ ಪ್ರಯತ್ನ' ಮಾಡಿದ ಆಪಾದನೆ ಹೊರೆಸಿದರು.

ಆ ಪ್ರಯತ್ನಕ್ಕೆ ಮೂಲ ಕಾರಣ ಯಾವುದು? ಎಂದು ಅವರು ಪರಿಶೀಲಿಸಲೂ ಇಲ್ಲ. ನಾನು ಹೇಳಲೂ ಇಲ್ಲ.

ಆ ಆಪಾದನೆಯ ಪ್ರಕಾರ ನನಗೆ 'ಆಜೀವ ಕಾರಾಗೃಹ ಶಿಕ್ಷೆ' ವಿಧಿಸಲಾಗಿತ್ತು!!

ನನ್ನನ್ನು ನೋಡಲು ಬಂದ ವೈಶಾಲಿಯ ಹತ್ತಿರವೇ ವಿಲ್ ಬರೆದು ಕಳಿಸಿದೆ.

ಒಟ್ಟು ಆಸ್ತಿಯಲ್ಲಿ ಒಂದು ಮನೆ... ಸ್ವಲ್ಪ ಹಣವನ್ನು ಶಾರದಳ ಹೆಸರಿಗೆ ಬರೆದೆ, ಮಿಕ್ಕದ್ದನ್ನು ವೈಶಾಲಿಯ ಹೆಸರಿಗೆ ಬರೆದು ಅದರಲ್ಲಿ ಯಾವುದಾದರೂ ಅನಾಥಾಲಯವನ್ನು ಕಟ್ಟಿಸಬೇಕೆಂದು ಕೋರಿದ್ದೆ.

ನನ್ನ ಕಡೆಯ ಆಸೆಯಾಗಿ,

'ನನ್ನ ಅಂತ್ಯ ಕ್ರಿಯೆಯನ್ನು ವೈಶಾಲಿಯೇ ಮಾಡಬೇಕು' ಎಂದೂ ಬರೆದಿದ್ದೆ.

ಏಕೆಂದರೆ ಜೀವನದಲ್ಲಿ ಸಂಪೂರ್ಣ ಸೋತೆ ಎಂದು ಹತಾಶನಾದವನಲ್ಲಿ ಆತ್ಮಸ್ಥೈರ್ಯ ತುಂಬಿ ನನ್ನ ಮುಖದಲ್ಲಿ ಜೀವಕಳೆ ತುಂಬಿ ನಗೆಯುಕ್ಕಲು ಕಾರಣ ಆ ವೈಶಾಲಿಯೇ ಅಲ್ಲವೇ!!

●



*ಕಾರ್ಯಗಳಿಂದ ಸಾಧಿತವಾಗುವುದೇನು? ಉತ್ಪಾದನೆ, ಅರ್ಜನ, ರೂಪಾಂತರ ಇಲ್ಲವೆ ಯಾವುದಾದರೂ ಪದಾರ್ಥವನ್ನು ಅನಾವಿಲಗೊಳಿಸುವುದು ಇಷ್ಟೇ ಅಲ್ಲವೆ? ಆದ್ದರಿಂದ ಇಂತಹ ಪ್ರವರ್ತಕಗಳನ್ನೊಳಗೊಂಡ ಕ್ರಿಯೆಗಳನ್ನು ಕೈಬಿಡುವುದೇ ಒಳ್ಳೆಯದು.*

**– ಶಂಕರಾಚಾರ್ಯ**

# ಇಳಿವಯಸ್ಸಿನ ನೆನಪಿಗೆ ಹೋಮರನ ಸವಾಲು

ಇತರರ ನೆನಪು
ಮಸುಕಾಗುವ ವಯಸ್ಸಿನಲ್ಲಿ
ಪಾವೆಲ್‌ಸನ್ನನ
ಸ್ಮರಣಶಕ್ತಿಯು
ಸುಧಾರಿಸಲು ಕಾರಣವೇನು?

• ವಿ. ನರಹರಿ

ನಗರಗಳೇಳು ಹೊಡೆದಾಡಿದವು
ಹೋಮರ ತಮ್ಮವನೆಂದು,
ಬದುಕಿರುವಾಗ ಅವರಿಗಿರಲಿಲ್ಲ
ಹೊದೆಯಲು ಬಟ್ಟೆಯು ಒಂದು.

ಒಂದು ಹಳೆಯ ದ್ವಿಪದಿ

**ಕ**ಳೆದ ಹದಿನಾಲ್ಕು ವರ್ಷಗಳಿಂದ ಪ್ಯಾರಿಸ್ ನಗರದ ಹೊರ ವಲಯದಲ್ಲಿ ವಾಸಿಸುವ ೭೭ ವರ್ಷದ ವ್ಯಾಪಾರಸ್ಥ ಪೊವೆಲ್‌ಸನ್ ಪ್ರತಿನಿತ್ಯವೂ ತಪ್ಪದೆ ಗ್ರೀಕ್ ಸ್ಮರಣ ಶಕ್ತಿಯ ದೇವತೆ ನೆಮೊಸ್ಸೈನ್‌ಗೆ ಪ್ರಾರ್ಥನೆ ಸಲ್ಲಿಸುತ್ತಿದ್ದಾನೆ.

೧೯೭೮ರಲ್ಲಿ ತನ್ನ ೬೦ನೇ ವಯಸ್ಸಿನಲ್ಲಿ ಆತ ಪ್ರಾಚೀನ ಗ್ರೀಕ್ ಭಾಷೆಯಲ್ಲಿರುವ ಹೋಮರ್ ಕವಿಯ 'ಇಲಿಯಡ್' ಕಾವ್ಯವನ್ನು (ಅದರ ೨೪ ಅಧ್ಯಾಯಗಳು, ೧೫,೬೯೩ ಸಾಲುಗಳು, ೨೪೩,೦೦೦ ಉಚ್ಚಾರಗಳು ಮತ್ತು ಸುಮಾರು ೬೦೦ ಪುಟಗಳೆಲ್ಲವನ್ನೂ) ಇಡಿಯಾಗಿ ಬಾಯಿ ಪಾಠ ಮಾಡಲು ದಿನಕ್ಕೆ ಒಂದು ಗಂಟೆ ತೆಗೆದಿಡುವೆನೆಂದು ಪಣ ತೊಟ್ಟ. ಈ ವರೆಗೆ ಮೊದಲ ೨೨ ಅಧ್ಯಾಯಗಳನ್ನು ತಣ್ಣಗೆ ಜೀರ್ಣಿಸಿಕೊಂಡ. ಎರಡನೆಯ ಅಧ್ಯಾಯದ ಹಡಗುಗಳು ಮತ್ತು ಯೋಧರ ೪೯೮ ನಾಮಧ್ಯೇಯಗಳುಳ್ಳ ೩.೨೫ ಸಾಲುಗಳ ಹೊರತು (ಅದೇನೂ ವೆಂಕ, ನಾಣಿ, ಶೀನನಂತಹ ಸುಲಭ ಹೆಸರುಗಳಲ್ಲ. "ನಾವು ಬೋಲಸ್‌ನ ಮಗನಾದ ಉದಾತ್ತ ಚರಿತೆಯ 'ಇಫಿಟಿಸ್‌ನ ಮಕ್ಕಳಾದ ಸ್ಕೆಡಿಯಸ್ ಮತ್ತು ಎಪಿಸ್ಟ್ರೋಥಸ್"ನಂತಹ ಸಾಲುಗಳು!).

ಆದರೆ ಈಚಿನ ದಿನಗಳಲ್ಲಿ ನೆಮೊಸ್ಸೈನ್ ದೇವತೆಗೆ ಹೆಚ್ಚು ಭಕ್ತರಿಲ್ಲ. ಇಲಿಯಡ್ ಬಿಡಿ: ವಿಶ್ವಕ್ಸೇನ, ಪ್ರಹ್ಲಾದ, ಉದ್ಧವರ ನೆನಪಿಡುವುದೇ



ನಮಗೆ ಕಷ್ಟವಾಗುತ್ತಿದೆಯಲ್ಲ. ಮಗ್ಗಿಗಳಂತೂ ನೆನಪಿನ ಸುರಳಿಗೇ ಬರುವುದಿಲ್ಲ. ನೆನಪಿಗೆ ಬದಲಿಗಳಾಗಿ ಬಂದ ಕ್ಯಾಲ್‌ಕ್ಯುಲೇಟರ್ ಅಥವಾ ವಿ.ಸಿ.ಆರ್.ಗಳಿಂದಾಗಿ ಹೀಗಾಯಿತು ಎಂದು ಕೆಲವರ ದೂರು. ಮೂರು ಸಾವಿರ ವರ್ಷಗಳ ಹಿಂದೆ ಭಾಷೆಗೆ ಅಕ್ಷರ ಮಾಲೆಯನ್ನು ಕಂಡು ಹಿಡಿದಾಗಲೇ ನೆನಪಿಡುವ ಕೌಶಲಗಳು ತಳಸೇರಿದವು ಎಂದು ಇತರರೆನ್ನುತ್ತಾರೆ. ನಾಲ್ಕು ವೇದಗಳ ಬೃಹತ್ ಸಂಪುಟಗಳು ಕರ್ಣಾಕರ್ಣಿಯಾಗಿಯೇ ಶತಶತಮಾನಗಳ ಕಾಲ ಹರಿದು ಬರಲಿಲ್ಲವೇ? ಇಂದಿಗೂ ಪುಣೆ ನಗರದಲ್ಲಿ ೩೫ ಗಂಟೆಗಳ ಕಾಲ ಅವಿಚ್ಛಿನ್ನವಾಗಿ (ಪುನರಾವರ್ತನೆ ಮಾಡದೆ) ವೇದ ಪುರಾಣಗಳನ್ನು ವಾಚಿಸಬಲ್ಲ ಸಾಧಕರಿದ್ದಾರೆ. ಆದರೂ ಅವರ ಸಂಖ್ಯೆ ಬಲು ವಿರಳ.

ಹೋಮರನ ಸಮಯವಾದ ಕ್ರಿಸ್ತ ಪೂರ್ವ ೮-೯ನೇ ಶತಮಾನದ ಸುಮಾರಿಗೆ ಬಹುತೇಕ ಗ್ರೀಕರು ಬರೆಯಲಾರದವರಾಗಿದ್ದರು. ಅಂಕಿ ಚಕ್ರಗಳನ್ನು ಆಡಲಾರದವರಾಗಿದ್ದರು. ಮಾಹಿತಿಯ ಮರುಬಳಕೆಗೆ ಮತ್ತು ಸಾಂಸ್ಕೃತಿಕ ರಕ್ಷಣೆಗೆ ತಮ್ಮ ನೆನಪಿನ ಶಕ್ತಿಗೇ ಮೊರೆಹೋಗಿದ್ದರು. ಆಗಿನ ನಾಗರಿಕ ಸೇವಾ ಉದ್ಯೋಗಗಳು ನೆಮಾನರೆಂಬ ತಮ್ಮ ತಲೆಯಲ್ಲಿ ಕಾನೂನು ಕ್ರಮಗಳನ್ನು ನೆನಪಿಟ್ಟುಕೊಂಡವರನ್ನು (ಒಂದು ವಿಧದ ಮಾನವ ಧ್ವನಿ ಮುದ್ರಕವೆನ್ನಿ) ಒಳಗೊಂಡಿದ್ದಿತು. ಕಾವ್ಯ ಪುರಾಣ ಪಠನಗಾರರಿಗೆ ನೆನಪಿನ ಕಸರತ್ತುಗಳಲ್ಲಿ (ನೆಮೋನಿಕ್ಸ್) ತರಬೇತಿಯನ್ನು ನೀಡಲಾಗುತ್ತಿತ್ತು. ಇದು ಅವರಿಗೆ ಇಲಿಯಡ್‌ನ ಯೋಧರ, ಅವರ ಹುಟ್ಟೂರುಗಳ, ಹಡಗುಗಳ ಮತ್ತು ಕುದುರೆಗಳ ಉದ್ದದ ಪಟ್ಟಿಗಳನ್ನು ನಿಭಾಯಿಸಲು ನೆರವಾಗುತ್ತಿತ್ತು.

ರೋಮನ್ನರೋ ಹಸೀ ಸೋಮಾರಿಗಳು. ಅವರಲ್ಲಿ ಗಣ್ಯರು ನೊಮೆನ್‌ಕ್ಲೇಟರ್ (ಅಕ್ಷರಶಃ ಹೆಸರು ಕರೆಯುವವರೆಂದರ್ಥ) ಎಂಬ ವಿಶೇಷ ಗುಲಾಮರನ್ನು ನೇಮಿಸಿಕೊಳ್ಳುತ್ತಿದ್ದರು. ಅವರ ಕೆಲಸವೆಂದರೆ ತಮ್ಮ ಯಜಮಾನರನ್ನು ಭೇಟಿಯಾದವರ ಪೂರ್ವೋತ್ತರಗಳನ್ನು ಅವರಿಗೆ ತಿಳಿಸುವುದು.

ಮಧ್ಯಕಾಲೀನ ಯುಗವಂತೂ ಅದೆಷ್ಟು ಕತ್ತಲಿನದಾಗಿತ್ತೆಂದರೆ ಯಾರೂ ಏನನ್ನೂ ನೆನಪಿಸಿಕೊಳ್ಳಲು ಇಷ್ಟಪಡುತ್ತಿರಲಿಲ್ಲ. ಪುನರುಜ್ಜೀವನ ಕಾಲದ ನಂತರದ ಅವಧಿಯನ್ನಂತೂ ಮರೆತೇ ಬಿಡುವುದು ಒಳಿತೇನೋ. ಬರಹದ ಭಾಷೆ ಒಂದು ಮುಖವಾಡದ ಪರಿಣಾಮವನ್ನು ಶುರುಮಾಡಿತು. ಮೊದಲು ವರ್ಣಮಾಲೆ, ಆಮೇಲೆ ಮುದ್ರಣಾಲಯ.

ಪೊವೆಲ್‌ಸನ್ ಬಾಲಕನಾಗಿದ್ದಾಗ ವಿಶೇಷವೇನನ್ನೂ ಯಾರೂ ಗಮನಿಸುವಂತೆ ಇರಲಿಲ್ಲ. ಒಂಭತ್ತು ವರ್ಷದವನಾಗಿದ್ದಾಗ ಆತ ಭಾನುವಾರದ ಬೈಬಲ್ ಶಾಲೆಯಲ್ಲಿ ಇಡೀ ವರ್ಷ ಬೋಧಿಸಿದ್ದನ್ನು ಒಂದೇ ವಾರದಲ್ಲಿ ಕಂಠಪಾಠಮಾಡಿದ್ದ. ಹತ್ತನೆಯ ವಯಸ್ಸಿನಲ್ಲಿ ಅವನಿಗೆ ತನ್ನ ಫ್ರೆಂಚ್ ಪಠ್ಯಪುಸ್ತಕದಲ್ಲಿದ್ದ ಎಲ್ಲಾ ಪದಗಳ ಪಟ್ಟಿಯನ್ನು ಉರುಹೊಡೆಯಲು ಒಂದು ಸಂಜೆ ಮಾತ್ರ ಸಾಕಾಗಿತ್ತು. ಸಿದ್ಧತಾ ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಇಲಿಯಡ್‌ನ ಮೊದಲನೆಯ ಅಧ್ಯಾಯದ ೨೧ ಸಾಲುಗಳನ್ನು ಕಲಿಯಲು ಒಂದು ಗಂಟೆ ಸಾಕಾಯಿತು. ಇಷ್ಟಾದರೂ ಆತ ಪರಿಶ್ರಮ ಮತ್ತು ಉತ್ಸಾಹಕ್ಕಿಂತ ಹೆಚ್ಚಿನ ಶಕ್ತಿಗಳೇನೂ ತನಗಿಲ್ಲವೆಂದು ಒತ್ತಿಹೇಳುತ್ತಾನೆ.

ಟ್ರಾಯ್ ಯುದ್ಧದ ಕೊನೆಯ ದಿನಗಳ ಪಟ್ಟಿ ಮಾಡುವ ಇಲಿಯಡ್‌ನ ಬಗೆಗೆ ಯುವಕನಾಗಿದ್ದಾಗಿನಿಂದಲೂ ಆತ ಉತ್ಸುಕತೆ ತೋರಿದ್ದ. ಸಿದ್ಧತಾ ಶಾಲೆಯಲ್ಲಿದ್ದಾಗಲೇ ಒಂದು ರಾಷ್ಟ್ರೀಯ ಗ್ರೀಕ್ ಪ್ರಶಸ್ತಿಯನ್ನು ಗೆದ್ದ. "ನಿಜವೆಂದರೆ ಗ್ರೀಕ್ ಮತ್ತು ಲ್ಯಾಟಿನ್‌ನ ಪ್ರಾವೀಣ್ಯದಿಂದ ಪ್ರಶಸ್ತಿಗಳನ್ನು ಗೆದ್ದು ಹಾರ್ವರ್ಡ್‌ನಲ್ಲಿ ವ್ಯಾಸಂಗ ಮಾಡಲು ಹಣಗಳಿಸಿಕೊಂಡೆ. ಮುಂದೆ ೪೪ ವರ್ಷಗಳ ಕಾಲ ನಾನು ಗ್ರೀಕ್ ಭಾಷೆಯನ್ನು ಬಳಸಲೇ ಇಲ್ಲ. ಆದರೆ ೧೯೭೭ರ ನವೆಂಬರ್‌ನಲ್ಲಿ ನಾನು ಕೆಲಸ ಮಾಡುತ್ತಿದ್ದ ಕಂಪನಿಯ ಪ್ಯಾರಿಸ್‌ನ ಕಛೇರಿ ಮುಚ್ಚಿದ್ದರಿಂದ ನನಗೆ ಸ್ವಲ್ಪ ಪುರಸೊತ್ತು ಸಿಕ್ಕಿತು. ನಾನು ಮತ್ತೆ ಇಲಿಯಡ್ ಓದಿದೆ. ಅದರ ಮೊದಲ ನೂರು ಸಾಲುಗಳು ಇನ್ನೂ ನೆನಪಿನಲ್ಲಿ ಉಳಿದಿರುವುದನ್ನು ಕಂಡೆ. ಇದ್ದಕ್ಕಿದ್ದಂತೆ, ಇಡೀ ಇಲಿಯಡ್ಡನ್ನೇಕೆ ಬಾಯಿಪಾಠ ಮಾಡಿಬಿಡಬಾರದು- ಕೇವಲ ಚಟಕ್ಕಾಗಿಯಾದರೂ ಎಂದುಕೊಂಡೆ," ಎನ್ನುತ್ತಾ

ನವನು.

ಇಡೀ ಕಾವ್ಯವನ್ನು ನೆನಪಿನಿಂದಲೇ ಎಂದಾದರೊಂದು ದಿನ ಹೇಳಬೇಕೆಂದು ಅವನ ಆಸೆ. ಮಾಮೂಲಿನ ಕಂಠಪಾಠದ ಒಂದು ನಿಮಿಷಕ್ಕೆ ೧೨ ಸಾಲುಗಳ ವೇಗದಲ್ಲಿ ಕಾವ್ಯವನ್ನು ಪೂರ್ತಿಯಾಗಿ ಹೇಳಲು ೨೨ ಗಂಟೆಗಳು ಬೇಕಾಗುವ ಈ ಸಾಧನೆಯನ್ನು ಪೊವೆಲ್‌ಸನ್‌ಗೆ ತಿಳಿದಂತೆ ಯಾರೂ ಸಾಧಿಸಿಲ್ಲ. ಪುರಾತನ ಕವಿಗಳು ಪ್ರಾಯಶಃ ಈ ಕಾವ್ಯವನ್ನು ತಂಡಗಳಲ್ಲಿ ಪಠಿಸುತ್ತಿದ್ದಿರಬೇಕು.

"ಕ್ಸೆನೊಂಫೊನ್ ಎಂಬುವವನು ತನ್ನ ಸಿಂಪೋಸಿಯಂ ಗ್ರಂಥದಲ್ಲಿ ನಿಕೆರಟೋಸ್‌ನ ಹೆಸರನ್ನು ಹೇಳುತ್ತಾನೆ. ಆತನು ಇಲಿಯಡ್ ಮತ್ತು ಒಡೆಸ್ಸಿ ಎರಡನ್ನೂ ಕಂಠಪಾಠಮಾಡಿದ್ದನೆಂದು ಹೇಳುತ್ತಾರೆ. ಆದರೆ ಅದಕ್ಕೇನೂ ಪುರಾವೆಯಿಲ್ಲ" ಎಂಬುದು ಪೊವೆಲ್‌ಸನ್‌ನ ಅಭಿಪ್ರಾಯ.

ವ್ಯಕ್ತಿಯು "ಮಾತುಗಳನ್ನು ಆಡುವವನೂ ಮತ್ತು ಕೆಲಸಗಳನ್ನು ಮಾಡುವವನೂ" ಎರಡೂ ಆಗಿರಬೇಕೆಂದೂ ಹೋಮರ್ ತನ್ನ ಇಲಿಯಡ್‌ನಲ್ಲಿ ಹೇಳುತ್ತಾನೆ. ಪೊವೆಲ್‌ಸನ್ ಮಾಡಿದ್ದೂ ಹಾಗೆಯೇ. ಅಮೆರಿಕನ್ ಮತ್ತು ಯೂರೋಪಿಯನ್ ಕಾಲೇಜುಗಳಲ್ಲಿ ಕನಿಷ್ಠ ೫೦ ಬಾರಿಯಾದರೂ ಪುಕ್ಕಟೆಯಾಗಿ ತಾನು ಕಂಠಪಾಠ ಮಾಡಿದ್ದನ್ನೆಲ್ಲ ಉಲಿದಿದ್ದಾನೆ. "ಯಾವ ಮುನ್ಸೂಚನೆಯನ್ನೂ ನೀಡದೆ ಕಾವ್ಯದ ಒಟ್ಟು ಸಾಲುಗಳಲ್ಲಿ ೧೫೦೦೦ ಸಾಲುಗಳನ್ನೊಳಗೊಂಡು ಮೊದಲ ೨೨ ಅಧ್ಯಾಯಗಳ ಯಾವುದೇ ಭಾಗವನ್ನು ಪಠಿಸು ಎಂದರೆ ಸವಾಲು ಒಪ್ಪಿಕೊಳ್ಳಲು ಸಿದ್ಧನಿದ್ದೇನೆ," ಪೊವೆಲ್‌ಸನ್ ಆತ್ಮವಿಶ್ವಾಸಪೂರ್ವಕ ಹೇಳುತ್ತಾನೆ.

ತನ್ನಂತೆ ಇದನ್ನು ಯಾರು ಬೇಕಾದರೂ ಹಠಹಿಡಿದು ಸಾಧಿಸಬಹುದೆಂದು ಅವನ ಅನಿಸಿಕೆ: "೨೦ ವಯಸ್ಸಿನ ನಂತರ ವ್ಯಕ್ತಿಯ ನೆನಪಿನ ಶಕ್ತಿ ಕಡಿಮೆಯಾಗುತ್ತದೆ ಎಂದು ಕೆಲವರೆನ್ನುತ್ತಾರೆ. ನಾನದು 'ಅಸಂಬದ್ಧ' ಎನ್ನುತ್ತೇನೆ. ನನ್ನ ಅನುಭವವೇ ಹೇಳುತ್ತದೆ ವಯಸ್ಸು ಎಷ್ಟೇ ಇರಲಿ, ಅಭ್ಯಾಸವು ಸ್ಮರಣಶಕ್ತಿಯನ್ನು ಸುಧಾರಿಸುತ್ತದೆ ಎಂದು. ನನ್ನ ೬೦ನೇಯ ವಯಸ್ಸಿನಲ್ಲಿ ನಾನು ಇಲಿಯಡ್‌ನ್ನು ನೆನಪಿಟ್ಟುಕೊಳ್ಳಲು ಶುರುಮಾಡಿದೆ. ಈಗ ೧೫ ವರ್ಷಗಳ ನಂತರ ಆಗ ನಾನು ತೆಗೆದುಕೊಳ್ಳುತ್ತಿದ್ದ ಸಮಯಕ್ಕಿಂತ ಅರ್ಧ ಸಮಯದಲ್ಲಿ ಏನನ್ನಾದರೂ ಉರುಹೊಡೆಯಬಲ್ಲೆ ಎನಿಸುತ್ತದೆ. ಅಲ್ಲದೆ ನನ್ನ ಅವಧಾರಣ ಶಕ್ತಿಯೂ ತುಂಬಾ ಸುಧಾರಿಸಿದಂತೆನಿಸುತ್ತದೆ."

**ಕಸಿ**

ಹುಳಿ ಮಾವಿನ ತಳಿಗೆ
ಸಿಹಿಮಾವಿನ ಕಸಿ
ಹಣ್ಣೊ-ಸಕ್ಕರೆ-ಸವಿ!
ಜಗತ್ತೆಲ್ಲಾ ಹೀಗೇ
ಹುಳಿಯ
ನೋವಿನ ಮೇಲೆ
ಸಿಹಿಯ
ವಿಜಯದ ಮಾಲೆ!

● ರಮೇಶಚಂದ್ರ

ಇತರರ ನೆನಪು ಮಸಕಾಗುವ ವಯಸ್ಸಿನಲ್ಲಿ ಪಾವೆಲ್‌ಸನ್‌ನಂತಹವನ ಸ್ಮರಣಶಕ್ತಿ ಸುಧಾರಿಸಲು ಹೇಗೆ ಸಾಧ್ಯವಾಯಿತು? ೧೯೩೦ರ ದಶಕದಲ್ಲಿ ವಿಜ್ಞಾನಿಗಳು ಅಧ್ಯಯನ ಮಾಡಿದ ಮತ್ತು ಎ.ಆರ್.ಲೂರಿಯಾರವರ' ಗ್ರಂಥದಲ್ಲಿ ('ದಿ ಮೈಂಡ್ ಆಫ್ ಎ ನೆಮೊನಿಸ್ಟ್') ವಿವರಿಸಲಾದ ಅದ್ಭುತ ರಶ್ಯನ್ ಸ್ಮರಣ ಕಲಾವಿದನ ರಹಸ್ಯವೇನು? (ಈ ಆಸಾಮಿಯು ಮಾಮೂಲು ವ್ಯಕ್ತಿಯಂತೆಯೇ ಇದ್ದರೂ ಮಾಹಿತಿಗಳ ಇಡೀ ಗ್ರಂಥಾಲಯಗಳನ್ನೇ ಮತ್ತು ತನಗೇನೂ ಅರ್ಥವಾಗದ ದೀರ್ಘವೂ ಜಟಿಲವೂ ಆದ ಗಣಿತದ ಸೂತ್ರಗಳನ್ನು ಕಲಿತ ಹದಿನೈದು ವರ್ಷಗಳ ನಂತರವೂ ನೆನಪಿಸಿಕೊಳ್ಳಬಲ್ಲ ಧಾರಣಶಕ್ತಿ ಪಡೆದಿದ್ದ. ಸ್ವಾರಸ್ಯವೆಂದರೆ ಆತನ ಹೆಸರು "ಎಸ್" ಎಂದಷ್ಟೇ ಇದೆ. ತನ್ನ ಹೆಸರಿನ ಇತರ ಅಕ್ಷರಗಳು ನೆನಪಿರಲಿಲ್ಲವೇನೋ ಪಾಪ.) ವರ್ಷಗಟ್ಟಲೆ ಹಿಂದೆ ನಡೆದ ಯಾವುದೋ ಕ್ರಿಕೆಟ್ ಮ್ಯಾಚ್‌ನ ಇಡೀ ವಿವರಗಳನ್ನು ಚಾಚೂ ತಪ್ಪದೇ ನೆನಪಿಟ್ಟುಕೊಳ್ಳುವ ಸಣ್ಣ ಪ್ರಮಾಣದ ಪ್ರಭೃತಿಗಳಿಲ್ಲವೇ?

ಸ್ಪಷ್ಟ ದೃಷ್ಟಿಯ ದೇವತೆ ಅಥೆನಾ ಮತ್ತು

ಗುರಾಣಿ ಹಿಡಿದ ಜೀಯಸ್ ಗ್ರೀಕ್ ದೇವರುಗಳಿಗೆ ಈ ರಹಸ್ಯ ತಿಳಿದಿರಬಹುದೇನೋ. ಆದರೆ ಬಿಳಿ ಕೋಟಿನ, ಪ್ಲಾಸ್ಟಿಕ್ ಪೆನ್ನು ಹಿಡಿದ ವಿಜ್ಞಾನವು ಮಾಹಿತಿಗಳನ್ನು ಸಂಗ್ರಹಿಸಿ, ನೆನಪಿಟ್ಟುಕೊಂಡು, ಮರೆಯುವ ಬಗೆಗೆ ತುಂಬಾ ತಿಳಿದುಕೊಳ್ಳಬೇಕಿದೆ. ಈ ದಿನಗಳಲ್ಲಿ ನರಜೀವಶಾಸ್ತ್ರಜ್ಞರ ಒಲವಿನ ಸಿದ್ಧಾಂತವೆಂದರೆ ಇಂದ್ರಿಯಗಳ ಮೂಲಕ ಒಳಬರುವ ಮಾಹಿತಿಗಳು ನರವ್ಯೂಹದಿಂದ ವಿದ್ಯುತ್ ಸಂಕೇತಗಳಾಗಿ ಪರಿವರ್ತನೆಯಾಗಿ ಅದು ರಾಸಾಯನಿಕ ಪ್ರತಿಕ್ರಿಯೆಗಳ ಸರಣಿಯನ್ನೇ ಉಂಟುಮಾಡುತ್ತಾ ಮಿದುಳಿನ ಕೋಟ್ಯಂತರ ನರಕೋಶಗಳ ನಡುವೆ ಸಂಪರ್ಕಗಳಿಗೆ ಮತ್ತೆ ತಂತು ಜೋಡಣೆ ಮಾಡುವ ಒಂದು ಕಿಣ್ವವನ್ನು ಒಳಗೊಂಡಿರುತ್ತದೆ ಎಂಬುದು. ಈ ವಿಶಿಷ್ಟ ರಚನೆಯು ನೆನಪಿನ ವಿದ್ಯುತ್ ಮಾದರಿಯನ್ನು ಅದನ್ನು ಸೃಷ್ಟಿಸಿದ ಮಾದರಿಯಲ್ಲೇ ಪುನರುಜ್ಜೀವನಗೊಳಿಸಬಲ್ಲ ನೆನಪುಗಳನ್ನು ಸಂಗ್ರಹಿಸಿಡುತ್ತದೆ.

ಇದೇನಾದರೂ ನಿಜವಿದ್ದಲ್ಲಿ ಮುಂದೊಂದು ದಿನ ನಾವು ಈ ಅದ್ಭುತ ಕಿಣ್ವದಿಂದ ಮರೆಗುಳಿ ಮಿದುಳನ್ನು ಸ್ವಲ್ಪ ಕೆದಕಿ ನೆನಪಿಸಿಕೊಳ್ಳುವಂತೆ ಮಾಡಬಹುದು. ಈ ನಡುವೆ ಪ್ರಾಣಿಗಳ ಮೇಲೆ ಮಾಡಿದ ಪ್ರಯೋಗಗಳು ಪೊವೆಲ್‌ಸನ್ನರ ಸ್ಮರಣ ಶಕ್ತಿಯ ಕ್ರಮ ನಿಜವಿರಬಹುದೆಂದು ಸೂಚಿಸುತ್ತವೆ.

ಇಲಿನಾಯ್ ವಿಶ್ವವಿದ್ಯಾನಿಲಯದ ನರಜೀವಶಾಸ್ತ್ರಜ್ಞರಾದ ಗ್ರೀನೋಫ್‌ರವರು ಗಲಿಬಿಲಿಗೊಳಿಸುವ ಹಾದಿಗಳ ಜಾಲದಲ್ಲಿ ದಾರಿಯನ್ನು ಕಂಡುಹಿಡಿಯುವಂತಹ ಜಟಿಲ ಕ್ರಿಯೆಗಳನ್ನು ಪ್ರಾಣಿಗಳಿಗೆ ಕಲಿಸಿದಾಗ ವಯಸ್ಕ ಇಲಿಗಳ ಮಿದುಳುಗಳು ಹೊಸ ನರಸಂಬಂಧಗಳನ್ನು ಉಂಟುಮಾಡಿಕೊಳ್ಳುತ್ತವೆ ಎಂದು ತೋರಿಸಿದ್ದಾರೆ. ಮುದಿ ಇಲಿಗಳೂ ಉತ್ತೇಜನಕಾರಿ ಸನ್ನಿವೇಶದಲ್ಲಿರಿಸಿದಾಗ ಮಿದುಳಲ್ಲಿ ಮರುತಂತು ಜೋಡಣೆ ಮಾಡಿಕೊಳ್ಳುತ್ತವೆ. ಗ್ರೀನ್ಹೋ ಹೇಳುತ್ತಾರೆ, "ಹೊಸ ನರಸಂಬಂಧಗಳ ಉಂಟಾಗುವಿಕೆಯು ಕೊನೆಗೆ ಕೆಲವು ವಿಧವಾದ ಸ್ಮರಣೆಯ ಕೇಂದ್ರ ಅಂಶವಾಗಿರಲಿಕ್ಕೆ ಸಾಕು. ಹೋಮರ್, ಚಾಸರ್ ಮತ್ತು ಶೇಕ್ಸ್‌ಪಿಯರ್‌ರವರು ಆ ರೀತಿಯ ಸರಣಿಗಳಿಗೆ ಸೇರಿದವರೇ ಎಂಬುದನ್ನು ನಿರ್ಧರಿಸಲು ಸ್ವಲ್ಪಕಾಲ ಬೇಕಾಗಬಹುದು. ಏಕೆಂದರೆ ಈ ತರಹದ ಕೆಲಸಕ್ಕೆ ನಾವು ಪ್ರಾಣಿಗಳ ಮೇಲೆ ಮಾಡುವ ಅಧ್ಯಯನಕ್ಕೆ ಈಗ ಸೀಮಿತವಾಗಿದ್ದೇವೆ.

"ಆದರೆ ನೀವು ಮಿದುಳಿಗೆ ಅತ್ಯುತ್ತಮವಾದುದೇನನ್ನು ಮಾಡಬಹುದೆಂದರೆ ಅದನ್ನು ಅಭ್ಯಾಸದಲ್ಲಿ ತೊಡಗಿಸುವುದು. ಕೆಲವು ಭಾಗಗಳನ್ನು ಮಾನಸಿಕ ಕ್ರಿಯೆಗಳಿಂದ ಅತ್ಯುತ್ತಮವಾಗಿ ಅಭ್ಯಾಸಕ್ಕೊಳಪಡಿಸಿದರೆ ಕೆಲವನ್ನು ಭೌತಿಕ ಕಲಿಕೆಯಿಂದ ಮಾಡಬೇಕಾಗುತ್ತದೆ. ಒಂದು ಮಿದುಳಿನ ರಚನೆಯು ಶಿಥಿಲವಾಗುವುದನ್ನು ತಡೆಯುವ ಹಂತ ಬಂದಾಗ ನೀವೇನೂ ಮಾಡಲಾಗದ ಸ್ಥಿತಿಯೊಂದು ಬರುತ್ತದೆ, ಆದರದು ತುಂಬಾ ತಡವಾಗಿರುತ್ತದೆ. ಆ ಹಂತದವರೆಗೆ ನೀವು ಮಾಡುವ ಎಲ್ಲವೂ ಶಿಥಿಲೀಕರಣವನ್ನು ತಡವಾಗಿಸುತ್ತದೆ."

ತಜ್ಞರಿಂದ ಸೂಚಿತವಾದ ಅನೇಕ ಸ್ಮರಣೋದ್ದೀಪಕಗಳನ್ನು ಪೊವೆಲ್‌ಸನ್ ಬಳಸುತ್ತಾನೆ. "ನೆನಪಿನ ಶಕ್ತಿಯನ್ನು ಸುಧಾರಿಸಲು ಅನೇಕ ತಂತ್ರಗಳಿವೆ. ನಿಮಗೆ ವಯಸ್ಸಾದಾಗ ನೀವೂ ಅದನ್ನು ಬಳಸುತ್ತೀರಿ," ಎಂದು ಹಾರ್ವರ್ಡ್‌ನ ಮನಃಶಾಸ್ತ್ರಜ್ಞೆ ಮೆಕಾರ್ಥರ್ ಆಲ್ಬರ್ಟ್ ಹೇಳುತ್ತಾರೆ.

ಆಕೆ ಹೆಸರಿಸುವ ಹಲವಾರು ನೆನಪಿನ ಸಾಧನಗಳನ್ನು ಹೋಮರನ ಕಾಲದಲ್ಲಿನ ಪುರಾಣ ಕಾವ್ಯಗಾಯಕರು ಬಳಸುತ್ತಿದ್ದರು. ಜೋಡಣೆ ಎಂಬ ತಂತ್ರವು ಒಂದು ಕಿರುಗತೆಯನ್ನೇ ಒಳಗೊಂಡಿರುತ್ತದೆ. ಉದಾ: ಒಬ್ಬನು ಫೋರ್ಕ್ (ಮುಳ್ಳು ಚಮಚ) ಹಿಡಿದಿದ್ದಾನೆ, ಅದು ಕ್ರೋಮಿಯಂ ಲೋಹದ್ದು ಮತ್ತು ಆತನು ತನ್ನ ಶತ್ರು (ಎನಿಮಿ) ಎಂದು ಯೋಚಿಸುತ್ತಾ ಪೊವೆಲ್‌ಸನ್ ಫೋರ್ಕಿಸ್, ಕೊಮಿಯಸ್ ಮತ್ತು ಎನಿಮಸ್ ಎಂಬ ಗ್ರೀಕ್ ಹೆಸರುಗಳನ್ನು ನೆನಪಿಸಿಕೊಳ್ಳುತ್ತಾನೆ. ಸಹಜವಾಗಿಯೇ ನೆನಪಿಸಿಕೊಳ್ಳಲು ಸಹಾಯಕವಾದುವುಗಳೆಂದರೆ ಅಂತ್ಯಪ್ರಾಸ ಮತ್ತು ಛಂದಸ್ಸು. ಹೋಮರ್ ಕವಿಯು ಇಲಿಯಡ್ಡನ್ನು ಭಗಣ ಷಟ್ಪದಿಯಲ್ಲಿ ಬರೆದು ನೆನಪಿಗೆ ನೆರವಾಗಿದ್ದಾನೆ. ನಮ್ಮ ಅಷ್ಟಾವಧಾನಿ, ಶತಾವಧಾನಿಗಳು

ಸಹ ಛಂದಸ್ಸಿನ ಬಲದಿಂದಲೇ ಎಲ್ಲಾ ಪ್ರತಿರೋಧಗಳ ನಡುವೆಯೂ ಕಾಗದ ಲೇಖನಿಯ ನೆರವಿಲ್ಲದೆ ಪದ್ಯಗಳನ್ನು ರಚಿಸಿ, ಕೊನೆಗೆ ನೆನಪಿನಿಂದಲೇ ಒಪ್ಪಿಸಿ ಅಚ್ಚರಿ ಮೂಡಿಸುವರು. ಹಾಗೆಯೇ ಪೆಗ್ಗಿಂಗ್ ಎಂಬ 'ನೆನಪಿನಾಟ'ದಲ್ಲಿ ಇಂದ್ರಿಯ ಗೋಚರವಾಗುವ ವಸ್ತುನಾಮಗಳ ಪಟ್ಟಿಯನ್ನು ಓದಲು ಹೇಳಿ ಕಾಗದ ಪೆನ್ನಿನ ನೆರವಿಲ್ಲದೆ ಅದೇ ಕ್ರಮದಲ್ಲಿ ಒಪ್ಪಿಸುವಾಗ ವಸ್ತುಗಳ ಪ್ರಥಮಾಕ್ಷರ ಸರಣಿಯ ನೆರವಿನ ಬಳಕೆಯಿದೆ.

"ಪುರಾತನ ಗ್ರೀಕ್ ಕವಿ ಸಿಮೊನೈಡ್ಸ್ ಆರಂಭಿಸಿದ ಶಾಸ್ತ್ರೀಯ ವ್ಯವಸ್ಥೆಯನ್ನು ನೀನು ಅನುಸರಿಸುವೆಯಾ?" ಎಂದು ತನ್ನ ಮಗ ಒಂದು ಬಾರಿ ತನ್ನನ್ನು ಕೇಳಿದುದಾಗಿ ಪೊವೆಲ್‌ಸನ್ ಹೇಳುತ್ತಾನೆ. ಆ ಭಾಗ್ಯವಂತನು ಛಾವಣಿ ಕುಸಿಯುವ ಸ್ವಲ್ಪ ಮೊದಲು ಪಾನಗೋಷ್ಠಿಯಿಂದ ಹೊರನಡೆದು ಬಚಾವಾಗಿದ್ದ. ಉಳಿದ ಅತಿಥಿಗಳು ಗುರುತು ಸಿಗದಂತೆ ಬಜ್ಜಿಯಾಗಿದ್ದರೂ ಅನಂತರ ಪ್ರತಿಯೊಬ್ಬನೂ ಎಲ್ಲೆಲ್ಲಿ ಕುಳಿತಿದ್ದ ಎಂಬುದನ್ನು ಕರಾರುವಾಕ್ಕಾಗಿ ನೆನಪಿಟ್ಟುಕೊಂಡದ್ದರಿಂದ ಸಿಮೊನೈಡ್ಸ್ ಶವಗಳನ್ನು ಪತ್ತೆ ಹಚ್ಚಿದ.

ಪೊವೆಲ್‌ಸನ್ ಮುಂದುವರೆಸುತ್ತಾನೆ: "ಪುರಾತನ ಭಾಷಣಕಾರರು ಒಂದು ಉಪನ್ಯಾಸಕ್ಕೆ ಸಿದ್ಧರಾಗುವಾಗ ತಮ್ಮ ಮನೆಯೊಳಗೇ ಮಾನಸಿಕವಾಗಿಯೇ ನಡೆದಾಡುತ್ತಾ ಪ್ರತಿಯೊಂದು ಕೊಠಡಿ ಅಥವಾ ಪೀಠೋಪಕರಣಕ್ಕೆ ಒಂದೊಂದು ವಿಚಾರವನ್ನು ಹೋಲಿಸಿಕೊಳ್ಳುತ್ತಿದ್ದರು. ಆ ಮೇಲೆ ತಮ್ಮ ಭಾಷಣಗಳನ್ನು ಮಾಡುವಾಗ ಆ ನಡೆದಾಟದ ನೆನಪನ್ನೇ ಅನುಸರಿಸಿಕೊಂಡು ಮಾತನಾಡುತ್ತಿದ್ದುದರಿಂದ ವಿಚಾರಗಳು ಸರಿಯಾದ ಕ್ರಮದಲ್ಲಿಯೇ ಬರುವಂತಾಗುತ್ತಿತ್ತು. ಇಲಿಯಡ್‌ನ ೧೫೩,೬೯೩ ಸಾಲುಗಳನ್ನು ನೆನಪಿಸಿಕೊಳ್ಳಲು ಈ ಶಾಸ್ತ್ರೀಯ ಕ್ರಮ ಹೆಚ್ಚು ಪ್ರಯೋಜನಕಾರಿಯಲ್ಲ. ಯಾಕಂದರೆ ನನ್ನ ಬಳಿ ಅಷ್ಟು ಪೀಠೋಪಕರಣಗಳಿಲ್ಲವಲ್ಲ!"

ಇದೀಗ ಆ ಸಿಮೊನೈಡ್ಸ್‌ನ ಹೆಸರನ್ನು ಕಾರನ್ನು ಪಾಲಿಶ್ ಮಾಡುವ ಮೇಣವೊಂದಕ್ಕೆ ಇಟ್ಟು ಗೌರವಿಸಲಾಗಿದೆಯೆನ್ನಿ.

ಹೆಚ್ಚು ಪರಿಣಾಮಕಾರಿಯಾದ ನೆನಪಿನ ಸಂಗ್ರ



"ಪುಣ್ಯಾತ್ಮ ಒಳ್ಳೆ ಕೆಲಸಾ ಮಾಡಿದಾ... ಇಲ್ದಿದ್ರೆ ನನ್ನಾಗೆ ಕಷ್ಟಾಪಡಬೇಕಿತ್ತು....."

ಹಕ್ಕೆ ಹೊಸ ಮಾಹಿತಿಯನ್ನು ತಾನೇ ತಾನಾಗಿ ಜೋಡಿಸಿಕೊಳ್ಳುವ ಸಾಮರ್ಥ್ಯವನ್ನು ವಯಸ್ಕರು ಕಳೆದುಕೊಳ್ಳುತ್ತಾರೆಂಬುದನ್ನು ಪ್ರಯೋಗಗಳು ತೋರಿಸಿವೆ ಎಂದು ಆಲ್ಬರ್ಟ್ ಹೇಳುತ್ತಾರೆ. ಆದ್ದರಿಂದ ನೆನಪಿಡಲು ಬಲು ಮುಖ್ಯ ತಂತ್ರವೆಂದರೆ ಮಾಹಿತಿಯನ್ನು ಅರ್ಥಪೂರ್ಣವಾಗಿಸುವುದು. ಉದಾ: MT, VU, NO, DD, IW, HO ಕ್ರಮಗಳನ್ನೂ ನೆನಪಿಡುವುದು ಕಠಿನ. ಬದಲಿಗೆ MTV, GNO, DDI, WHO ನೆನಪಿಡುವುದು ಸುಲಭ. ಹೊಸವಿಚಾರವೊಂದನ್ನು ಹಲವಾರು ಚಿಕ್ಕ ಚಿಕ್ಕ ಕಾಲಾವಧಿಗಳಲ್ಲಿ ಸುಲಭವಾಗಿ ಕಲಿಯಬಹುದು, ಒಂದೇ ದೀರ್ಘವಾದ ಅವಧಿಯಲ್ಲಲ್ಲ.

ಪೊವೆಲ್‌ಸನ್ನನ ಯೋಜನೆಯಲ್ಲಿ ಇದಕ್ಕೆ ಎರಡು ವಿಧದ ಪ್ರಯತ್ನಗಳಿವೆ: ಆರಂಭದ ನೆನಪು ಮತ್ತು ಧಾರಣಕ್ಕಾಗಿ ಪುನರಾವಲೋಕನ. "ಪುನರಾವರ್ತನೆಯೇ ಕಲಿಕೆಯ ತಾಯಿ" ಎಂಬುದು ರೋಮನ್ನರ ಅಭಿಪ್ರಾಯ. "ಮೊದಲು ನಾನು ಪುಸ್ತಕವನ್ನು ಅರ್ಥಮಾಡಿಕೊಳ್ಳಲು ಹಾಗೂ ವಾಕ್ಯ ರಚನೆಗಳನ್ನು ನೋಡಲು ಓದುತ್ತೇನೆ. ಅನಂತರ ಒಂದು ಸಾಲನ್ನು ಗಟ್ಟಿಯಾಗಿ ಓದಿ, ಕಣ್ಣುಮುಚ್ಚಿ

ಕೊಂಡು ಕಂಠಪಾಠ ಮಾಡುತ್ತೇನೆ, ನೆನಪಿಟ್ಟುಕೊಳ್ಳುತ್ತೇನೆ."

ಒಂದು ಸಾಲನ್ನು ಹೀಗೆ ಮಾಡಿದ ಮೇಲೆ ಪೊವೆಲ್‌ಸನ್ ಮುಂದಿನ ಸಾಲನ್ನು ಸೇರಿಸಿಕೊಳ್ಳುತ್ತಾ, ಅನಂತರ ಎರಡೂ ಸಾಲುಗಳನ್ನೂ ಜ್ಞಾಪಿಸಿಕೊಂಡು ಆ ಪ್ಯಾರಾ ಮುಗಿಯುವವರೆಗೂ ಮುಂದುವರಿಯುತ್ತಾನೆ. ಇದೇ ಕ್ರಮವನ್ನು ಮುಂದುವರೆಸಿ ಇಡೀ ಗ್ರಂಥವೇ ಕಂಠಸ್ಥವಾಗುವಂತೆ ಮಾಡಿಕೊಳ್ಳುತ್ತಾನೆ. ಆಮೇಲೆ ಅದನ್ನು ಧ್ವನಿಮುದ್ರಣ ಮಾಡಿಕೊಂಡು, "ಪುಸ್ತಕ ನೋಡದೆಯೇ ಅದನ್ನು ಕೇಳುತ್ತಾ ನನ್ನ ನೆನಪನ್ನು ಗಟ್ಟಿ ಮಾಡಿಕೊಳ್ಳುತ್ತೇನೆ," ಎನ್ನುತ್ತಾನವನು. ಕೊನೆಗೆ ಇಡೀ ಗ್ರಂಥವನ್ನೇ ಪುನರಾವಲೋಕಿಸುತ್ತಾನೆ.

ಆತ ಬೆಳಿಗ್ಗೆ ಎದ್ದ ಮೇಲೆ ತುಂತುರು ಸ್ನಾನ ಮಾಡುವಾಗ, ಪ್ಯಾರಿಸ್‌ನ ಕಛೇರಿಗೆ ಹೋಗಿ ಬರುವಾಗ, ಹೋಟೆಲ್‌ನಲ್ಲಿ ಬಿಲ್ಲು ಕೈಗೆ ಬರುವವರೆಗೆ, ರಾತ್ರಿ ಹಾಸಿಗೆಯಲ್ಲಿ ಮಲಗಿದಾಗ ಹೀಗೆ ದಿನಕ್ಕೆ ೬೦ ನಿಮಿಷಗಳಷ್ಟನ್ನು ಅಲ್ಲಿ ಇಲ್ಲಿ ಬಳಸಿಕೊಂಡು ಒಬ್ಬನೇ ಇದ್ದಾಗ ಗಟ್ಟಿಯಾಗಿ ಉಚ್ಚರಿಸುತ್ತಾ, ಹಲವರ ನಡುವೆ ಇರುವ ಸಂದರ್ಭಗಳಲ್ಲಿ ಮನಸ್ಸಿನಲ್ಲೇ ಹೇಳಿಕೊಳ್ಳುತ್ತಾ ಇರುತ್ತಾನೆ.

"ಕಾಲ ಸರಿದಂತೆ ನನ್ನ ನಿತ್ಯದ ಒಂದು ಗಂಟೆಯ ಪಾಲನ್ನು ಹೆಚ್ಚುಹೆಚ್ಚಾಗಿ ಅಭ್ಯಾಸವು ಕಬಳಿಸುತ್ತಿದೆ. ದಿನಕ್ಕೊಂದು ಗಂಟೆಯ ಅಭ್ಯಾಸದಿಂದ ಒಂದು ಗ್ರಂಥದ ಒಂದರಿಂದ ೨೨ ಅಧ್ಯಾಯಗಳನ್ನು ನೆನಪಿಡಬಲ್ಲೆ. ಅಷ್ಟು ಭಾಗವನ್ನು ಅರ್ಧ ಗಂಟೆಯಲ್ಲಿ ಹಿಡಿದಿಡಬಲ್ಲೆನಾದರೆ ನಾನು ಮುಂದುವರೆದೇನು. ನನ್ನ ಕಾರ್ಯದ ಅಗಾಧತೆಯ ಅರಿವು ನಿಮಗೆ ಯಾವಾಗ ಆಗುತ್ತದೆಯೆಂದರೆ, ೧೪,೦೦೦ದಷ್ಟು ಸಾಲುಗಳುಳ್ಳ ಪುಸ್ತಕವನ್ನು ನೆನಪಿಡಲು ೨೨ ಅಧ್ಯಾಯಗಳನ್ನು ದಿನಕ್ಕೆ ಒಂದು ಗಂಟೆಯ ಅಭ್ಯಾಸದ ವೇಗದಲ್ಲಿ ಸಾಗಬೇಕೆಂದರೆ; ನಿಮಿಷಕ್ಕೆ ೨೨ ಸಾಲುಗಳ ಕತ್ತುಮುರಿಯುವಷ್ಟು ವೇಗದಲ್ಲಿ ಧಾವಿಸಿದರೆ ೧೨ ದಿನಗಳಿಗೊಮ್ಮೆ ಪ್ರತಿ ಸಾಲಿಗೆ ಕೇವಲ ೩ ಸೆಕೆಂಡುಗಳು ದೊರಕೀತೆಂಬುದು ತಿಳಿದಾಗ...." ಸಧ್ಯದಲ್ಲೇ ತನ್ನ ಕೆಲಸ ಮುಗಿಸುವ ಇರಾದೆ ಅವನದು.

ಅವನೇನೂ ಒಂದು ಅಧ್ಯಯನದ ವಿಷಯವಾಗಿಲ್ಲದಿದ್ದರೂ ಸಂಶೋಧಕರು ಪೊವೆಲ್‌ಸನ್ನನ ಸಾಧನೆಯು ಮುದಿಯಾಗುತ್ತಿರುವ ಮಿದುಳಿನ ಬಗೆಗೆ ಏನನ್ನು ಹೊರಗೆಡಹೀತೆಂಬ ಬಗೆಗೆ ತಿಳಿಯಲು ಉತ್ಸುಕರಾಗಿದ್ದಾರೆ. ಅವನಿಗದು ಸಾಧ್ಯವಾದರೆ ಯಾರಿಗಾದರೂ ಅದು ಸಾಧ್ಯವಾಗಲೇಬೇಕೆಂದು ಅವರ ವಾದ. ಪುರಾತನ ಗ್ರೀಕ್ ಕವಿಗಳು ವಾಸ್ತವವಾಗಿ ತಮ್ಮ ಅದ್ಭುತ ಧಾರಣಶಕ್ತಿಗೆ ತಕ್ಕವರಾಗಿದ್ದರೆಂಬುದನ್ನು ಸಾಧಿಸಿ ತೋರಿಸುವ ಈ ಪೊವೆಲ್‌ಸನ್ನನಿಗೆ ಶಾಸ್ತ್ರಪ್ರಿಯರಂತೂ ಕೃತಜ್ಞರಾಗಿದ್ದಾರೆ.

ಪೊವೆಲ್‌ಸನ್ನನೂ ಈ ಸಾಧನೆಯಿಂದ ಉತ್ಸುಕನಾಗಿದ್ದಾನೆ. "ಇದೊಂದು ದೊಡ್ಡ ಸವಾಲೇ ಸರಿ. ಏರಬೇಕಾದ ಎತ್ತರದ ಪರ್ವತ ಅಲ್ಲಿದೆ. ಪ್ರಾಯಶಃ ಇದೊಂದು ಅತಿ ದೊಡ್ಡ ಪುರಾಣ ಕಾವ್ಯವಾಗಿದ್ದು, ಅಮರಕಾವ್ಯವಾಗಿ ಅದನ್ನು ಹೀರಿಕೊಳ್ಳುವುದರಲ್ಲಿ ನನಗೆ ಬಲು ಸಂತಸವಿದೆ," ಎಂದು ದಿಟ್ಟತನದಿಂದ ಹೇಳುತ್ತಾನೆ. ಪ್ರಾಯಶಃ ಅವನಿಗೆ ನಮ್ಮ ರಾಮಾಯಣ, ಭಾರತಗಳ ಪರಿಚಯವಿರಲಾರದು. ಯೂರೋಪಿಯನ್ ಸಂಸ್ಕೃತಿಗೆ ಒಂದು ರೀತಿಯಲ್ಲಿ ತನ್ನ ಎಲ್ಲೆಯಿಂದಾಚೆಗೆ ಸಂಸ್ಕೃತಿಯೇ ಇಲ್ಲವೆಂಬ ಆತ್ಮಮೋಹ. ಇಲಿಯಡ್ ಮತ್ತು ಒಡೆಸ್ಸಿ ಎರಡನ್ನೂ ಒಟ್ಟು ಸೇರಿಸಿದರೂ ನಮ್ಮ ವ್ಯಾಸಭಾರತದ ಒಂದು ಎಂಟಾಂಶ ಭಾಗವಾಗಲಾರದು!

ಹೋಮರ್ ಇಲಿಯೆಡ್‌ನಲ್ಲಿ ಹೇಳುತ್ತಾನೆ. "ಯುವಕರ ಮನಸ್ಸು ಯಾವಾಗಲೂ ಬದಲಾಗಬಲ್ಲುದು. ಆದರೆ ಮುದುಕನೊಬ್ಬ ಒಂದು ವಿಚಾರವನ್ನು ಪರಿಗಣಿಸಿದನೆಂದರೆ ಅದರ ಹಿಂದೆ ಮುಂದೆ ಎರಡೂ ನೋಡುತ್ತಾನೆ." ಅದರ ಅರ್ಥವೇನೇ ಇರಲಿ. ಈ ವಾಕ್ಯವನ್ನು ಪೊವೆಲ್‌ಸನ್ನನಂತೂ ಒಂಬತ್ತೇ ಸೆಕೆಂಡುಗಳಲ್ಲಿ ಕಂಠಪಾಠ ಮಾಡಿ ಸೊಗಸಾಗಿ ಒಪ್ಪಿಸಬಲ್ಲನು. ●



# ಪರೀಕ್ಷೆ


EXAM
ಯಾರು ನಿನ್ನನ್ನು
ನೋಡಲು ಗಂಡಿನ ಕಡೆ
-ಯವರು ಬಂದಿದ್ದಾರಂತೆ..!!


ಕಾಲೇಜು


ಪ್ರಶ್ನೆಗುತ್ತರ ಅಲ್ಲ...
ಸುಧಾಳಿಗೊಂದು
ಲವ್ ಲೆಟರ್
ಬರ್ದು ಬಂದೆ...!?


EXAM HALL





# ಹೀಗೊಬ್ಬ 'ತದ್ರೂಪಿ'ಯ ಪ್ರಸಂಗ...

ಇಂದಿರಾ ಗಾಂಧಿ ಪ್ರಧಾನಿಯಾಗಿದ್ದಾಗ ಒಂದು 'ನೀಲಿ ಕೆಟ್ಟ ಸುದ್ದಿ' ಹಬ್ಬಿತ್ತು. "ಆಕೆಯ ಬಳಿ ಒಂದೇ ಬಣ್ಣದ ಒಂದೇ ಮಾಡೆಲ್ಲಿನ ಏಳು ಕಾರುಗಳಿವೆಯಂತೆ. ದಿಲ್ಲಿಯ ರಸ್ತೆಗಳಲ್ಲಿ ಅವು ಒಂದರ ಹಿಂದೊಂದು ಹೊರಟರೆ ಎಲ್ಲದರಲ್ಲೂ ಇಂದಿರಾ ಗಾಂಧಿಯೇ ಇರುತ್ತಾರಂತೆ. ಆದರೆ ಆ ಪೈಕಿ ನಿಜವಾದ ಇಂದಿರಾ ಯಾರು, ಆಕೆಯ ಪ್ರತಿರೂಪಿಗಳಾರು ಎಂಬುದನ್ನು ಗುರುತು ಹಿಡಿಯುವುದೇ ಕಷ್ಟವಂತೆ. ಇದೆಲ್ಲ ಯಾಕೆ ಗೊತ್ತೆ? ಗುರಿ ಹಿಡಿದು ಗುಂಡು ಹೊಡೆದು ಆಕೆಯ ಗುಂಡಿಗೆ ಸೀಳಲು ಹೊಂಚು ಹಾಕಿಕೊಂಡಿರುವವರ ಕಣ್ಣಿಗೆ ಮಣ್ಣೆರಚಲಂತೆ..."

ನಮ್ಮ ಜನಕ್ಕೆ ಇಂಥ ಸುದ್ದಿ, ಇಂಥ ಕಥೆಗಳೆಂದರೆ ಪಂಚಪ್ರಾಣ. ಕಿವಿದೆರೆದು ಕೇಳುತ್ತಾರೆ. ಬಾಯಿದೆರೆದು ಮೈಮರೆತು ಕೂಡುತ್ತಾರೆ. ಇದನ್ನರಿತೇ ಭಾರತೀಯ ಚಿತ್ರರಂಗ ಮತ್ತು ಟಿ.ವಿ.ಗಳು ಮತ್ತೆ ಮತ್ತೆ ತದ್ರೂಪಿಗಳಿರುವಂಥ ಕಥೆಗಳನ್ನೇ ರೀಲು ಸುತ್ತಿ ತೋರಿಸಿ ಹಣಮಾಡಿಕೊಳ್ಳುತ್ತಿವೆ. ದ್ವಿಪಾತ್ರಗಳಲ್ಲಿ ನಾಯಕನೊಬ್ಬ ನಟಿಸುತ್ತಿದ್ದಾನೆಂದರೆ ಆ ಸಿನಿಮಾ ಅಥವಾ ಸೀರಿಯಲ್ಲಿನ ಅಂತ್ಯವೇನೆಂಬುದನ್ನು ಏಳರೊಳಗಿನ ಹುಡುಗನೂ ಹೇಳಿಬಿಡಬಲ್ಲನಾದರೂ ಅದನ್ನೇ ಬಾಯಿ ಚಪ್ಪರಿಸಿಕೊಂಡು ವೀಕ್ಷಿಸುವ ಜನಕ್ಕೇನು ಕಮ್ಮಿ? ಭಾನುವಾರಕ್ಕೊಮ್ಮೆ ಮೂಡಿಬರುವ 'ಚಂದ್ರಕಾಂತಾ'ದಲ್ಲಂತೂ ಒಂದೊಂದು ರೂಪಕ್ಕೂ ಎರಡೆರಡು ಮೂರು ಮೂರು ಪ್ರತಿರೂಪಗಳು!

ಮೇಲೆ ಹೇಳಿದ ಇಂದಿರಾ ಕುರಿತ ಕಟ್ಟುಕಥೆಯನ್ನು ಸದ್ಯಕ್ಕೆ ಮರೆಯೋಣ. ಆದರೆ ಇಂಥ ಕಥೆ ಹುಟ್ಟಿಕೊಳ್ಳಲು ಕಾರಣವೇನು ಎಂಬುದನ್ನಿಷ್ಟು ಯೋಚಿಸೋಣ. ಜಗತ್ತಿನ ಪ್ರತಿಯೊಬ್ಬ ಸರ್ವಾಧಿಕಾರಿಯೊಂದಿಗೂ ಇಂಥ ಕಥೆಗಳು ತಳಕು ಹಾಕಿಕೊಂಡಿರುವುದಂತೂ ನಿಜ. ಅಡಾಲ್ಫ್ ಹಿಟ್ಲರ್‌ನನ್ನೇ ಹೋಲುತ್ತಿದ್ದವನೊಬ್ಬನಿದ್ದದ್ದು ಮತ್ತು ದಾಳವಾಗಿ ಆತನನ್ನು ಬಳಸಿಕೊಂಡದ್ದನ್ನು ಕಥೆಯಾಗುಳ್ಳ ನಾಟಕವೊಂದನ್ನು ಬರ್ಟೋಲ್ಡ್ ಬ್ರೆಖ್ಟ್ ಬರೆದ. ನಮ್ಮ ದೇಶದ ಸುಪ್ರಸಿದ್ಧ ರಂಗನಿರ್ದೇಶಕ-ನಾಟಕಕಾರರಲ್ಲಿ ಒಬ್ಬರಾದ ಎಸ್. ಪ್ರಸನ್ನರ 'ತದ್ರೂಪಿ' ನಾಟಕದಲ್ಲೂ ಹೂಬೇಹೂಬ್ ಹಿಟ್ಲರ್‌ನಂಥವರಿಬ್ಬರು ಬರುತ್ತಾರೆ. ಅಷ್ಟೇ ಏಕೆ, ಚರ್ಚಿಲ್ ಹಾಗೂ ಸ್ಟಾಲಿನ್ನರಿಗೂ ಒಬ್ಬೊಬ್ಬ 'ಬದಲಿ ವ್ಯಕ್ತಿ' ಇದ್ದರಂತೆ.

ಇಲ್ಲಿ ನಾನು ಹೇಳ ಹೊರಟಿರುವುದು ತೀರ

ನಿನ್ನೆ ಮೊನ್ನೆಯಷ್ಟೆ ನಡೆದ ಘಟನೆ. ಇರಾಕಿನ ಸದ್ದಾಮ್ ಹುಸೇನ್ ಮತ್ತು ಅವರ ಹಿರಿಯ ಮಗ ಆದೆ ಇಲ್ಲಿಯ ಮೂಲ ವ್ಯಕ್ತಿಗಳು. ಇಬ್ಬರಿಗೂ 'ಪ್ರತಿರೂಪಿ'ಗಳಿದ್ದರಂತೆ. ಇವರಿಬ್ಬರೂ ಅಂತಃಪುರದಲ್ಲಿ ಸದಾ ಆರಾಮದಿಂದಿರುವಂತೆ ನೋಡಿಕೊಳ್ಳಲು ಮತ್ತು ಇವರಿಬ್ಬರ ತಲೆಗೆ ಬೀಳಬಹುದಾದ ಪೆಟ್ಟೆಲ್ಲವನ್ನೂ ಸಹಿಸಿ ಮಹಿಸಿಕೊಳ್ಳಲು ತಲೆ ಎತ್ತಿ ನಿಂತವರು ಈ 'ತದ್ರೂಪಿ'ಗಳು. ಈ ಪೈಕಿ ಹೆಚ್ಚು ಸುದ್ದಿ ಮಾಡಿದವನೆಂದರೆ ಸದ್ದಾಮ್ ಪುತ್ರನ ಪ್ರತಿಬಿಂಬವೆನಿಸಿಕೊಂಡ ಲತೀಫ್ ಯಾಹ್ಯಾ.

ಇರಾಕಿನ ರಾಜಧಾನಿ ಬಗದಾದಿನಲ್ಲೊಂದು

**ಸಾರ್ವಜನಿಕ ಬದುಕಿನಲ್ಲಿ 'ಭಯಂಕರ'ರೆನ್ನಿಸಿಕೊಳ್ಳುವವರ ಬದುಕೇ ಹಾಗೆ. ಯಾವುದೋ ವಿಚಿತ್ರ ಭಯ ಅವರನ್ನು ಕಾಡುತ್ತಿರುತ್ತದೆ.**

ವಿಶಿಷ್ಟ ಶಾಲೆಯಿದೆ. ಅಲ್ಲಿ ಕಲಿಯುವವರೆಲ್ಲ ಆ ದೇಶದ ಅತ್ಯಂತ ಶ್ರೀಮಂತ, ಅತಿ ಪ್ರತಿಷ್ಠಿತ, ಉಚ್ಚಾಧಿಕಾರವುಳ್ಳವರ ಮಕ್ಕಳು. ಮಗ ಲತೀಫ್ ಕೂಡ ಇದೇ ಶಾಲೆಯಲ್ಲಿ ಓದಲೆಂದು ಬಿಟ್ಟ ಆತನ ಧನಾಢ್ಯ ತಂದೆ. ಕುರ್ದ್ ಜಾತಿಯ ಆತ ಬಗದಾದಿನಲ್ಲಿ ಬಂದು ಓದತೊಡಗಿದಂದಿನಿಂದಲೇ ಲತೀಫ್ ಎಲ್ಲರ ಕಣ್ಣಲ್ಲಿ ಕೂತ. ರಾಷ್ಟ್ರಪತಿ ಸದ್ದಾಮರ ಮಗ ಆದೆ ಕೂಡ ಅದೇ ಶಾಲೆಯ ವಿದ್ಯಾರ್ಥಿ. ಮೊದಲ ದಿನವಂತೂ ಲತೀಫ್ ತನ್ನ ಪಾಡಿಗೆ ತಾನು ಬರುತ್ತಿದ್ದರೆ ಉಳಿದ ಹುಡುಗರು, "ಓ.... ರಾಷ್ಟ್ರಪತಿಗಳ ಮಗ ಆದೆ ಸಾಹೇಬರು ಬರುತ್ತಿದ್ದಾರೆ, ಸರಿಯಿರೋ," ಎಂದು ಮಾತಾಡಿಕೊಂಡರಂತೆ. ಅದೇ ಹೊತ್ತಿಗೆ ಅತ್ತ ಕಾರಿನಿಂದ

• ಗೋಪಾಲ ವಾಜಪೇಯಿ

ಆದೆಯೂ ಇಳಿದು ಬಂದಾಗ ಆ ಹುಡುಗರಂತೂ ಸರಿಯೆ, ಸ್ವತಃ ಲತೀಫನೂ ಆದೆಯೂ ತಬ್ಬಿಬ್ಬು. ಎದುರಿಗಿರುವುದೇನು, ಕನ್ನಡಿಯೊಳಗಿನ ತನ್ನ ಪ್ರತಿಬಿಂಬವೇ ಎಂಬ ಅಚ್ಚರಿ ಇಬ್ಬರಿಗೂ. ಕೆಲವರಂತೂ ಇವರು ಅವಳಿ ಮಕ್ಕಳೆ ಎಂದುಕೊಂಡಿರಲೂ ಸಾಕು.

ಆದೆ ಮತ್ತು ಲತೀಫ್ ಒಂದೇ ಕ್ಲಾಸಿನವರು. ಇದು ಸಾಲದೆಂಬಂತೆ ಒಂದೇ ಬೆಂಚಿನ ಮೇಲೆ ಕೂಡತೊಡಗಿದರು. ಆ ಹೈಸ್ಕೂಲಿನಿಂದ ಹೊರಬೀಳುವವರೆಗೂ ಒಂದೇ ತಟ್ಟೆಯಲ್ಲಿ ಊಟ ಮಾಡುವಷ್ಟು ಜೀವಕೊರಳ ಗೆಳೆಯರಾಗಿಬಿಟ್ಟ ಅವರಿಬ್ಬರೂ ನಂತರ ಕೆಲವು ಕಾಲ ಪರಸ್ಪರ ಮುಖದರ್ಶನವಾಗದಷ್ಟೂ ದೂರವಿರಬೇಕಾಗಿ ಬಂತು.

ಲತೀಫ್ ಮುಂದೆ ಬಗದಾದ್ ವಿಶ್ವವಿದ್ಯಾಲಯವನ್ನು ಸೇರಿದ. ೧೯೮೬ರಲ್ಲಿ ಕಾನೂನು ಪದವಿ ಪಡೆದ. ಇರಾಕಿನ ತರುಣರೆಲ್ಲ ಕೆಲ ವರ್ಷ ಅಲ್ಲಿಯ ಸೈನ್ಯದಲ್ಲಿ ಸೇವೆ ಸಲ್ಲಿಸಲೇ ಬೇಕಾದ್ದರಿಂದ ಲತೀಫ್ ಕೂಡ ಫೌಜ್‌ನಲ್ಲಿ ಭರ್ತಿಯಾದ. ಇರಾಣ್-ಇರಾಕ್ ಯುದ್ಧದಲ್ಲೂ ಪಾಲ್ಗೊಂಡ. ೧೯೮೮ರ ಸಪ್ಟಂಬರಿನಲ್ಲಿ ಆತನಿಗೊಂದು ಪದೋನ್ನತಿ- ಫಸ್ಟ್ ಲೆಫ್ಟಿನೆಂಟ್ ಎಂದು. ಇರಾಕ್ ಆಗ ಕುವೈಟಿನ ಮೇಲೆ ಕೆಂಡ ಉಗುಳುತ್ತಿತ್ತು. ಅಮೆರಿಕ ಮಧ್ಯಪ್ರವೇಶ ಮಾಡಿದ್ದ ಹೊತ್ತಿನಲ್ಲೇ ಮುಂಚೂಣಿ'ಯಲ್ಲಿದ್ದ ಲತೀಫನಿಗೆ ಸ್ವತಃ ರಾಷ್ಟ್ರಪತಿ ಸದ್ದಾಮರೇ ಸಂದೇಶವೊಂದನ್ನು ಕಳಿಸಿದರು: "ತುರ್ತಾಗಿ ಬಗದಾದಿಗೆ ಬಂದು ರಾಷ್ಟ್ರಪತಿ ಭವನವನ್ನು ಸಂಪರ್ಕಿಸಬೇಕು."

ಅಲ್ಲಿ ಬಂದು ನೋಡಿದರೆ ಭವನದ್ವಾರದಲ್ಲೇ ಆದೆಯ ಹಸನ್ಮುಖ, ತೆರೆದ ತೋಳುಗಳ ಸ್ವಾಗತ! ಇದರಿಂದ ಆನಂದತುಂದಿಲನಾದ ಲತೀಫ್‌ಗೆ ಮತ್ತೊಂದು ಅಚ್ಚರಿಯ ಆಹ್ವಾನ: "ನೀನು ಸದ್ದಾಮ್ ಹುಸೇನರ ಮಗನಾಗಬಯಸುವೆಯಾ?"

ಲತೀಫ್ ಅವಾಕ್ಕಾಗಿ ನಿಂತ. ಒಂದೊಮ್ಮೆ

ಅಂಥ ಹಗಲುಗನಸನ್ನೇ ಕಾಣುತ್ತಿದ್ದವನಿಗೆ ಆ ಅವಕಾಶ ಅಯಾಚಿತವಾಗಿ ಬಂದೊದಗಿದರೆ ಹೇಗಾಗಬೇಡ! ಆದರೆ ಮರುಕ್ಷಣದಲ್ಲೇ ವಾಸ್ತವ ವನ್ನರಿತ ಲತೀಫ್ ಆ ಆಹ್ವಾನವನ್ನು ಒಪ್ಪಿಕೊಳ್ಳಲೂ ಇಲ್ಲ, ತಿರಸ್ಕರಿಸಲೂ ಇಲ್ಲ. ಮುಖದಲ್ಲಿ ನಗೆ ಮೂಡಿಸಿಕೊಂಡು ಹೇಳಿದ, "ನಾವೆಲ್ಲ ಇರಾಕಿಗಳು ಮಹಾಮಹಿಮ ಸದ್ದಾಮರ ಮಕ್ಕಳೇ ಅಲ್ಲವೆ?"

"ನಾನು ಹೇಳುತ್ತಿರುವುದು ಆದಲ್ಲ ಗೆಳೆಯಾ, ನೀನು ನನ್ನೊಂದಿಗಿದ್ದು ಸದ್ದಾಮರ ಖಾಸಾ ಮಗ ನಾಗು. ಕೇವಲ ನನ್ನ ರಕ್ಷಕನಾಗಿ ನೀನಿರುವುದು ನನಗ್ಯಾಕೋ ಒಪ್ಪಿಗೆಯಾಗುತ್ತಿಲ್ಲ. ಶಾಲೆಯಲ್ಲಿ ನಮ್ಮಿಬ್ಬರನ್ನೂ ಅವಳಿ ಮಕ್ಕಳೆಂದು ಕರೆಯುತ್ತಿರಲಿಲ್ಲವೆ? ನೀನೀಗ ನನ್ನ ಪ್ರತಿರೂಪವಾಗು ಎಂದು ವಿನಂತಿಸಿಕೊಳ್ಳುತ್ತಿದ್ದೇನೆ."

ಆದೆಯ ಮಾತಿಗೆ ಪ್ರತಿಯಾಗಿ ಏನೂ ಹೇಳದ ಲತೀಫ್ ಯಾಹ್ಯಾ "ಯೋಚಿಸಲು ಸ್ವಲ್ಪ ಅವಕಾಶ ಕೊಡಿ," ಎಂದ.

ಮರುದಿನ ಆದೆಯೆದುರು ಬಂದು ನಿಂತ ಲತೀಫ್ ವಿನಯಪೂರ್ವಕ ನಿವೇದಿಸಿಕೊಂಡ- "ನನಗೆ ಅಂಥ ಮಹತ್ವಾಕಾಂಕ್ಷೆ ಏನಿಲ್ಲ. ದಯವಿಟ್ಟು ನನ್ನನ್ನು ರಾಷ್ಟ್ರಪತಿಗಳ ಸೇವೆಯಲ್ಲೇ ಇರಲು ಬಿಡಿ. ನಿಮ್ಮ ಪ್ರತಿರೂಪವಾಗಲು ಒತ್ತಾಯಿಸಬೇಡಿ."

ಆದೆ ಉರಿದೆದ್ದ. ಯಾಹ್ಯಾನ ಮೇಲೇರಿ ಬಂದವನೇ ಮಿಲಿಟರಿ ಪೋಷಾಕನ್ನು ಎಳೆದು ಹಿಡಿದ. ಆತನ ಎದೆಗಿದ್ದ ಪದಕಗಳನ್ನೂ ಭುಜಗಳಿಗಿದ್ದ 'ನಕ್ಷತ್ರ'ಗಳನ್ನೂ ಕಿತ್ತೆಸೆದ. ಭದ್ರತಾ ಪಡೆಯ ಮಂದಿಯನ್ನು ಕರೆದು, "ಈತನನ್ನು ಎಳೆದೊಯ್ದು ಕೂಡಿ ಹಾಕಿ," ಎಂದು ಆದೇಶವಿತ್ತ. "ಕೂಳು-ನೀರು ಎನ್ನುವ ಸ್ಥಿತಿಗೆ ತನ್ನಿ... ಆಂದರೆ ತಾನೇ ಹಾದಿಗೆ ಬರುತ್ತಾನೆ," ಎಂದು ಕೂಗಾಡಿದ.

ವಾರವೊಂದು ಉರುಳಿತು. ತನ್ನೆದುರು ಚಾಚಲ್ಪಟ್ಟ ಒಪ್ಪಂದ ಪತ್ರದ ಮೇಲೆ ಯಾಹ್ಯಾ ಅನಿವಾರ್ಯವಾಗಿ ಸಹಿ ಹಾಕಬೇಕಾಯಿತು. "ಆದೆ ಸಾಹೇಬರ ಪ್ರಸ್ತಾಪವನ್ನು ನಾನು ಮನಃಪೂರ್ವಕ ಒಪ್ಪಿಕೊಂಡಿದ್ದೇನೆ. ಇನ್ನು ಮುಂದೆ ನಾನು ನಾನಲ್ಲ; ಆದೆ ಸಾಹೇಬರ 'ತದ್ರೂಪಿ'ಯಾಗುಳಿಯುತ್ತೇನೆ. ಒಂದು ವೇಳೆ ಇದಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡರೆ ನನ್ನನ್ನು ಗಲ್ಲಿಗೇರಿಸುವ ಅಧಿಕಾರ ರಾಷ್ಟ್ರಪತಿ ಭವನಕ್ಕಿದೆ..."

ಸಹಿ ಹಾಕಿದ್ದಷ್ಟೇ ಗೊತ್ತು. ಆದೇನೋ ತೋಳಿಗೆ ಸೂಜಿಯಂಥದು ನಾಟಿದ ನೆನಪು. ಮುಂದೇನಾಯಿತೆಂಬುದು ಲತೀಫ್‌ಗೆ ಹ್ಯಾಗೆ ಗೊತ್ತಾಗಬೇಕು? ಎಚ್ಚರವಾದಾಗ ತಾನಿದ್ದದ್ದು ಒಂದು ಆಸ್ಪತ್ರೆಯಲ್ಲಿ ಎಂಬುದು ತಿಳಿದಾಗ ಗಾಬರಿಗೀಡಾದ. ತಾನೆಲ್ಲಿದ್ದೇನೆಂದು ಕೇಳಲೂ ಅಸಾಧ್ಯ. ಬಾಯಿ-ಮುಖಕ್ಕೆಲ್ಲ ಬ್ಯಾಂಡೇಜು ಮಾಡಲಾಗಿದೆ. ಆದೊಂದು ಅತಿ ವಿಶೇಷ ವಾರ್ಡಿನ ಪ್ರತ್ಯೇಕ ಕೋಣೆ ಮತ್ತು ಹೊರಗೆ ಭದ್ರತಾ ಪಡೆಯ ಅಧಿಕಾರಿಗಳ ಅಜ್ಞಾವಲಿದೆ ಎಂದು ತಿಳಿಯಲು ತಡವಾಗಲಿಲ್ಲ. ಬಂದ ನರ್ಸ್ ಒಬ್ಬಾಕೆಗೆ ತನಗೇನಾಗಿದೆಯೆಂದು ಸನ್ನೆ ಮಾಡಿಯೇ ಕೇಳಿದ.

"ಪ್ಲಾಸ್ಟಿಕ್ ಸರ್ಜರಿ"- ತಟ್ಟನೆ ಉತ್ತರಿಸಿ, ಹೇಳಬಾರದಿತ್ತೇನೋ ಎಂಬಂತೆ ನಾಲಿಗೆ ಕಚ್ಚಿಕೊಂಡಳಾಕೆ.

ಲತೀಫ್‌ಗೆ ಎಲ್ಲಾ ಅರ್ಥವಾಗಿ ಹೋಯಿತು. ತನ್ನನ್ನು ರಾಷ್ಟ್ರಪತಿ ಭವನದ ಆವರಣದಲ್ಲೇ ಇರುವ 'ಇಬ್ನೆ-ಸಿನಾ ಆಸ್ಪತ್ರೆ'ಗೆ ಸೇರಿಸಿದ್ದಾರೆ; ಸರೂಪಿಕ ಚಿಕಿತ್ಸೆಗೈದು ಮುಖವನ್ನು ಥೇಟ್ ಆದೆಯಂತೆಯೇ ಪರಿವರ್ತಿಸಿಟ್ಟಿದ್ದಾರೆ; ಸ್ವಲ್ಪ ಉಬ್ಬಿದ ಹಲ್ಲುಗಳನ್ನೂ ಸಮಪಂಕ್ತಿಯನ್ನಾಗಿಸಿದ್ದಾರೆ... ಇನ್ನು ಮುಂದೆ "ನಾನು ಅವನಲ್ಲ" ಎಂದರೆ ಯಾರು ಕೇಳುತ್ತಾರೆ? ಅಷ್ಟಕ್ಕೂ ಹಾಗೆ ಹೇಳುವ ಸ್ವಾತಂತ್ರ್ಯವಾದರೂ ಎಲ್ಲಿದೆ ತನಗೆ? ಒಪ್ಪಂದ ಪತ್ರಕ್ಕೆ ಸಹಿ ಹಾಕಿ 'ತಲೆದಂಡ'ಕ್ಕೆ ಹೆದರಿಕೊಳ್ಳುವ ಪರಿಸ್ಥಿತಿ ತಂದುಕೊಂಡಾಗಿದೆಯಲ್ಲ.....

ಆಸ್ಪತ್ರೆಯಿಂದ ಬಿಡುಗಡೆಯಾದ ಮೇಲೆ ಶುರುವಾಯಿತು 'ವಿಶೇಷ ತರಬೇತಿ.' ದಿನಕ್ಕೆ ಹದಿನಾರು ಗಂಟೆಗಳ ಕಾಲ ಎಡೆಬಿಡದೇ ವೀಡಿಯೋ ನೋಡಬೇಕು. ಆದರಲ್ಲಿ ಆದೆ ಹುಸೇನ್ ಹೇಗೆ ನಡೆಯುತ್ತಾನೆ, ಮಾತಾಡುವ ಶೈಲಿ ಎಂಥದು, ನಗೆಯ ಸ್ಟೈಲೇನು.... ಒಂದೇ



ಈತ ಉದಯಲ್ಲ, 'ಲತೀಫ್'!

ಎರಡೇ... ಪ್ರತಿಯೊಂದನ್ನೂ ಹತ್ತತ್ತು ಸಲ ನೋಡಿ ರೂಢಿಸಿಕೊಳ್ಳಬೇಕು. ಆದೆಯ ಕುಡಿತದ ಅಭಿರುಚಿ, ಕುಣಿತದ ರೀತಿ, ಸಿಗಾರ್ ಸೇದುವ ಭಂಗಿ, ಕಾರು ಓಡಿಸುವ ವೇಗ ಎಲ್ಲವನ್ನೂ ಕಲಿತುಕೊಂಡ ಲತೀಫ್. ಕಲಿತುಕೊಂಡನೇನು? ಕಲಿಯಲೇಬೇಕಾಗಿತ್ತು. ಕಾರು ಏರುವ ಮುನ್ನ ಅದರಡಿಗೆ ಬಾಗಿನೋಡಿ ಖಚಿತಪಡಿಸಿಕೊಂಡ ನಂತರವೇ ಒಳಗೆ ಕುಳಿತುಕೊಳ್ಳುವುದು ಆದೆಯ ಪದ್ಧತಿ. ತರಬೇತಿಯೆಲ್ಲ ಮುಗಿದ ಮೇಲೆ ಉಳಿದೆಲ್ಲದರಲ್ಲೂ 'ವಾಹವ್ವಾ' ಅನ್ನಿಸಿಕೊಂಡ ಲತೀಫ್ ಕಾರು ಏರುವ ಸಂದರ್ಭದಲ್ಲಿ ಮಾತ್ರ ಒದೆ ತಿಂದ. ಬೂಟುಗಾಲಿನ ಒದೆತ! ಮುಂದೆಲ್ಲ ತುಂಬ ಎಚ್ಚರಿಕೆ ವಹಿಸತೊಡಗಿದ ಯಾಹ್ಯಾ.

ಸತತ ನಾಲ್ಕು ವರ್ಷ ಲತೀಫ್ ಯಾಹ್ಯಾ ವಿದೇಶ ಸಂಚಾರದಲ್ಲೇ ವ್ಯಸ್ತನಾಗಿದ್ದ. ಆದೆಯೊಂದಿಗೆ ಆತನ ನೆರಳಾಗಿ ಹೊರಟು, ಮುಂದೆ ಆತನ ಆದೇಶದಂತೆ 'ಆದೆ' ಆಗಿಯೇ ತಿರುಗಾಡಬೇಕಾದ ಅನಿವಾರ್ಯ ಕರ್ಮ. ಲಂಡನ್, ಜಿನೇವಾ, ಪ್ಯಾರಿಸ್... ನೂರಕ್ಕೂ ಹೆಚ್ಚು ಕಾರುಗಳ ಒಡೆಯ ಆದೆಗೆ ಆಯಾ ಕಾರಿನ ಬಣ್ಣದ್ದೇ ಸೂಟು ಧರಿಸುವ ಶೋಕಿ. ಬಗದಾದಿನಲ್ಲಿದ್ದಾಗ ಲತೀಫನೂ ಅದನ್ನೇ ಅನುಸರಿಸಬೇಕು. ವಿದೇಶಕ್ಕೆ ಹೋದಾಗ ಮಾತ್ರ ನಿಜವಾದ ಆದೆಗಿಂತ ನಕಲಿ 'ಆದೆ'ಗೇ ಹೆಚ್ಚಿನ ಭದ್ರತಾಪಡೆಯ ಕಾವಲಿರುತ್ತಿತ್ತು. ಒಮ್ಮೊಮ್ಮೆ ಎಪ್ಪತ್ತೆರಡರವರೆಗೂ ಅಂಗರಕ್ಷಕರಿರುತ್ತಿದ್ದರು! ಕೊಲ್ಲಿ ಯುದ್ಧ ಮುಗಿಯುವ ವೇಳೆಗಂತೂ ಸದ್ದಾಮ್ ಹುಸೇನರಿಗೆ ಲತೀಫನ ಮೇಲೆ ಅದೆಂಥ ವಿಶ್ವಾಸ ವುಂಟಾಯಿತೆಂದರೆ ಆತನ ಹೆಗಲ ಕೈ ಹಾಕಿಕೊಂಡು ಅಡ್ಡಾಡತೊಡಗಿದರು. ಸಾಮಾನ್ಯರ ಕಣ್ಣಲ್ಲಿ ಮಣ್ಣೆರಚಲು ಇದು ಸುಲಭೋಪಾಯವಾಗಿಬಿಟ್ಟಿತು.

ಅಮೆರಿಕದ ಪಡೆಗಳ ಹಿಡಿತ ಬಿಗಿಯಾಗುತ್ತ ನಡೆದಾಗ ಸದ್ದಾಮ್ ಹತಾಶರಾದರು, ಹೆದರಿದರು. ಅವರು ಪರಿವಾರ ಸಮೇತ ಇರಾಕಿನಿಂದ ದೂರದ

ದೇಶಕ್ಕೆ ಹೊರಟು ನಿಂತಿದ್ದಾರೆಂಬ ಸುದ್ದಿ ಅದು ಹೇಗೋ ಹಬ್ಬಿ ಸೈನ್ಯದಲ್ಲೂ ಸಾಮಾನ್ಯರಲ್ಲೂ ಭಯ ಬಿತ್ತಿತು. ಈ ಹೊತ್ತಿನಲ್ಲಿ ಅದೆಲ್ಲ ಸುಳ್ಳು ಎಂದು ಸಿದ್ಧಪಡಿಸಲೇನೋ ಎಂಬಂತೆ ಆದೆ ಹುಸೇನ್ ಟೆಲಿವಿಜನ್ ಕ್ಯಾಮರಾಗಳೊಂದಿಗೆ ಮುಂಚೂಣಿಗೆ ಬಂದ. ನಾಲ್ಕಾರು ದಿನಗಳವರೆಗೆ ಅಲ್ಲಿಯ ಟಿ.ವಿ.ಯ ಸುದ್ದಿ ಪ್ರಸಾರದಲ್ಲಿ ಈ ವಾರ್ತೆಗೇ ಪ್ರಾಮುಖ್ಯ. ದಿನಕ್ಕೆ ಹತ್ತತ್ತು ಬಾರಿ ಅದನ್ನು ತೋರಿಸಿದ್ದೇ ತೋರಿಸಿದ್ದು. ನಿಜ ಸಂಗತಿ ಎಂದರೆ ಮುಂಚೂಣಿಗೆ ಹೋದವ ಆದೆಯ ತದ್ರೂಪಿ. ಆತನ ಮೇಲೆ ಒಟ್ಟು ಒಂಭತ್ತು ಸಲ ಹಲ್ಲೆಯ ಪ್ರಯತ್ನ ನಡೆಯಿತು. ಆದರೆ ಲತೀಫ್ ತನ್ನ ಚಾಣಾಕ್ಷತೆಯಿಂದ ಬದುಕುಳಿದ.

ಭಯ- 'ಬಾಡಿಗೆ ಬಂಟ'ತನಗಳು ಲತೀಫ ನಲ್ಲಿ ಬರ್ಬರತೆಯನ್ನು ಬೆಳೆಸಿದುವು. ಅದಕ್ಕೆ ಬಲಿಯಾಗುತ್ತಿದ್ದಾಕೆ ಯಾಹ್ಯಾನ ಹೆಂಡತಿ. ಆತ ನೊಂದಿಗೆ ರಾತ್ರಿ ಕಳೆಯುವುದೆಂದರೆ ಆಕೆಗೆ ಹಿಂಜರಿಕೆ. ಮಾತಿಲ್ಲ-ಕಥೆಯಿಲ್ಲ, ಮೆಲುನಗೆಯಿಲ್ಲ, ನಲಿವಿನ ನೋಟವಿಲ್ಲ. ಯಾವ್ಯಾವುದೋ ಹೆಸರು ಹೇಳುತ್ತ ಹೆಂಡತಿಯನ್ನು ಹೊಡೆದುಬಿಡುತ್ತಿದ್ದ. ಆಮೇಲೆ ಎಲ್ಲಿಲ್ಲದ ದಣಿವು ಆವರಿಸಿ ಮಲಗಿಬಿಡುತ್ತಿದ್ದ. ಅದಾದರೂ ಎಂಥ ಮಲಗುವಿಕೆ? ನಿದ್ದೆ ಬಂದರೆ ತಾನೆ? ಸಣ್ಣ ಸದ್ದಿಗೂ ಧಿಗ್ಗನೆದ್ದು ಕುಳಿತು ಹಲ್ಲೆಖೋರರು ಬಂದರೇನೋ ಎಂದು ಮಂಚದ ಅಡಿಯಲ್ಲಿ ಬಚ್ಚಿಟ್ಟುಕೊಳ್ಳಬೇಕು.

ಸಾರ್ವಜನಿಕ ಬದುಕಿನಲ್ಲಿ 'ಭಯಂಕರ'ರೆನ್ನಿಸಿಕೊಳ್ಳುವವರ ವೈಯಕ್ತಿಕ ಜೀವನವೇ ಹಾಗೆ. ಅದಾವುದೋ ವಿಚಿತ್ರ ಭಯ ಅವರನ್ನು ಕಾಡುತ್ತಿರುತ್ತದೆ. ಸಾವು ಕುಂಬಿಯ ಮೇಲೆ ಕೂತು 'ಕಾ... ಕಾ..' ಎಂದು ಅರಚುತ್ತಿದೆಯೆಂಬ ಭ್ರಮೆ ಅವರಿಗೆ. ಲತೀಫ್ ಸ್ವತಃ ಇಂಥ ಭ್ರಮೆಗೊಳಗಾಗಿದ್ದಲ್ಲದೇ ಸದ್ದಾಮರ ಸುತ್ತಮುತ್ತ ಇರುವವರೆಲ್ಲ ತನ್ನಂತೆಯೇ ಎಂಬ ಅಂಶವನ್ನೂ ಮನಗಂಡಿದ್ದ. ಅವರೆಲ್ಲ ಸದ್ದಾಮರೊಂದಿಗೆ ಮುಖಕೊಟ್ಟೂ ಮಾತನಾಡುವ ಧೈರ್ಯವಿರದವರು. ನಡೆ-ನುಡಿಯಲ್ಲಿ ಎಲ್ಲಾದರೂ ತೂಕತಪ್ಪಿದರೆ ನೇಣುಗಂಬವೇ ಗತಿ ಎಂಬ ಸತ್ಯ ಗೊತ್ತಿತ್ತಲ್ಲ!

ಸದ್ದಾಮರು ಈ ನಕಲಿ ಪುತ್ರನ ಹೆಗಲ ಮೇಲೆ ಕೈ ಹಾಕಿಕೊಂಡು ತಿರುಗಾಡಿದ ವಿಷಯವನ್ನು ಪ್ರಸ್ತಾಪಿಸಿದ್ದೇನಷ್ಟೆ. ರಾಷ್ಟ್ರಪತಿಗೆ ತಮ್ಮ ಎರಡನೆಯ ಮಗನ ಮೇಲೆಯೇ ಹೆಚ್ಚು ಪ್ರೀತಿಯಂತೆ. ಹಿರಿಯ ಮಗ ಆದೆಗೆ ಅಪ್ಪನೆದುರು ನಿಂತುಕೊಳ್ಳುವುದೆಂದರೆ ಥರಥರ ನಡುಕವಂತೆ. ಆತ ಅಪ್ಪನನ್ನು ವಾಡಿಕೆಯಂತೆ 'ಅಬ್ಬಾಜಾನ್' ಎಂದು ಸಂಬೋಧಿಸುವುದೇ ಇಲ್ಲವಂತೆ. ಇನ್ನುಳಿದ ಅಧಿಕಾರಿಗಳಂತೆ "ಮಹಾಮಹಿಮರೆ" (Your Excellency) ಎಂದೇ ಮಾತು ಪ್ರಾರಂಭಿಸುತ್ತಾನಂತೆ.

"ನಾನು ಇಂಥ ಉಸಿರುಗಟ್ಟಿಸುವ ವಾತಾವರಣದಲ್ಲಿ ರಾಷ್ಟ್ರಪತಿ ಸದ್ದಾಮರೊಂದಿಗೆ ಮನಸ್ಸು ಬಿಚ್ಚಿ ಮಾತನಾಡಿದೆ! ಅವರೂ ನನ್ನೊಂದಿಗೆ ಅದೇ ರೀತಿಯಲ್ಲಿ ವರ್ತಿಸುತ್ತಿದ್ದರು. ಆದರೂ ಅವರು ಕೂಡ ಅಡಿಗಡಿಗೆ ಹೆದರಿಕೊಂಡಂತಿರುವುದನ್ನು ಕಂಡು ಅಚ್ಚರಿಗೀಡಾದೆ. ಒಂದು ದಿನ ಅದರ ಹಿನ್ನೆಲೆ ಗೊತ್ತಾಗಿಯೇಬಿಟ್ಟಿತು - ನನ್ನೊಂದಿಗೆ ಮಾತಾಡುತ್ತಿದ್ದವರು ಸದ್ದಾಮರಲ್ಲ, ಅವರ ಪ್ರತಿರೂಪಿ ಎಂದು. ಅವರ ಕಥೆಯೂ ನನ್ನ ಹಾಗೆಯೆ. ಪ್ಲಾಸ್ಟಿಕ್ ಸರ್ಜರಿ, ಒಪ್ಪಂದ ಪತ್ರ. ವಾರಕ್ಕೊಮ್ಮೆ 'ಪ್ರತಿರೂಪಿ'ಗಳು ವೈದ್ಯಕೀಯ ಪರೀಕ್ಷೆಗೆ ಒಳಪಡಬೇಕಾಗುತ್ತಿತ್ತು. ಬೋನಿನ ಹುಲಿಗಳು ನಾವೆಂಬುದು ಅರಿವಿಗೆ ಬಂತು. ಆಟ ನಡೆಯಲೇಬೇಕು. ಅದಕ್ಕಾಗಿ ಹುಲಿಗಳನ್ನು ಹೃಷ್ಟಪುಷ್ಟವಾಗಿಟ್ಟುಕೊಳ್ಳಲೇಬೇಕು...." ಇತ್ತೀಚೆಗಷ್ಟೇ ಲತೀಫ್ ಮೊಟ್ಟಮೊದಲ ಬಾರಿಗೆ ರಹಸ್ಯವನ್ನು ಬಯಲುಗೊಳಿಸಿ ಹೇಳಿಕೆ ನೀಡಿದ.

೧೯೯೧ರಲ್ಲಿ ಕುವೈಟು ಮುಕ್ತಿಯ ಘೋಷಣೆಯಾಯಿತು. ಸೋತ ಇರಾಕ್ ಒಳಗೊಳಗೇ ಮುಸುಗುಟ್ಟುತ್ತಿತ್ತು. ಸದ್ದಾಮರಿಗೆ ಅಮೆರಿಕ ಮತ್ತು ಮಿತ್ರ ರಾಷ್ಟ್ರಗಳ ಮೇಲೆ ಕೋಪ ಕುದಿಯುವ ಹೊತ್ತಿನಲ್ಲಿ ಆಂತರಿಕ ವಿಷಯಗಳತ್ತ ಗಮನ ಕೇಂದ್ರಿಕರಿಸುವುದು ಸಾಧ್ಯವಾಗಲೇ ಇಲ್ಲ. ಲತೀಫ್ ತನ್ನ ಮುಕ್ತಿಗಾಗಿ ಒಳಗೊಳಗೇ ಯೋಜನೆ ರೂಪಿಸಿಕೊಳ್ಳುತ್ತಿದ್ದ. ಆದರೆ ಮೂಲರೂಪಿಯ ಭಯ ಮುಳ್ಳಿನಂತೆ ಎದೆ ಇರಿಯುತ್ತಲೇ ಇತ್ತು.

"ಯುದ್ಧಾನಂತರ ಒಂದು ಅಭಿನಂದನಾ ಸಮಾರಂಭ. ಅಂಥ ದುರ್ಭರ ಪ್ರಸಂಗದಲ್ಲಿ ಎದೆ ಗಟ್ಟಿ ಮಾಡಿಕೊಂಡು ದೇಶದ ಸಲುವಾಗಿ ಹೋರಾಡಿದವರನ್ನು ಸತ್ಕರಿಸುವ ಕಾರ್ಯಕ್ರಮ. ರಾಷ್ಟ್ರಪತಿ ಸದ್ದಾಮರು ಪ್ರಶಸ್ತಿ ಪ್ರದಾನ ಮಾಡಲಿದ್ದರು. ಆ ಸಮಾರಂಭದಲ್ಲಿ ಅಸಲಿ-ನಕಲಿ 'ಆದೆ'ಗಳಿಬ್ಬರೂ ಹಾಜರಿದ್ದೆವು. ದೊಡ್ಡ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದ್ದಕ್ಕಾಗಿ ಆದೆಗೆ ನಾಲ್ಕು ಪದಕಗಳನ್ನು ಘೋಷಿಸಿ, ಅವುಗಳನ್ನು ಸ್ವೀಕರಿಸುವಂತೆ ಕೇಳಿಕೊಳ್ಳಲಾಯಿತು. ನಾನು ಸುಮ್ಮನೇ ಕೂತಿದ್ದೆ. ಆದೆಯ ಗಮನ ನನ್ನತ್ತಲೇ ಇತ್ತು. ಆತ ತನ್ನದೇ ಗತ್ತಿನಿಂದ ವೇದಿಕೆಗೆ ನಡೆದು 'ಮಹಾಮಹಿಮ'ರಿಂದ ಪದಕಗಳನ್ನು ಸ್ವೀಕರಿಸಿದ. ಎರಡು ದಿನಗಳ ಮೇಲೆ ಆದೆಯನ್ನು ಭೇಟಿಯಾಗಬೇಕಾಯಿತು. ನಾನು, 'ಪದಕಗಳನ್ನೇನೋ ನೀವು ಸ್ವೀಕರಿಸಿದಿರಿ. ಆದರೆ ನಿಜವಾಗಿ ಮುಂಚೂಣಿ'ಯಲ್ಲಿದ್ದವ ನಾನು ಅಲ್ಲವೆ? ಅಂದಮೇಲೆ ಅದು ಹೇಗೆ ನೀವು ಈ ಗೌರವಕ್ಕೆ ಪಾತ್ರರಾಗುತ್ತೀರಿ?' ಎಂದು ಕೇಳಿಬಿಟ್ಟೆ. ಆತ, 'ನಿನಗೆ ನಿನ್ನದೇ ಆದ ಅಸ್ತಿತ್ವವೆಲ್ಲಿದೆ?' ಎಂದಷ್ಟೇ ಕೇಳಿದನಾದರೂ ಅಂದಿನಿಂದಲೇ ನನ್ನನ್ನು ಇನ್ನಷ್ಟು ಬಿಗಿ ದಿಗ್ಬಂಧನಕ್ಕೊಳಪಡಿಸಿದ್ದು ಅನುಭವಕ್ಕೆ ಬರತೊಡಗಿತು." - ಲತೀಫ್ ಹೇಳುತ್ತಾನೆ.

"ಮುಂದೆರಡು ದಿನಗಳ ನಂತರ ನಾನು ಬಗದಾದಿನ ಬೆಬಿಲಾನ್ ಹೊಟೇಲಿನ ಹತ್ತನೆ ಮಹಡಿಯಿಂದ ಲಿಫ್ಟ್‌ನಲ್ಲಿಳಿದು ಬಂದು ಲಾಬಿಯಲ್ಲಿ ಕಾಲಿಟ್ಟೆ. ಹಠಾತ್ತನೇ ಗುಂಡುಗಳು ನನ್ನೆಡೆ ನುಗ್ಗಿ ಬಂದವು. ಒಂದು ನನ್ನ ತೋಳನ್ನೂ ಇನ್ನೊಂದು ಪಕ್ಕೆಯನ್ನೂ ಹೊಕ್ಕವು. ಗುಂಡು ಹಾರಿಸಿದವ ಬೇರಾರೂ ಅಲ್ಲ, ಸ್ವತಃ ಆದೆಯೆ. ರಕ್ತಸಿಕ್ತವಾದ ನಾನು ನೋವಿನಿಂದ ನರಳುತ್ತ ಕಾರಿನೆಡೆ ಓಡಿದೆ. ನಗರದ ಉತ್ತರ ದಿಕ್ಕಿನಲ್ಲಿದ್ದ ಸಂಯುಕ್ತ ರಾಷ್ಟ್ರ ಸಂಘದ ಶಿಬಿರದೆಡೆ ದೌಡಾಯಿಸಿದೆ. ರಸ್ತೆಯ ಮುಖ್ಯ ಚೌಕಗಳಲ್ಲಿ ಪೊಲೀಸರಿದ್ದರಾದರೂ ಅವರು ನನ್ನ ನೆರವಿಗೆ ಬರದೇ ಕೇವಲ ಸೆಲ್ಯೂಟ್ ಹೊಡೆದು ನಿಂತು ಬಿಡುತ್ತಲಿದ್ದರು.

"ನಾನು ಹಾಗೆಯೇ ಕುರ್ದಿಸ್ತಾನಕ್ಕೆ ಸಾಗಿಬಿಡಲೇ ಎಂದು ಯೋಚಿಸಿದೆ. ಆದರೇನು ಪ್ರಯೋಜನ? ಅಲ್ಲಿ ನನ್ನನ್ನು ಲತೀಫ್ ಯಾಹ್ಯಾ ಎಂದು ಯಾರು ಗುರುತಿಸುತ್ತಾರೆ? ಆದೆ ಹುಸೇನ್ ಎಂದು ತಿಳಿದು ಹೊಡೆದು ಕೊಲ್ಲುವುದಂತೂ ಖಂಡಿತ. ಹಾಗೆ ಸಾಯಲು ನಾನು ಇಷ್ಟಪಡಲಿಲ್ಲ. ಕಾರನ್ನು ಕಾಡಿನಲ್ಲಿ ಬಿಟ್ಟೆ. ನಡೆಯುತ್ತಲೇ ಬಾಲ್ಯ ಮಿತ್ರನ ಮನೆ ತಲಪಿದೆ. ನಾನು ಆದೆಯ ಪ್ರತಿರೂಪಿಯಾಗಿದ್ದ ಸಂಗತಿ ಆತನಿಗೆ ಗೊತ್ತಿತ್ತು. ಗೆಳೆಯ ಹಾಗೂ ಆತನ ಪರಿವಾರ ನನ್ನನ್ನು ಅಕ್ಷರಶಃ ಕಾಪಾಡಿದರು.

"ನನ್ನ ಕಣ್ಮರೆಯಿಂದ ನನ್ನಾಕೆ ಇನ್ನಷ್ಟು ಗಾಬರಿಗೊಂಡಳು. ಕಷ್ಟಗಳನ್ನೂ ಒದಗಬಹುದಾದ ಯಾತನೆಯನ್ನೂ ಊಹಿಸಿಕೊಂಡು ತಲೆಮರೆಸಿಕೊಂಡಳು. ಗೆಳೆಯನೇ ಆಕೆಯನ್ನು ಪತ್ತೆ ಮಾಡಿ ನನ್ನ ಬಳಿ ಕರೆತಂದ. ದೇಶದಾದ್ಯಂತ ನನಗಾಗಿ ಶೋಧನೆ ನಡೆದೇ ಇತ್ತು. ನನ್ನ ಮಗಳನ್ನೂ ಹೇಗೋ ಪಾರು ಮಾಡಿ ಜೋರ್ಡಾನಿಗೆ ಕಳುಹಿಸಿಕೊಟ್ಟ ಸುದ್ದಿ ಒಂದಷ್ಟು ನೆಮ್ಮದಿ ತಂದಿತು.

"ಅಂತೂ ಇಂತೂ ನಾನಲ್ಲಿಂದ ತಪ್ಪಿಸಿಕೊಂಡೋಡಲು ಅಮೆರಿಕದ ಅಧಿಕಾರಿಗಳು ತುಂಬ ನೆರವು ನೀಡಿದರು. ನನಗೂ ನನ್ನ ಪರಿವಾರಕ್ಕೂ ಆಸ್ಟ್ರಿಯದ ರಾಜಧಾನಿ ವಿಯೆನ್ನಾದಲ್ಲಿ ರಾಜನೈತಿಕ ಆಶ್ರಯ ದೊರೆಯುವಲ್ಲಿ ಅವರಿತ್ತ ಸಹಕಾರ ದೊಡ್ಡದು. ವಿಯೆನ್ನಾದಲ್ಲಿ ಮನೆ ಮಾಡಿದೆ."

ಲತೀಫ್ ಗುಪ್ತ ಸ್ಥಳವೊಂದರಲ್ಲಿ ಪತ್ರಿಕೆಗಳಿಗೆ ಹೇಳಿಕೊಂಡ. ಆತನ ಮನೆಯಿರುವ ಸಾಲಿನಲ್ಲಿಯೇ ಭವ್ಯ ಭವನವೊಂದಿದೆ. ಅಲ್ಲಿ ಜಗತ್ಪ್ರಸಿದ್ಧ ಮನೋವಿಜ್ಞಾನಿ ಫ್ರಾಯ್ಡ್ ವಾಸಿಸುತ್ತಿದ್ದ. ಒಂದು ವೇಳೆ ಫ್ರಾಯ್ಡ್ ಇಂದು ಅಲ್ಲಿಯೇ ಜೀವಿಸಿದ್ದಿದ್ದರೆ ಖಂಡಿತ ಲತೀಫ್ ಯಾಹ್ಯಾನ ಮನೋವಿಶ್ಲೇಷಣೆ ನಡೆಸಿ, ಆತನ ಭಯವನ್ನೂ ಮನೋವೈಕಲ್ಯವನ್ನೂ ದೂರಮಾಡುತ್ತಿದ್ದನೋ ಏನೋ.

ಆದರೆ ವಿಯೆನ್ನಾ ಕೂಡ ತನಗೆ ಸುರಕ್ಷಿತ ಸ್ಥಳವಲ್ಲ ಎಂಬ ಭಾವನೆ ಬಲಗೊಂಡು ಲತೀಫ್ ಯಾಹ್ಯಾ ಲಂಡನ್ನಿಗೆ ಓಡಿಹೋಗಿದ್ದಾನೆ.

ಆತನಿಗಾಗಿ ಇರಾಕಿನ 'ಕಣ್ಣು'ಗಳು ಹುಡುಕಾಡುತ್ತಲೇ ಇವೆ. ●

# ನೆನಪು ನೆರಳಿನಲ್ಲಿ

ಶಹರವೆನ್ನಲು ಬಾರದಿದ್ದರೂ ಪಟ್ಟಣಕ್ಕಿಂತ ದೊಡ್ಡದಾದ ಊರೊಂದರಲ್ಲಿ ನಾನು ರಾಷ್ಟ್ರೀಕೃತ ಬ್ಯಾಂಕೊಂದರ ಶಾಖಾಧಿಕಾರಿಯಾಗಿ ಕೆಲಸಮಾಡುತ್ತಿದ್ದೆ. ಪ್ರತಿವಾರವೂ ಜಾನುವಾರುಗಳ ದೊಡ್ಡ ಸಂತೆಯೇ ಅಲ್ಲಿ ಸೇರುತ್ತಿದ್ದುದರಿಂದ ದೂರದ ಅನೇಕ ಊರುಗಳಿಂದ ವ್ಯಾಪಾರಸ್ಥರು, ರೈತರು ಹಾಗೂ ಇತರರು ಬರುತ್ತಿದ್ದರು. ಅಲ್ಲದೆ ಅದು ತಕ್ಕಮಟ್ಟಿಗಿನ ವ್ಯಾಪಾರಿ ಕೇಂದ್ರವೆಂದೂ ಹೆಸರಾಗಿದ್ದುದರಿಂದ ನಮ್ಮ ಪ್ರಯತ್ನಕ್ಕೆ ತಕ್ಕ ಫಲವೆಂಬಂತೆ ಪಿಗ್ಮಿ ಠೇವಣಿ ಚೆನ್ನಾಗಿ ಬೆಳೆದಿತ್ತು. ಅನೇಕ ಠೇವಣಿದಾರರನ್ನು ಹೆಸರಿನಿಂದಲೇ ಗುರುತಿಸುವಷ್ಟರ ಮಟ್ಟಿಗಿನ ಅನ್ಯೋನ್ಯತೆ ನಮಗೆ.

ವಾರ್ಷಿಕ ಲೆಕ್ಕ ಪೂರ್ತಿಗೊಳಿಸುವ ಸಂದರ್ಭಗಳಲ್ಲಿ ಮಾತ್ರ ೨-೩ ದಿನ ಮುಂಚೆಯೆ ಪಿಗ್ಮಿ ಠೇವಣಿ ಹಣ ಮರುಪಾವತಿ ಮಾಡುವುದನ್ನು ನಿಲ್ಲಿಸುತ್ತಿದ್ದೆವಾದರೂ ದೂರದ ಊರುಗಳಿಂದ ಬರುವ ಗ್ರಾಹಕರಿಗೂ ಅತ್ಯಂತ ಜರೂರಾಗಿ ಹಣ ಬೇಕಾಗಿರುವವರಿಗೂ ರಿಯಾಯ್ತಿ ತೋರಿಸುತ್ತಿದ್ದೆವು.

ಇಂಥ ಸಂದರ್ಭದಲ್ಲೊಮ್ಮೆ ಶಾಖೆಯ ಕೆಲಸ ಪ್ರಾರಂಭವಾದಾಗ ಪಿಗ್ಮಿ ಠೇವಣಿದಾರರೊಬ್ಬರು ಬಂದು ತಮಗೆ ಹಣವನ್ನು ಅವತ್ತಿಂದವತ್ತೇ ಕೊಡಬೇಕೆಂದು ವಿನಂತಿಸಿದರು. ಅವರನ್ನು ಕೂಡಿಸಿಕೊಂಡು ಹಾಗೇ ಮಾತಿಗೆಳೆದಾಗ ಹಣದ ಅವಶ್ಯಕತೆ ಅಷ್ಟಾಗಿ ಇರದಿದ್ದರೂ ಅಂದೇ ಪಡೆದುಕೊಳ್ಳುವ ಹಟದಿಂದಲೇ ಬಂದಿರುವರೆಂಬುದು ನಮ್ಮ ಗಮನಕ್ಕೆ ಬಂತು. ವೃತ್ತಿಯಿಂದ ಅವರು ಜ್ಯೋತಿಷಿ. ಪ್ರತಿವಾರ ಆ ಊರಿಗೆ ಸಂತೆಯ ಸಂದರ್ಭದಲ್ಲಿ ಬಂದು, ಹಾಗೆ ಬಂದಾಗೊಮ್ಮೆ ಪಿಗ್ಮಿ ಹಣ ಕಟ್ಟಿ ಹೋಗುವುದು ಅವರ ರೂಢಿ. "ನಾನು ಇಲ್ಲಿಗೆ ಬರುವಾಗಲೇ ನನ್ನ ಗ್ರಹಗತಿ ನೋಡಿಕೊಂಡು ಬಂದಿದ್ದೇನೆ. 'ಹಣ ಸಿಗುವ ಸಾಧ್ಯತೆ ಇಲ್ಲ' ಎಂದೇ ಬಂತು. ಆದರೂ ಪರೀಕ್ಷಿಸಿ ನೋಡೋಣವೆಂದು ಬಂದೆ," ಎಂದ ಅವರ ಮಾತು ನನಗೆ ಕುಮ್ಮಕ್ಕು ಕೊಟ್ಟಿತು. "ಛೆ... ಛೆ... ಪ್ರಸಿದ್ಧ ಜ್ಯೋತಿಷಿಯಾಗಿರುವ ನಿಮ್ಮ ಲೆಕ್ಕಾಚಾರ ತಪ್ಪುವುದುಂಟೆ? ಅದು ಸುಳ್ಳಾಗಲು ಸಾಧ್ಯವೇ ಇಲ್ಲ ಬಿಡಿ. ನೋಡಿ, ಈಗ ವಾರ್ಷಿಕ ಲೆಕ್ಕ ಮುಗಿಸುವ ಕಾಲ. ಪಿಗ್ಮಿ ಠೇವಣಿದಾರರಿಗೆ ಹಣ ನೀಡುವಂತೆ ಇಲ್ಲ. ಎಷ್ಟು ಕರಾರುವಾಕ್ಕಾಗಿದೆ ನಿಮ್ಮ ಜ್ಯೋತಿಷ್ಯ!" ಎಂದೆಲ್ಲ ಹೊಗಳಿದೆ.

ಆ ಮಹಾಶಯ ತನ್ನ ಲೆಕ್ಕಾಚಾರ ಸರಿಹೊಂದಿದ ಸಂತೋಷದಿಂದ ಉಬ್ಬಿ, ನಮಸ್ಕರಿಸಿ ಹೊರಟು ಹೋದ. ನಮಗೆ ಆತನನ್ನು ಅಸಮಾಧಾನಗೊಳಿಸದೆಯೇ ವಾಪಸ್ಸು ಕಳಿಸಿದ ಸಮಾಧಾನ.

• ಜಿ. ಎಸ್. ಕುಲಕರ್ಣಿ

ಹೆಚ್ಚು ಎಂದರೆ ನಾನಾಗ ೮-೧೦ ವರ್ಷದವಳಿರಬಹುದು. ಸುಡು ಬಿಸಿಲ ಬೇಸಿಗೆಯ ರಜೆಯ ದಿನಗಳು. ಒಂದು ಹಳ್ಳಿಯ ಅವಿಭಕ್ತ ಕುಟುಂಬದ ಎಂಟು-ಹತ್ತು ಮಕ್ಕಳು ನಾವು ಪ್ರತಿಯೊಬ್ಬರೂ ತಮ್ಮದೇ ಆದ ರೀತಿಯಲ್ಲಿ ಗೌಜಿ ಹೊಡೆಯುತ್ತ ರಜೆಯನ್ನು ಮಜವಾಗಿ ಕಳೆಯುತ್ತ ಮನೆಯ ಹಿರಿಯರಿಗೆ ಮಾತ್ರ ರಜೆ-ಸಜೆ ಎನ್ನುವಂತೆ ಮಾಡುತ್ತಿದ್ದ ದಿನಗಳು. ಒಂದು ದಿನ ನನಗೂ ನನ್ನ ಸಮೀಪದ ಸಂಬಂಧಿಯಾಗಿದ್ದರೂ ಗೆಳತಿಯಂತೆ ಹೊಂದಿಕೊಂಡಿದ್ದ ಅವಳಿಗೂ, ಕೆಂಪು ಹೂವುಗಳರಳಿ ಶೃಂಗಾರವಾದ ತೇರೋ ಎಂಬಂತೆ ಶೋಭಿಸುತ್ತಿದ್ದ 'ರತ್ನ ಗಂಟಿ' ಹೂವಿನ ಗಿಡ ಕಣ್ಣಿನ ಸೆಳೆಯಿತು. ಸರಿ, ಆ ಹೂವು ಕೊಯ್ದು ತಂದು ದಂಡೆ ಕಟ್ಟುವುದೆಂದು ಆ ಕೂಡಲೇ ಕೆಲಸ ಶುರುವಾಯಿತು. ಅವಳು ಹೂ ಕಟ್ಟಲು ನಾರು ತರಹೋದಳು. ನಾನು ಹೂ ಕೊಯ್ಯಲು ಹಿತ್ತಲಿಗೆ ಹೋದೆ. 'ದೂರದ ಬೆಟ್ಟ ಕಣ್ಣಿಗೆ

ನುಣ್ಣಗೆ' ಎಂಬ ಮಾತಿನ ಅರ್ಥ ನನಗಿನ್ನೂ ಆಗ ತಿಳಿದಿರಲಿಲ್ಲ. ಒಂದೇ ಒಂದು ರೆಂಬೆಯೂ ನನ್ನ ಕೈಗೆ ಎಟುಕುವಂತೆ ಇರಲಿಲ್ಲ. ಗಿಡದ ಕೆಳಗೆ ಬೆಣಚುಕಲ್ಲು ಬೇರೆ. ಅಡ್ಡಾತಿಡ್ಡಿ ಗುಡ್ಡೆಯಾದ ಆ ಕಲ್ಲುಗಳ ಮೇಲೆ ನಿಲ್ಲುವುದೇ ಪ್ರಯಾಸ. ಅದೂ ಕಾಯ್ದು ಕಾಲು ಸುಡುತ್ತಿತ್ತು. ಆದರೆ ಹೂವಿನ ಹುಚ್ಚು ಬಿಡಬೇಕಲ್ಲ! ಹತ್ತಿರವೇ ಬಿದ್ದ ಒಂದು ಕೋಲಿನಿಂದ ಹೆಣೆ ಬಗ್ಗಿಸಿ ಬಗ್ಗಿಸಿ ಸಿಕ್ಕಷ್ಟು ಹೂ ಕೊಯ್ದು ತಂದು ಅವಳಿಗೆ ಕೊಡುತ್ತಿದ್ದೆ. ಅವಳು ಪ್ರತಿಸಲವೂ ದಂಡೆಯನ್ನು ಎತ್ತಿ ನೋಡಿ, "ಏಯ್, ಇಷ್ಟು ಉದ್ದ ಸಾಲದೇ, ಇನ್ನೂ ಉದ್ದಬೇಕು. ಮತ್ತಷ್ಟು ಹೂ ತಾ," ಎನ್ನುತ್ತಿದ್ದಳು ಅಲ್ಲೇ ಜಗುಲಿಯಲ್ಲಿ ಕುಳಿತು ಹೂ ಕಟ್ಟುತ್ತ. ನಾನು ಮತ್ತೆ ಹೋಗಿ ಗಿಡದ ಕೆಳಗೆ ಹಾರಾಡಿ ಹಾರಾಡಿ ಹೂ ಸಂಗ್ರಹಿಸಿ ತರುತ್ತಿದ್ದೆ. ಮಧ್ಯೆ ಮಧ್ಯೆ ಹೂಗಳ ಜತೆ ಮಾತು, ಟೊಂಗೆ ಮುರಿದರೆ ಗಿಡಕ್ಕೆ ಕ್ಷಮಾಪಣೆ ಕೇಳಿಕೊಳ್ಳುವುದು, ಹೂಗಳನ್ನು ಮುತ್ತಿಡುವುದು ಮುಂತಾದುವೆಲ್ಲ ನಡೆದಿರುತ್ತಿದ್ದವು. ಅಂತೂ ದಂಡೆ ಸಾಕಷ್ಟು ಉದ್ದವಾದಾಗ ಎದುರಾಯಿತು ಮುಖ್ಯ ಪ್ರಶ್ನೆ. ದಂಡೆ ಯಾರಿಗೆ? ನಾನು ಸಾಕಷ್ಟು ಕಷ್ಟ ಪಟ್ಟು ಹೂ ಕೊಯ್ದವಳಾದ್ದರಿಂದ ದಂಡೆ ನನಗೆ ಎಂದು ನಾನು; ಕಟ್ಟಿದವಳು ತಾನಾದ್ದರಿಂದ ದಂಡೆ ತನಗೇ ಎಂದು ಅವಳು. ಹೂವು ಕೊಯ್ಯುವಾಗಿನ ಸಾಹಸಗಳನ್ನೆಲ್ಲ ನಾನು ಅವಳಿಗೆ ಹೇಳಿದೆ. ಕಟ್ಟುವಾಗಿನ ಕಷ್ಟಗಳನ್ನೆಲ್ಲ ಅವಳು ನನಗೆ ಹೇಳಿದಳು. ವಾದೇ ವಾದೇ ಕಂಠಶೋಷಮಾಯಿತು. ಜಗಳ ಶುರುವಾಯಿತೇ ಹೊರತು ಪರಿಹಾರ ಸಿಕ್ಕಲಿಲ್ಲ. ಮಾಲೆಯನ್ನಾದರೂ ಕಟ್ಟಿದ್ದರೆ ಎರಡು ಭಾಗವಾಗಿ ತುಂಡು ಮಾಡಬಹುದಿತ್ತು. ಆದರೆ ದಂಡೆಯಾದ್ದರಿಂದ ಅದನ್ನು ತುಂಡಾಗಿಸುವುದೂ ಅಸಾಧ್ಯ. ಆದ್ದರಿಂದ ಅದನ್ನು ಒಬ್ಬರೇ ಮುಡಿದುಕೊಳ್ಳುವುದು ಸಾಧ್ಯವಿತ್ತು.

ಅಷ್ಟರಲ್ಲಿ ಸುಸ್ತಾಗಿ ಬಂದ ನಮ್ಮ ತಂದೆ ಕಾಲು ತೊಳೆಯಲು ಬಂದವರು ನಮ್ಮನ್ನು ನೋಡಿ, "ಏನು ಜಗಳ? ಯಾವುದಕ್ಕೆ?" ಎಂದರು. ಅವರನ್ನು ನೋಡಿದೊಡನೆ ನನ್ನ ದುಃಖದ ಕಟ್ಟೆ ಒಡೆದಿತ್ತಾದರೂ ಇಬ್ಬರೂ ನಮ್ಮ ವ್ಯಾಜ್ಯವನ್ನು ಅವರ ಮುಂದಿಟ್ಟೆವು.

"ನೀನ್ಯಾಕೆ ಅಷ್ಟು ಕಷ್ಟಪಟ್ಟು ಹೂ ಕೊಯ್ದೆ?" ಕೇಳಿದರು ತಂದೆ.

"ಅಪ್ಪಾ, ನಿಮಗೆ ಗೊತ್ತೇ ಇದೆ. ಹೂವೆಂದರೆ ನನಗೆಷ್ಟು ಪ್ರೀತಿ! ನನಗೆ ಯಾವಾಗಲೂ ಅದನ್ನು ನೋಡುತ್ತಲೇ ಇರೋಣ ಅನ್ನಿಸುತ್ತದೆ," ಅಂದೆ.

ಈಗವರು "ನೀನ್ಯಾಕೆ ಅಷ್ಟು ಕಷ್ಟಪಟ್ಟು ಹೂ ಕಟ್ಟಿದೆ?" ಎಂದು ಅವಳನ್ನು ಕೇಳಿದರು.

"ನನಗೆ ಮುಡಿಯಬೇಕು ಎನ್ನಿಸಿತ್ತು, ಅದಕ್ಕೆ" ಎಂದಳು ಅವಳು.

ಒಂದು ನಿಮಿಷವೂ ತಡಮಾಡದೇ ತಂದೆ ತೀರ್ಪಿತ್ತರು: "ಅಂದ ಮೇಲೆ ಜಗಳದ ಪ್ರಶ್ನೆಯೇ ಬರುವುದಿಲ್ಲವಲ್ಲ. ಅವಳಿಗೆ, ಮುಡಿಯಲು ಬೇಕಂತೆ, ಅವಳು ಮುಡಿಯಲಿ. ನಿನಗೆ ಹೂ ನೋಡಲು ಇಷ್ಟತಾನೇ? ಅವಳು ಮುಡಿದ ಹೂವನ್ನು ನೀನು ನೋಡಬಹುದಲ್ಲ. ನೀನೇ ಮುಡಿದರೆ ನಿನಗೆ ನೋಡಲು ಆದೀತೆ? ನಿನ್ನ ತಲೆಯಲ್ಲಿರುವ ಹೂಗಳು ನಿನಗೆ ಕಂಡಾವೆ? ಅವಳು ಮುಡಿಯಲಿ, ನೀನು ನೋಡು," ಎಂದರು. ಅವಳು ತುಂಬಾ ಸಂತೋಷದಿಂದ ಆ ಜಡೆಯಿಂದ ಈ ಜಡೆಯವರೆಗೂ ಹೂವಿನ ಸೇತುವೆ ಕಟ್ಟಿಕೊಂಡು ನಲಿದಳು.

ನನಗೆ ಆ ಹೊತ್ತಿಗಾದ ದುಃಖ ಇನ್ನೂ ಮರೆಯದು. ಆದರೆ ತಂದೆಯ ತೀರ್ಪಿನ ಅರ್ಥ ಮಾತ್ರ ಇಂದು ಚೆನ್ನಾಗಿ ತಿಳಿದು ತಂದೆ ಎಷ್ಟು ದೊಡ್ಡವರಾಗಿದ್ದರು ಎಂಬುದರ ಅರಿವು ಉಂಟಾಗಿದೆ. ಅವಿಭಕ್ತ ಕುಟುಂಬ. ಕಡಿಮೆ ಎಂದರೂ ಮೂವತ್ತು-ಮೂವತ್ತೈದು ಜನ ಒಂದು ಸೂರಿನಡಿ ಬಾಳುತ್ತಿದ್ದೆವು. ಮಕ್ಕಳ ಮಾತು ಕೇಳಿ ಹಿರಿಯರೇ ಜಗಳ ಕಾಯುತ್ತಿರುವ ಜನ ಅಂದೂ ಇಂದಿನಷ್ಟೇ ಬಹಳವಾಗಿತ್ತು. ಸಣ್ಣ ಕಿಡಿಯೂ ಬೆಂಕಿಯಾಗಿ ಮನೆಯ ಶಾಂತಿಪ್ರೀತಿಗಳನ್ನು ಸುಟ್ಟುಬಿಡಬಹುದಾಗಿರುತ್ತಿತ್ತು. ಅಂಥ ಕಿಡಿಗಳನ್ನೆಲ್ಲ ಅಲ್ಲಲ್ಲೆ ಹೊಸಕಿ ತಮ್ಮ ಕೈ ಸುಟ್ಟುಕೊಳ್ಳುತ್ತಿದ್ದರು ತಂದೆ. ಈಗ ಇಂಥ ಅವಿಭಕ್ತ ಕುಟುಂಬಗಳೆಷ್ಟು? ನನ್ನಪ್ಪನಂಥ ಹಿರಿಯರೆಷ್ಟು?

• ಶೋಭಾ ಹಳಬೆ



• ಆದಿಕೇಶವ

## ಅಂದಿನ ಆಟ ! ಇಂದಿನ ನೋಟ !

ಭಾರತದ ಮಟ್ಟಿಗೆ ವೆಸ್ಟ್ ಇಂಡೀಸ್ ವಿರುದ್ಧದ ಈ ಟೆಸ್ಟ್ ಪಂದ್ಯ ಎಂದೆಂದಿಗೂ ಮರೆಯಲಾರದಂಥದು. ತಂಡದ ನಾಯಕ ನಾರಿ ಕಂಟ್ರಾಕ್ಟರ್ ಬಾರ್ಬಡೋಸ್ ವಿರುದ್ಧ ಪಂದ್ಯದಲ್ಲಿ ಸ್ವಲ್ಪದರಲ್ಲೇ ಪ್ರಾಣಾಪಾಯದ ಹೊಡೆತದಿಂದ ಪಾರಾಗಿದ್ದರು. ಅವರಿಲ್ಲದೆ ತೀರ ಖಿನ್ನವಾಗಿ ಭಾರತ ಈ ಟೆಸ್ಟಿಗೆ ಇಳಿದಿತ್ತು.

ಭಾರತದ ಪ್ರಮುಖ ಬ್ಯಾಟ್ಸ್‌ಮನ್ ಆಗಿದ್ದ ಕಂಟ್ರಾಕ್ಟರ್ ನಡುಕ ಹುಟ್ಟಿಸುವ ಚಾರ್ಲಿ ಗ್ರಿಫಿತ್ ಅವರ ವೇಗದ ಬೌಲಿಂಗ್‌ನಲ್ಲಿ ಪುಟಿದು ಬಂದ ಚೆಂಡನ್ನು ತಪ್ಪಿಸಿಕೊಳ್ಳಲು ವಿಫಲರಾಗಿ ತಲೆಗೆ ಭಾರೀ ಪೆಟ್ಟು ಬಿದ್ದಿತ್ತು. ನಂತರ ಅವರು ಮಿದುಳಿನ ಶಸ್ತ್ರಚಿಕಿತ್ಸೆಗೂ ಒಳಗಾಗಬೇಕಾಯಿತು. ಈ ಹೊಡೆತ ಅವರ ಟೆಸ್ಟ್ ಜೀವನಕ್ಕೆ ಮಂಗಳ ಹಾಡಿತು.

ಇಂತಹ ಪರಿಸ್ಥಿತಿಯಲ್ಲಿ ನವಾಬ ಪಟೌಡಿ (ಜೂನಿಯರ್) ತಂಡದ ನೇತೃತ್ವ ವಹಿಸಿಕೊಂಡು ಟೆಸ್ಟ್ ಇತಿಹಾಸದಲ್ಲಿ ಅತ್ಯಂತ ಕಿರಿಯ ನಾಯಕ (೨೧ ವರ್ಷ) ಎಂಬ ಗೌರವ ಪಡೆದುಕೊಂಡರು. ಇವರದೂ ಒಂದು ದುರಂತ ಕಥೆಯೆ. ಆ ಹಿಂದಿನ ವರ್ಷವಷ್ಟೆ ಅವರು ಕಾರು ಅಪಘಾತದಲ್ಲಿ ತಮ್ಮ ಒಂದು ಕಣ್ಣು ಕಳೆದುಕೊಂಡಿದ್ದರು. ಆದರೆ ಛಲಬಿಡದ ಸಾಧನೆಯಿಂದ ಮತ್ತೆ ಕ್ರಿಕೆಟ್‌ಗೆ ಮರಳಿದ್ದರು.

ಇವೆಲ್ಲ ಘಟನೆಗಳು ಭಾರತಕ್ಕೆ ಈ ಟೆಸ್ಟನ್ನು ಮರೆಯದಂತೆ ಮಾಡಿದವು.

ವಿಂಡೀಸ್ ನಾಯಕ ಫ್ರ್ಯಾಂಕ್ ವೊರೆಲ್ ಆಹ್ವಾನದ ಮೇರೆಗೆ ಭಾರತ ಮೊದಲು ಬ್ಯಾಟಿಂಗ್ ಮಾಡಲು ಇಳಿಯಿತು.

### ಮೈದಾನದಲ್ಲಿ

ಆರಂಭದ ಜೋಡಿ ಮೊಟಗಾನಹಳ್ಳಿ ಜಯಸಿಂಹ (೪೧) ಮತ್ತು ದಿಲೀಪ ಸರ್ದೇಸಾಯಿ (೩೧) ಅವರಿಂದ ಭಾರತ ಉತ್ತಮ ಆರಂಭ ಪಡೆಯಿತು. ಆದರೆ ಇದೇ ಆಟ ಮುಂದೆ ಉಳಿಯಲಿಲ್ಲ. ಮಧ್ಯಮ ಕ್ರಮಾಂಕದ ಬ್ಯಾಟ್ಸ್‌ಮನ್‌ಗಳು ವೆಸ್ಲಿ ಹಾಲ್ (೬೪ಕ್ಕೆ ೩), ವೊರೆಲ್ (೧೨ಕ್ಕೆ ೨) ಅವರ ಬಿರುಗಾಳಿಯಂಥ ಬೌಲಿಂಗ್ ತಡೆದುಕೊಳ್ಳಲಿಲ್ಲ. ಸ್ಕೋರು ಇನ್ನೂ ೧೧೨ ದಾಟುವ ಮುನ್ನವೇ ಪೆವಿಲಿಯನ್‌ದಲ್ಲಿ ಐದು ಮಂದಿ ಎರಡನೆ ಇನಿಂಗ್ಸ್‌ನಲ್ಲಿ ಚೆನ್ನಾಗಿ ಬ್ಯಾಟಿಂಗ್ ಮಾಡುವ ಬಗ್ಗೆ ವಿಚಾರ ಮಾಡುತ್ತಿದ್ದರು.

ಪ್ರವಾಸಿ ತಂಡದ ತಾಕತ್ತು ಮುಗಿಯಿತು ಎಂಬ ಹರ್ಷದಲ್ಲಿದ್ದ ಕರಿಬಿಯನ್ನರಿಗೆ ಕಂಟ್ರಾಕ್ಟರ್ ಅವರಿಂದ ಜವಾಬ್ದಾರಿ ನಾಯಕ ಪಟ್ಟ ಪಡೆದಿದ್ದ ಪಟೌಡಿ (೪೮) ಮತ್ತು ಕೊನೆಯ ವಿಕೆಟ್ ಸಲೀಂ ದುರಾನಿ (ಔಟಾಗದೆ ೪೮) ಭೀತಿ ಹುಟ್ಟಿಸಿದರು. ಎದುರಾಳಿಗೆ ಸುಲಭವಾಗಿ ವಿಕೆಟ್ ಒಪ್ಪಿಸದೆ ಇವರಿಬ್ಬರು ಹಾಗೂ ಹೀಗೂ ಮಾಡಿ ಮೊತ್ತವನ್ನು ೨೫೮ಕ್ಕೆ ತಲುಪಿಸಿದರು.

ಪಂದ್ಯದ ಎರಡನೇ ದಿನ. ವೆಸ್ಟ್ ಇಂಡೀಸ್ ಆಡಿದ್ದು ನೋಡಿದರೆ ಭಾರತದ ಮೊತ್ತ ಏನೂ ಅಲ್ಲ ಎಂಬಂತಿತ್ತು. ಮೊದಲಿನ ಐದು ಮಂದಿ ತಮ್ಮಲ್ಲೇ ಸ್ಪರ್ಧೆಗಿಳಿದು ತುರುಸಿನಿಂದ ಆಡಿದರು. ಆರಂಭದ ಜೋಡಿಯಾಗಿ ಕಣಕ್ಕಿಳಿದ ಹಂಟ್ (೫೯) ಮತ್ತು ಮ್ಯಾಕ್ ಮೊರಿಸ್ (೩೯) ಅವರಿಂದ ೬೭ ಓಟ ಬಂದವು. ಆದರೆ ನಂತರ ಬಂದ ರೋಹನ್ ಕನ್ಹಾಯ್ ಆ ದಿನದ ಆಟಕ್ಕೆ ಕಳೆ ಬರುವಂತೆ ಮಾಡಿದ್ದು ಸುಮಾರು ದಿನಗಳ ತನಕ ನೆನಪಿನಲ್ಲಿ ಉಳಿಯಿತು.

ಕನ್ಹಾಯ್ ಆಡಿದ್ದು ಎರಡೇ ಎರಡು ತಾಸು. ಈ ಅವಧಿಯಲ್ಲಿ ಅವರು ಗಳಿಸಿದ್ದು ೮೯ ಓಟಗಳು. ಇದೇ ಆಟ ವಿಂಡೀಸ್‌ನ್ನು ಉತ್ತಮ ಸ್ಥಿತಿಯಲ್ಲಿರಿಸಿತು. ಮತ್ತೊಬ್ಬ ಅಪಾಯಕಾರಿ ಬ್ಯಾಟ್ಸ್‌ಮನ್ ಗ್ಯಾರಿಫೀಲ್ಡ್ ಸೋಬರ್ಸ್ ವಿಕೆಟ್ ಹಿಂದೆ ಫರೂಕ್ ಇಂಜನೀಯರ್‌ಗೆ ಕ್ಯಾಚ್ ನೀಡುವ ಮೊದಲು ೪೨ ಓಟ ಮಾಡಿದರು.

ವಿಂಡೀಸ್ ಭರಾಟೆ ಇಲ್ಲಿಗೇ ಮುಗಿಯಲಿಲ್ಲ. ನಾಲ್ಕು ಓಟಗಳಿಂದ ಶತಕ ತಪ್ಪಿಸಿಕೊಂಡ ಜೊ ಸೋಲೋಮನ್ ಭಾರತೀಯ ಬೌಲರ್‌ಗಳಿಗೆ ಬೆವರಿಳಿಯುವಂತೆ ಮಾಡಿದ. ಏನಾದರಾಗಲಿ ಇವನಿಗೆ ಶತಕ ಮಾಡಲು ಬಿಡಲಿಲ್ಲವಲ್ಲ ಎಂಬ ಸಮಾಧಾನ ಭಾರತದವರದ್ದಾಯಿತು.

ಇವರ ನಂತರ ನಾಯಕ ವೊರೆಲ್ (೭೭) ತಮ್ಮ ಜವಾಬ್ದಾರಿಯುತ ಆಟ ಪ್ರದರ್ಶಿಸಿ ಫೀಲ್ಡರ್‌ಗಳನ್ನು ಮೈದಾನದ ತುಂಬ ಅಟ್ಟಾಡಿಸಿದರು. ವಿಕೆಟ್ ಕೀಪರ್ ಆಗಿ ಟೆಸ್ಟಿಗೆ ಪದಾರ್ಪಣೆ ಮಾಡಿದ ಅಲನ್ ಅಜೇಯ ೪೦ ಓಟ ಬಾರಿಸಿ ಸ್ಥಳೀಯ ಪ್ರೇಕ್ಷಕರ ಮೆಚ್ಚುಗೆ ಗಿಟ್ಟಿಸಿದ. ಇವರೆಲ್ಲರ ಆಟದ ಅರ್ಭಟ ಮುಗಿದಾಗ ವಿಂಡೀಸ್‌ನ ಮೊತ್ತ ೪೭೫.

| |
|---|
| ವೆಸ್ಟ್ ಇಂಡೀಸ್: ಭಾರತ ಮೂರನೆ ಟೆಸ್ಟ್ ೧೯೬೧-೬೨ |
| ಸ್ಥಳ: ಕಿಂಗ್‌ಸ್ಟನ್ ಓವಲ್ ಬ್ರಿಜ್‌ಟೌನ್ |
| ದಿನಾಂಕ: ಮಾರ್ಚ್ ೨೩, ೨೪, ೨೬, ೨೭, ೨೮ |

ಪ್ರವಾಸಿಗರ ಮೇಲೆ ಮೇಲುಗೈ ಸಾಧಿಸಿ ಲೀಡ್ ಪಡೆದಿದ್ದೇನೋ ನಿಜ. ಆದರೆ ಮೂರನೇ ದಿನ ವಿಂಡೀಸ್ ೧೩೧ ಓವರುಗಳಲ್ಲಿ ಬರೀ ೧೬೪ ಓಟಗಳಿಸಿದ್ದು ಅಲ್ಲಿ ನೆರೆದಿದ್ದ ಪ್ರತಿಯೊಬ್ಬ ಪ್ರೇಕ್ಷಕನ ತಾಳ್ಮೆಯನ್ನು ಕೆದಕಿತು.

ಭಾರತದ ಕರಾರುವಾಕ್ ಮಧ್ಯಮ ವೇಗದ ಬೌಲಿಂಗ್ ವಿಂಡೀಸ್‌ನ ಬೃಹತ್ ಮೊತ್ತದ ಆಸೆಗೆ ಕಡಿವಾಣ ಹಾಕಿತು. ಪಾಲಿ ಉಮ್ರಿಗಾರ್ ೪೯ ಓವರುಗಳಲ್ಲಿ ೨೭ ಮೇಡನ್ ಮಾಡಿ ಬ್ಯಾಟ್ಸ್‌ಮನ್‌ಗಳ ತಲೆಚಿಟ್ಟು ಹಿಡಿಸಿದರೂ, ಕೇವಲ ಎರಡು ವಿಕೆಟ್ ಪಡೆದರು. ಬಾಪು ನಾಡಕರ್ಣಿ ಸತತ ೬೭ ಓವರ್ ಮಾಡಿ ೯೨ ಓಟಗಳಿಗೆ ಎರಡು ವಿಕೆಟ್ ಕಬಳಿಸಿದರು. ಇದರಲ್ಲಿ ೨೮ ಓವರ್ ಮೇಡನ್ ಇದ್ದವು.

ಆತಿಥೇಯ ತಂಡವನ್ನೇನೂ ೩೦೦ರ ಗಡಿ

# ಭಾರತೀಯ ಬ್ಯಾಟ್ಸಮನ್‌ಗಳ 'ಪರೇಡ್' ಮಾಡಿಸಿದ ಗಿಬ್ಸ್

ತಲುಪಲು ಭಾರತ ಬಿಡಲಿಲ್ಲವಾದರೂ ತಾನು ೨೧೭ ಓಟಗಳಿಂದ ಹಿಂದುಳಿಯಿತು. ಎರಡನೇ ಸರದಿಯಲ್ಲೂ ಅದರ ಪರಿಸ್ಥಿತಿ ಸುಧಾರಿಸಲಿಲ್ಲ. ಆಟದ ಆರಂಭದಿಂದಲೇ ಮುಗ್ಗರಿಸುವಿಕೆ ಶುರುವಾಯಿತು. ಪ್ರಥಮ ಇನಿಂಗ್ಸ್‌ನಲ್ಲಿ ಪರವಾಯಿಲ್ಲ ಎನ್ನುವಂತೆ ಆಡಿದ್ದ ಜಯಸಿಂಹ ದೊಡ್ಡ ಶೂನ್ಯದೊಂದಿಗೆ ಸ್ಟೇಯರ್ಸ್ (೨ಳಕ್ಕೆ ೨) ಅವರಿಗೆ ಮೊದಲ ಬಲಿಯಾದರು. ನಂತರ ರೂಸಿ ಸುರ್ತಿ (೩೬) ವಿಕೆಟ್ ಒಪ್ಪಿಸಿದರು.

ಮೂರನೇ ಹುದ್ದರಿ ಜೊತೆಯಾಟ ನೆಲಹಿಡಿದ ಭಾರತಕ್ಕೆ ಉಸಿರುಬಿಡುವಂತೆ ಮಾಡಿತು. ಓಟ ಗಳಿಕೆಗೆ ಅವಸರಬೇಡ, ತಾಳ್ಮೆಯಿಂದ ಆಡಿದರಾಯಿತು ಎಂಬ ನಿರ್ಧಾರ ಮಾಡಿದಂತೆ ಆಡಿದ ಸರ್ದೇಸಾಯಿ (೬೦) ಹಾಗೂ ಮಾಂಜ್ರೇಕರ್ (೫೧) ಅಂತಿಮ ದಿನದ ಭೋಜನ ವಿರಾಮದ ತನಕ ಭಾರತದ ಮಾನ ಕಾಪಾಡಿಕೊಂಡು ಬಂದರು. ಆಗ ಸ್ಕೋರು ಎರಡು ವಿಕೆಟ್‌ಗಳಿಗೆ ೧೫೮. ಪ್ರೇಕ್ಷಕರಲ್ಲಿ ಪಂದ್ಯ ನೀರಸ 'ಡ್ರಾ'ದಲ್ಲಿ ಮುಗಿಯುವ ಬಗ್ಗೆ ಗುಸುಗುಸು ಮಾತುಕತೆಗಳು ನಡೆದವು. ಎಷ್ಟೋ ಮಂದಿ ನಿಧಾನವಾಗಿ ಜಾಗ ಖಾಲಿಮಾಡತೊಡಗಿದ್ದರು. ಈ ಜೋಡಿಯ ಆಟವೂ ಅದೇ ರೀತಿ ಇತ್ತು.

ಆದರೆ ನಂತರ ನಡೆದಿದ್ದೆಲ್ಲ ಒಂದು ಪವಾಡ. ಮುಂದಿನ ಆಟವೆಲ್ಲ ಕ್ರಿಕೆಟ್ ಇತಿಹಾಸದ ಒಂದು ಅವಿಸ್ಮರಣೀಯ ದಾಖಲೆ. ಆಗ ಪ್ರತಿಯೊಬ್ಬನ ಬಾಯಲ್ಲಿ ಅಡುತ್ತಿದ್ದುದು ಒಂದೇ ಮಂತ್ರ ಒಂದೇ ಹೆಸರು 'ಗಿಬ್ಸ್' 'ಲಾನ್ಸ್ ಗಿಬ್ಸ್.'

ಎತ್ತರಕ್ಕೆ ತಕ್ಕಂತೆ ವಿಶೇಷವಾಗಿದ್ದ ಕೈಬೆರಳುಗಳು, ಅವುಗಳಲ್ಲಿ ಪಂದ್ಯವನ್ನೇ ತಿರುವು ಮುರುವು ಮಾಡುವ ಸ್ಪಿನ್ ಕೈಚಳಕವನ್ನು ಹೊಂದಿದ್ದ ಗಿಬ್ಸ್ (೩ಳಕ್ಕೆ ೮) ಉಳಿದ ಸಮಯದ ಆಟದಲ್ಲಿ ಭಾರತಕ್ಕೆ ಬಿರುಗಾಳಿಯ ರೂಪದಲ್ಲಿ ಅವತರಿಸಿದರು. ಮಾಡಿದ್ದು ಸ್ಪಿನ್ ಬೌಲಿಂಗ್. ಆದರೆ ಭಾರತದ ಬ್ಯಾಟ್ಸ್‌ಮನ್‌ಗಳಲ್ಲಿ ಇದೇ ಅಸಾಧಾರಣ ಸ್ಪಿನ್ ಥರಥರ ಛಳಿ ಹುಟ್ಟಿಸಿತು. ನೇರ ಬಂದು ಒಮ್ಮೆಲೇ ರಿಂವೆಂದು ಒಳನುಗ್ಗುವ ಗಿಬ್ಸ್ ಬೌಲಿಂಗ್ ಈ ಟೆಸ್ಟಿನಲ್ಲಿ ಒಂದು ಹೊಸ ಇತಿಹಾಸ ನಿರ್ಮಿಸಿತು.

ಭಾರತೀಯ ಬ್ಯಾಟ್ಸ್‌ಮನ್‌ಗಳು ಗಿಬ್ಸ್‌ನ ಹಾರಾಟ ಮತ್ತು ಸ್ಪಿನ್ ಚಮತ್ಕಾರದ ಸಮ್ಮೋಹ ನಾಸ್ತ್ರಕ್ಕೆ ಮಾರುಹೋಗಿ ಆತ ಹೇಳಿಕೊಟ್ಟಂತೆ ಫೀಲ್ಡರ್‌ಗಳಿಗೆ ಒಬ್ಬರಾದ ಮೇಲೆ ಒಬ್ಬರು ಕ್ಯಾಚ್ ನೀಡುತ್ತ ಹೋದರು. ಜೇಡರ ಬಲೆಯಲ್ಲಿ ಸಿಕ್ಕಿ ವಿಲವಿಲ ಒದ್ದಾಡಿದಂತೆ ಆಡಿದ ಇವರು ದೀರ್ಘ ಸಮಯದವರೆಗೆ ಪೆವಿಲಿಯನ್‌ಗೆ 'ಆಕರ್ಷಕ ಪರೇಡ್' ನಡೆಸಿದರು.

ಭಾರತದ ದ್ವಿತೀಯ ಇನಿಂಗ್ಸ್ ಕಥೆ ೧೮೭ಕ್ಕೆ ಮುಗಿಯಿತು. ವಿಂಡೀಸ್ ತಂಡ ಇನಿಂಗ್ಸ್ ಹಾಗೂ ೩೦ ಓಟಗಳ ಭರ್ಜರಿ ಜಯಭೇರಿ ಮೊಳಗಿಸಿತು. ನಾಯಕನಿಗೆ ಆಕಾಶ ಕೈಗೆಟುಕುವದೊಂದೇ ಬಾಕಿ.

ಇದಕ್ಕೆಲ್ಲ ಕಾರಣ ಲಾನ್ಸ್ ಗಿಬ್ಸ್. ಸುಸೂತ್ರವಾಗಿ 'ಡ್ರಾ'ದತ್ತ ಹೊರಟಿದ್ದ ಪಂದ್ಯವನ್ನು ತನ್ನ ಭಯಾನಕ, ಚಮತ್ಕಾರಿಕ ಸ್ಪಿನ್‌ನಿಂದ ಆಟದ ಹಣೆಬರಹವನ್ನೇ ಬದಲಾಯಿಸಿ ಭಾರತೀಯರಿಗೆ ನಿದ್ದೆ ಬರದಂತೆ ಮಾಡಿದ. ಈ ಹಂತದಲ್ಲಿ ಆತ ಮಾಡಿದ್ದು ೧೫.೩ ಓವರುಗಳು. ಅದರಲ್ಲಿ ೧೪ ಮೇಡನ್. ಆದರೆ ಕೇವಲ ಆರು ಓಟ ನೀಡಿ ಎಂಟು ವಿಕೆಟ್‌ಗಳನ್ನು ತನ್ನ ಜೇಬಿಗೆ ಹಾಕಿಕೊಂಡ ಈತನನ್ನು ಭಾರತ ಬಹಳ ಹೊತ್ತು ಮರೆಯಲೇ ಇಲ್ಲ. ಪ್ರವಾಸಿ ತಂಡದ ಬ್ಯಾಟಿಂಗನ್ನು ಸರ್ವನಾಶ ಮಾಡುವ. ಮೊದಲು ಗಿಬ್ಸ್ ಬೌಲಿಂಗ್‌ನಲ್ಲಿ ಸತ್ವವೇ ಇರಲಿಲ್ಲ. ಮುಂದೆ ಆತನ ಸ್ಪಿನ್ ಐತಿಹಾಸಿಕ ಗೆಲುವಿನ ದಾಖಲೆಗೆ ಕಾರಣವಾಗುವದು ಎಂದು ಯಾರು ಊಹಿಸಿದ್ದರು?

ಲಾನ್ಸ್ ಗಿಬ್ಸ್ ಹೇಳಿದರು, "ಭಾರತದ ಬ್ಯಾಟ್ಸ್‌ಮನ್‌ಗಳು ಅನಾವಶ್ಯಕವಾಗಿ ದಿಗಿಲುಗೊಂಡರು. ನಾನು ನನ್ನ ಕರಾರುವಾಕ್ ಬೌಲಿಂಗ್ ಬಗ್ಗೆ ಮಾತ್ರ ಗಮನ ಹರಿಸಿದ್ದೆ. ಆದರೆ ಈ ಟೆಸ್ಟಿನಲ್ಲಿ ಅದೃಷ್ಟ ನನ್ನ ಪರವಾಗಿತ್ತು. ನನ್ನ ಪಾಲಿಗಿದು ಅಮೋಘ ಪಂದ್ಯ."

"ಪವಾಡ ನಡೆಯುವ ರೀತಿಯಲ್ಲಿ ಮುಗಿದ ಈ ಪಂದ್ಯವನ್ನು ಹೇಗೆ ವರ್ಣಿಸಬೇಕು ಎಂಬುದೇ ನನಗೆ ತಿಳಿಯುತ್ತಿಲ್ಲ. ಗಿಬ್ಸ್ ಸ್ಪಿನ್ ಸಮ್ಮೋಹನಾಸ್ತ್ರಕ್ಕೆ ನಾವು ಮಾರುಹೋದೆವು. ಇದನ್ನು ಬಿಟ್ಟು ಬೇರೆ

ಏನೂ ನಮ್ಮಿಂದ ಮಾಡಲಾಗಲಿಲ್ಲ ಅದೊಂದು ಅಸಾಧಾರಣ ಸ್ಪಿನ್ ಬೌಲಿಂಗ್" ಎಂಬುದು ನವಾಬ ಪಟೌಡಿ ತೆಗೆದ ಉದ್ಗಾರ.

ವಿಂಡೀಸ್‌ಗೆ ನೆನಪಿನಲ್ಲಿ ಉಳಿಯುವಂತಹ ಜಯ ತಂದುಕೊಟ್ಟ ಗಿಬ್ಸ್ ಈ ಸರಣಿಯಲ್ಲಿ ಒಟ್ಟು ೨೪ ವಿಕೆಟ್‌ಗಳನ್ನು ಹೆಕ್ಕಿದರು. ಕರಿಬಿಯನ್ನರು ಸರಣಿಯನ್ನು ೫-೦ ದಿಂದ ಗೆದ್ದುಕೊಂಡಿದಲ್ಲದೆ, ಪ್ರಥಮ ಬಾರಿಗೆ ನಿಚ್ಚಳ ಸರಣಿ ಜಯ ಗಳಿಸಿ ಸಾಧನೆ ಮಾಡಿದರು.

### ಪ್ರಥಮ ಟೆಸ್ಟ್

ವೆಸ್ಲಿಹಾಲ್ ನಾಲ್ಕು ಎಸೆತಗಳಲ್ಲಿ ಮೂವರನ್ನು ಬಲಿತೆಗೆದುಕೊಂಡು ಜಯದ ರೂವಾರಿಯಾದರು.

### ಎರಡನೆಯ ಟೆಸ್ಟ್

ಈಸ್ಟನ್ ಮ್ಯಾಕ್ ಮೊರಿಸ್ (೧೨೫), ರೋಹನ್ ಕನ್ಹಾಯ್ (೧೩೮) ಎರಡನೆ ವಿಕೆಟ್ ಪಾಲುಗಾರಿಕೆಯಲ್ಲಿ ಸೇರಿಸಿದ ೨೫೫ ಓಟಗಳು ಮತ್ತು ಸೋಬರ್ಸ್ (೧೫೩) ನಂತರ ಹಾಲ್‌ರ (೬-೪೯) ಅದ್ಭುತ ಬೌಲಿಂಗ್ ವಿಂಡೀಸ್‌ಗೆ ಇನಿಂಗ್ಸ್ ಮತ್ತು ೧೮ ಓಟಗಳ ಗೆಲುವು ಕೊಟ್ಟಿತು.

### ನಾಲ್ಕನೆ ಟೆಸ್ಟ್

ಕನ್ಹಾಯ್ (೧೩೯) ವೆಸ್ಲಿ ಹಾಲ್ (೫-೨೦) ಅವರಿಂದ ಏಳು ವಿಕೆಟ್‌ಗಳ ಗೆಲುವು ಬಂತು. ಇದರಲ್ಲಿ ಭಾರತದ ಪರ ಪಾಲಿ ಉಮ್ರಿಗಾರ್ (ಅಜೇಯ ೧೭೨) ದುರಾನಿ (೧೦೪) ಅವರ ಶತಕಗಳು ನೆರವಿಗೆ ಬರಲಿಲ್ಲ.

### ಐದನೆ ಟೆಸ್ಟ್

ಸೋಬರ್ಸ್ (೧೦೪) ಮತ್ತು ಲೆಸ್ಟರ್‌ಕಿಂಗ್ ತನ್ನ ಮೊದಲ ನಾಲ್ಕು ಓವರುಗಳಲ್ಲಿ ಕೆಡವಿದ ಐದು ವಿಕೆಟ್‌ಗಳು, ನಂತರ ಎರಡನೆ ಇನಿಂಗ್ಸ್‌ನಲ್ಲಿ ಫ್ರ್ಯಾಂಕ್ ವೊರೆಲ್‌ರ ಅಜೇಯ ೯೮ ಓಟಗಳು ವಿಂಡೀಸ್‌ನ ಇನಿಂಗ್ಸ್ ಹಾಗೂ ೧೨೩ ಓಟಗಳ ಭರ್ಜರಿ ಜಯಕ್ಕೆ ನೆರವಾದವು. ●





# ರಾಜೇಂದ್ರ ನಾರ್ವೇಕರರ 'ಸಹಿ ಸಂಪತ್ತು'



ನಲವತ್ತನಾಲ್ಕು ವರ್ಷದ ಈ ಸಭ್ಯಗೃಹಸ್ಥನಿಗೆ ಒಂಬತ್ತರ ಎಳವೆಯಲ್ಲೇ ಅಂಟಿಕೊಂಡ ಹವ್ಯಾಸ ಹೆಸರು ತಂದುಕೊಟ್ಟಿದೆ. ೧೯೯೧ರ 'ದಿ ಲಿಮ್ಕಾ ಬುಕ್ ಆಫ್ ರೆಕಾರ್ಡ್ಸ್' ಇವರನ್ನು ಭಾರತದ ನಂಬರ್ ಒನ್ ಕ್ರಿಕೆಟ್ ಆಟೋಗ್ರಾಫ್ ಸಂಗ್ರಾಹಕನೆಂಬ ಗೌರವದೊಂದಿಗೆ ತನ್ನ ಪುಟಗಳಲ್ಲಿ ಸ್ಥಾನ ನೀಡಿದೆ. ಈಗಲೂ ಇವರ ಹೆಸರಲ್ಲೇ ಇದೆ ಆ ದಾಖಲೆ.

ಬಕ್ಕ ತಲೆಯ, ಎತ್ತರ ನಿಲುವಿನ ರಾಜೇಂದ್ರ ನಾರ್ವೇಕರ್ ಕಳೆದ ಮೂವತ್ತೈದು ವರ್ಷಗಳಿಂದಲೂ ಕ್ರಿಕೆಟ್ ಪಟುಗಳ ಸಹಿಗಳನ್ನು ಸಂಗ್ರಹಿಸಿ ಹೆಮ್ಮೆ ಪಡುತ್ತಲೇ ಇರುವ ವ್ಯಕ್ತಿ. ಈಗ ಅವರ ಬಳಿ ೧೦೦೦ಕ್ಕೂ ಹೆಚ್ಚು ಪ್ರಖ್ಯಾತ ಕ್ರಿಕೆಟ್ಟಿಗರ ಹಸ್ತಾಕ್ಷರಗಳಿವೆ. ಒಂಬತ್ತು ದೇಶಗಳ ಟೆಸ್ಟ್ ಕ್ರಿಕೆಟ್ ವೀರರ ಸಹಿಗಳಿವು.

• ವಾಸುಕಿ

"೧೯೭೧ರಲ್ಲಿ ಭಾರತ-ಇಂಗ್ಲೆಂಡ್ ಕ್ರಿಕೆಟ್ ಸರಣಿಯಲ್ಲಿ ನಮ್ಮ ದೇಶ ಸಾಧಿಸಿದ ಗೆಲುವಿನ ನಂತರವಂತೂ ನನ್ನ ಈ ಹವ್ಯಾಸ ಹೊಸ ತಿರುವು ಪಡೆಯಿತು," ಎಂದೆನ್ನುವ ರಾಜೇಂದ್ರ ನಂತರದ ದಿನಗಳಲ್ಲಿ ಭಾರತದಲ್ಲಿ ಹೆಚ್ಚೆಚ್ಚು ಟೆಸ್ಟ್ ಕ್ರಿಕೆಟ್ ಪಂದ್ಯಗಳು ನಡೆಯತೊಡಗಿದ್ದು ತಮ್ಮ ಪಾಲಿನ ಸದವಕಾಶವೆಂದು ಅಭಿಪ್ರಾಯಪಡುತ್ತಾರೆ.



"ಇದರಿಂದಾಗಿ ನಾನು ಬಹುತೇಕ ಕ್ರಿಕೆಟ್ ಕಲಿಗಳನ್ನು ಕಂಡು ಕೆಲ ಕ್ಷಣ ಅವರೊಂದಿಗೆ ಇರಲು ಸಾಧ್ಯವಾಯಿತು," ಎಂಬುದವರ

ಸಮಾಧಾನ.

ಕ್ರಿಕೆಟ್ ಅವರನ್ನು ಆಕರ್ಷಿಸಿದ್ದು ನಾಲ್ಕನೆಯ ವರ್ಗದಲ್ಲಿ ಕಲಿಯುತ್ತಿದ್ದಾಗಲೇ. ಮುಂಬಯಿಯ ಗಿರ್‌ಗಾಂವ್ ಪ್ರದೇಶದ ಮಧ್ಯಮವರ್ಗದ ಈ ಹುಡುಗ ಅಲ್ಲಿಂದ ಚರ್ಚ್‌ಗೇಟ್‌ಗೆ ಧಾವಿಸುತ್ತಿದ್ದುದು ಬ್ರೆಬೌರ್ನ್ ಸ್ಟೇಡಿಯಮ್ಮಿನಲ್ಲಿ ಅತಿ ಸಮೀಪದ ಸೀಟು ಹಿಡಿದು ಆಟ ನೋಡುವ ಅವಕಾಶ ಪಡೆಯುವ ಕಾರಣಕ್ಕಾಗಿ. ಪಾಲಿ ಉಮ್ರಿಗಾರ್, ವಿಜಯ್ ಮಾಂಜ್ರೇಕರ್, ರಮಾಕಾಂತ ದೇಸಾಯಿ ಹಾಗೂ ಬಾಪೂ ನಾಡಕರ್ಣಿಯವರಂಥ ವಿಖ್ಯಾತರ ಪ್ರೀತಿಪಾತ್ರ ರಾಜೇಂದ್ರ ತನ್ನ ಓಣಿಯ



ಫ್ರೆಡ್ ಟ್ರೂಮನ್

ಹುಡುಗರೆದುರು ಆ ಆಟದ ಕುರಿತು ಹಾಗೂ ಆಟಗಾರರು ತನ್ನೊಂದಿಗೆ ನಗುನಗುತ್ತ ಮಾತಾಡುತ್ತಿದ್ದುದನ್ನು ಕುರಿತು ಹೇಳಿದ್ದೇ ಹೇಳಿದ್ದು. ಆದರೆ ಇದೆಲ್ಲ ಕೇವಲ ಬೊಗಳೆ ಎಂದು ಛೇಡಿಸಿದ ಹುಡುಗರು, "ಒಂದೊಮ್ಮೆ ಇದು ನಿಜವೇ ಆಗಿದ್ದರೆ ಅದಕ್ಕೇನು ಪುರಾವೆ ಇದೆ ತೋರಿಸು," ಎಂದು ದುಂಬಾಲುಬಿದ್ದರು. ಇದರಿಂದ ಮನನೊಂದ ಬಾಲಕ ರಾಜೇಂದ್ರನಿಗೆ ಹೊಳೆದದ್ದು- 'ಅವರೆಲ್ಲರ ಆಟೋಗ್ರಾಫ್ ಸಂಗ್ರಹಿಸಬೇಕು,' ಎಂಬ ವಿಚಾರ.

ಮುಂದೊಂದು ದಿನ ಹಿಂದೂ ಜಿಮ್‌ಖಾನಾದಲ್ಲಿ ಟೈಮ್ಸ್ ಶೀಲ್ಡ್ ಪಂದ್ಯ. ೬೦ರ ದಶಕದ ವಿಖ್ಯಾತ ವೇಗದ ಬೌಲರ್ ರಮಾಕಾಂತ ದೇಸಾಯಿ ಇತರ ಕ್ರಿಕೆಟ್ ಪಟುಗಳೊಂದಿಗೆ ಹರಟೆಯಲ್ಲಿ ತೊಡಗಿದ್ದನ್ನು ಗಮನಿಸಿದ ರಾಜೇಂದ್ರ ಗಟ್ಟಿ ಧೈರ್ಯ ಮಾಡಿ ಅವರ ಬಳಿ ನಡೆದ. ಕೈಯಲ್ಲೊಂದು ಕಾಗದದ ಚೂರಿತ್ತು. ಅದನ್ನೇ ಮುಂದೆ ಚಾಚಿ, "ಪ್ಲೀಸ್, ನಿಮ್ಮ ಆಟೋಗ್ರಾಫ್ ಹಾಕಿ," ಎಂದು ವಿನಂತಿಸಿಕೊಂಡ ಈ ಬಾಲಕನನ್ನು ಆತ್ಮೀಯವಾಗಿ ಬಳಿಗೆಳೆದುಕೊಂಡ ರಮಾಕಾಂತ ದೇಸಾಯಿ, "ಹೆಸರೇನು ಮರಿ? ಯಾವ ಕ್ಲಾಸು?" ಎಂದೆಲ್ಲ ಕೇಳುತ್ತ ಸಹಿ ಮಾಡಿಯೇ ಬಿಟ್ಟರು.



ರಾಜೇಂದ್ರ ಕೂಡಲೇ, "ಥ್ಯಾಂಕ್ಯು ಅಂಕಲ್," ಎಂದು ಓಟಕಿತ್ತಿದ. ಓಣಿಗೆ ಬಂದು, "ಬರ್‍ರೋ.... ನಿಮಗೆ ಪುರಾವೆ ಬೇಕಲ್ಲವೆ? ಇಲ್ಲಿದೆ ನೋಡಿ," ಎಂದೆನ್ನುತ್ತ ಆ ಹಾಳೆಯನ್ನು ಹೆಮ್ಮೆಯಿಂದ ತೋರಿಸಿದ.

ಅದುವರೆಗೂ ಒಂದು ರೀತಿಯ ಕೀಳರಿಮೆಯಿಂದ ಬಳಲುತ್ತಿದ್ದ ಬಡ ಹುಡುಗ ರಾಜೇಂದ್ರನಿಗೆ, ಗೆಳೆಯರೆಲ್ಲ ಅಚ್ಚರಿಯಿಂದ ಆ ಸಹಿಯನ್ನೇ ನೋಡುತ್ತ "ಹೌದ್ಹೌದು, ರಾಜು ಹೇಳಿದ್ದು ಸುಳ್ಳಲ್ಲ. ಆತನಿಗೆ ಆ ಕ್ರಿಕೆಟ್ಟಿಗರೆಲ್ಲರ ಪರಿಚಯ ಇದೆ," ಎಂದು ತಂತಮ್ಮಲ್ಲೇ ಮಾತಾಡಿಕೊಳ್ಳುತ್ತಿದ್ದಾಗ ತಾನು ಆಕಾಶದಲ್ಲಿ ನಡೆದಾಡಿದ ಅನುಭವ.

ಸಹಿಯಿದ್ದ ಹಾಳೆಯನ್ನು ನೋಡಿದ ಹಿರಿಯರೊಬ್ಬರಿಂದ, "ಹೀಗೆ ಬಿಡಿ ಕಾಗದದಲ್ಲಿ ಸಹಿ ಮಾಡಿಸಿಕೊಂಡರೇನು ಬಂತು? ಕಳೆದು ಹೋಗುವುದಿಲ್ಲವೆ? ಒಂದು ಆಟೋಗ್ರಾಫ್ ಪುಸ್ತಕ ಮಾಡಿಟ್ಟುಕೋ. ದೊಡ್ಡ ಕ್ರಿಕೆಟ್ಟಿಗರೆಲ್ಲ ಸಹಿ ಒಂದೇ ಕಡೆ ಇದ್ದರೆ ಒಳ್ಳೆಯದು," ಎಂಬ ಸಲಹೆ ಬಂತು.

ರಾಜೇಂದ್ರ ಸಹಿಗಳ ಬೇಟೆಗೆ ಸದಾಸಿದ್ಧರಾಗಿ ನಿಂತರು. ಮುಂದೊಂದು ದಿನ ಸಂಗ್ರಹಿಸಿದ್ದ ಸಹಿಗಳನ್ನೆಲ್ಲ ಸುಮ್ಮನೇ ತಿರುವಿಹಾಕಿದಾಗ ಸ್ವತಃ ರಾಜೇಂದ್ರರಿಗೇ ಅಚ್ಚರಿ! ಅವರೆಲ್ಲ ಆ ಕಾಲದ ಸುಪ್ರಸಿದ್ಧರು.

ಆದರೆ ಅಷ್ಟಕ್ಕೇ ಮನ ತಣಿಯಲಿಲ್ಲ. ಅಂತಾರಾಷ್ಟ್ರೀಯ ಖ್ಯಾತಿಯ ವಿದೇಶೀ ಕ್ರಿಕೆಟ್ ಪಟುಗಳ ಸಹಿಗಳೂ ಇದ್ದರೆಷ್ಟು ಚೆನ್ನ! ಎಂದುಕೊಂಡರು. ಮುಂದೆಲ್ಲ ಅವರ ಲಕ್ಷ್ಯ ಆ ಕಡೆಗೇ. ಪ್ರಯತ್ನ ಆ ದಿಶೆಯಲ್ಲೇ.

"ನನ್ನ ಸಂಗ್ರಹಕ್ಕೆ ಸಹಿ ಹಾಕಿದ ಮೊಟ್ಟ ಮೊದಲ ವಿದೇಶೀ ಕ್ರಿಕೆಟ್ಟಿಗನೆಂದರೆ ಮೈಕ್ ಸ್ಮಿತ್. ಆಗ ಆತ ಭಾರತಕ್ಕೆ ಬಂದಿದ್ದ ಇಂಗ್ಲೆಂಡ್ ತಂಡದ ಉಪನಾಯಕ. ಟೆಡ್ ಡೆಕ್ಸ್‌ಟರ್ ನಾಯಕತ್ವದಲ್ಲಿ ಆ ತಂಡ ಭಾರತದಲ್ಲಿ ಆಡಿತು (೧೯೬೧-೬೨). ಅವರೆಲ್ಲ ಸಿಸಿಐ ಚೇಂಬರ್‌ನಲ್ಲಿ ವಾಸ್ತವ್ಯ ಹೂಡಿದ್ದರು. ಕಾವಲಿನವರ ಕಾಟವೂ ಇರುತ್ತಿರಲಿಲ್ಲ. ಬಲು ಸುಲಭವಾಗಿ ಅವರ ರೂಮುಗಳಿಗೆ ಹೋಗಬಹುದಿತ್ತು," ರಾಜೇಂದ್ರ ನೆನಪಿನ ಪುಟ ತಿರುವುತ್ತಾರೆ.

ಎರಡು ವರ್ಷಗಳ ನಂತರ ಬಾಬ್ಬಿ ಸಿಂಪ್ಸನ್ ನೇತೃತ್ವದ ಆಸ್ಟ್ರೇಲಿಯನ್ ತಂಡದ ಮೇಲೆ ರಾಜೇಂದ್ರ ಗಮನವನ್ನು ಕೇಂದ್ರೀಕರಿಸಿದರು. ಮುಂಬಯಿಯ ಬ್ರೆಬೌರ್ನ್ ಸ್ಟೇಡಿಯಮ್ಮಿನಲ್ಲಿ ನಡೆದ ಪಂದ್ಯದಲ್ಲಿ ಭಾರತಕ್ಕೆ ಜಯ ಲಭಿಸಿತು. "ವಿಜಯದಶಮಿಯ ದಿನ ಲಭಿಸಿದ ಆ ವಿಜಯದ ಕ್ಷಣಗಳನ್ನು ನಾನೆಂದೂ ಮರೆಯಲಾರೆ," ಎಂದು ಹೆಮ್ಮೆಪಡುವ ರಾಜೇಂದ್ರ ಆಗ ಎಲ್ಲ ಆಸ್ಸಿಗಳ ಸಹಿ ಪಡೆಯಲಾಗದ್ದಕ್ಕೆ ವಿಷಾದವನ್ನೂ ವ್ಯಕ್ತಪಡಿಸುತ್ತಾರೆ. "ನಾರ್ಮನ್ ಓನೆಲ್, ಪಾಪ, ಅಸ್ವಸ್ಥನಾಗಿ ಆಸ್ಪತ್ರೆ ಸೇರಿದ್ದರಿಂದ ಆತನ ಸಹಿ ಸಿಗುವುದಾದರೂ ಹೇಗೆ ಸಾಧ್ಯವಿತ್ತು ಹೇಳಿ?" ಎಂದು ಕೇಳುವ ಅವರು ಆ ಹೊತ್ತಿಗಾಗಲೇ ಕ್ರಿಕೆಟ್ ವಲಯದಲ್ಲಿ ಚಿರಪರಿಚಿತ ವ್ಯಕ್ತಿಯಾಗಿ ಬಿಟ್ಟಿದ್ದರು.

೧೯೬೬-೬೭ರಲ್ಲಿ ಗ್ಯಾರಿ ಸೋಬರ್ಸ್ ಮುಖಂಡತ್ವದಲ್ಲಿ ವೆಸ್ಟ್ ಇಂಡೀಸ್ ತಂಡ ಭಾರತಕ್ಕೆ ಬಂದದ್ದು ನಾರ್ವೇಕರರ ಸಹಿ ಸಂಪತ್ತು ಹೆಚ್ಚಲು ಕಾರಣವಾಯಿತು.

ರಾಜೇಂದ್ರರ ಇನ್ನೊಂದು ಹೆಗ್ಗಳಿಕೆಯೆಂದರೆ ಈ ಹವ್ಯಾಸಕ್ಕಾಗಿ ಮುಂಬಯಿಯಿಂದ ಬೇರೆಲ್ಲೂ ದೂರ ಹೋಗಬೇಕಾಗಿ ಬರದೇ ಇದ್ದುದು. "ಏನು ಮಾಡಲಿ? ಮನೆಯಲ್ಲಿ ಅನಾರೋಗ್ಯ ಪೀಡಿತ ತಾಯಿ. ಆಕೆಯನ್ನು ಬಿಟ್ಟು ಇರಲು ಸಾಧ್ಯವೆ? ಆದರೆ ನನ್ನ ಸಹಿ ಸಂಗ್ರಹಕ್ಕೆ ಇನ್ನಷ್ಟು ಮತ್ತಷ್ಟನ್ನು ಸೇರಿಸಿಕೊಳ್ಳಲೇಬೇಕೆಂಬ ಇಚ್ಛೆ ಬಲಗೊಳ್ಳುತ್ತಲೇ ಹೋದಾಗ ಅದಕ್ಕೊಂದು ದಾರಿ ತಂತಾನೇ ಕಂಡಿತು. ಅದೂ ೧೮ ವರ್ಷಗಳಷ್ಟು ದೀರ್ಘಾವಧಿಯ ನಂತರ. 'ಅಂಚೆಯ ಮೂಲಕ ಯಾಕೆ ಅವರೆಲ್ಲರ ಸಹಿ ಪಡೆಯಬಾರದು?' ಎಂಬ ವಿಚಾರ ಬಂದದ್ದೇ ತಡ ಅದನ್ನು ಕಾರ್ಯರೂಪಕ್ಕಿಳಿಸಿಯೂ ಬಿಟ್ಟೆ. ನನ್ನ ವಿನಂತಿಯನ್ನು ಮನ್ನಿಸಿ ಪ್ರೀತಿಯಿಂದ ತಮ್ಮ ಸಹಿಯನ್ನೂ ಸಂದೇಶವನ್ನೂ ಅವರು ಕಳಿಸಿದಾಗ ಆಗುವ ಆನಂದವೇ ವಿಶಿಷ್ಟವಾದದ್ದು."

ನಾರ್ವೇಕರರ ಬಳಿಯಿರುವ ಸಂಗ್ರಹದಲ್ಲೇ ಅತ್ಯಪರೂಪದ್ದೆಂದರೆ ಸರ್ ಡಾನ್ ಬ್ರಾಡ್ಮನ್‌ರ

ಸಹಿಯೊಂದಿಗೆ ಇರುವ, ಅವರೊಂದಿಗೆ ಫ್ರೆಡ್ ಟ್ರೂಮನ್ ಕೂಡ ನಿಂತಿರುವ ಫೋಟೋ. "ಇದು ನನಗೆ ದೊರೆಯುವಂತೆ ಮಾಡಲು ಕಾರಣರಾದವರೇ ಫ್ರೆಡ್ ಟ್ರೂಮನ್. ಅದಕ್ಕೂ ಮೊದಲು ಆ ವಿಖ್ಯಾತ ಆಸ್ಟ್ರೇಲಿಯನ್ ಬ್ಯಾಟ್ಸ್‌ಮನ್‌ನ ಸಹಿ ಪಡೆಯಲು ಸತತ ಎಂಟು ವರ್ಷಗಳವರೆಗೆ ಪ್ರಯತ್ನಿಸಿದ್ದೆ" ಎನ್ನುವ ನಾರ್ವೇಕರ್, "ಇಲ್ಲಿ ತಾಳ್ಮೆಯೆಂಬುದು ಮುಖ್ಯ ಸೂತ್ರ. ಮರಳಿ ಯತ್ನವ ಮಾಡು ಎಂಬುದು ಇಲ್ಲಿ ಹೆಚ್ಚು ಅನ್ವಯವಾಗುವಂಥದು. ನಾನು ಇವೆರಡನ್ನೂ ಗಮನದಲ್ಲಿರಿಸಿಕೊಂಡೇ ಮುಂದುವರಿದಿದ್ದೇನೆ," ಎಂದು ತಮ್ಮ ಕೆಲವು ಮರೆಯಲಾಗದ ಅನುಭವಗಳನ್ನು ನಮ್ಮೆದುರು ನಿಲ್ಲಿಸುತ್ತಾರೆ.

ಒಮ್ಮೆ ಆಟಗಾರರನ್ನು ಕಾಣುವ ಅವಕಾಶಕ್ಕಾಗಿಯೇ ಸತತ ಏಳು ಗಂಟೆಗಳ ಕಾಲ ಒಂದೇ ಕಡೆ ಕಾಯಬೇಕಾಗಿ ಬಂತಂತೆ.

"೧೯೮೭ರಲ್ಲಿ ನಡೆದ ರಿಲಾಯನ್ಸ್ ಕಪ್ ಪಂದ್ಯಗಳ ಸಂದರ್ಭ. ಕ್ರಿಕೆಟ್ಟಿಗರು ಇಳಿದುಕೊಂಡಿದ್ದ ಪಂಚತಾರಾ ಹೋಟಲಿನ ಮುಂದೆ ನಿಂತು ಕಾಯುತ್ತಿದ್ದ ನನ್ನನ್ನು ಅಲ್ಲಿಯ ದ್ವಾರಪಾಲಕ ಅಕ್ಷರಶಃ ಅರ್ಧಚಂದ್ರ ಪ್ರಯೋಗ ಮಾಡಿ ಹೊರಗೆ ದೂಡತೊಡಗಿದ. ಅಷ್ಟು ಹೊತ್ತಿಗೆ ಗ್ರಹಾಂ ಗೂಚ್ ಬಂದಿರದಿದ್ದರೆ ನನ್ನ ಗತಿ ಇನ್ನೇನಾಗುತ್ತಿತ್ತೋ. ಆ ದ್ವಾರಪಾಲಕನನ್ನು ತರಾಟೆಗೆ ತೆಗೆದುಕೊಂಡ ಗೂಚ್, ಆತ ನನ್ನ ಕ್ಷಮಾಪಣೆ ಕೇಳುವಂತೆ ಮಾಡಿದ್ದಲ್ಲದೆ, ನನ್ನನ್ನು ಒಳಗೆ ಕರೆದೊಯ್ದು ಕೂಡಿಸಿ ಆತ್ಮೀಯವಾಗಿ ಮಾತನಾಡಿಸಿದರು. ನನ್ನ ಉದ್ದೇಶವನ್ನು ಅರಿತು ಪ್ರೀತಿಯಿಂದ ಸಹಿ ಹಾಕಿ ತಂಡದ ಇತರರ ಸಹಿಗಳನ್ನೂ ದೊರಕಿಸಿಕೊಟ್ಟರು.

"ಗೂಚ್‌ರಂತೆಯೇ ನನಗೆ ನೆರವಾದವರು ಬಹಳ ಜನ. ಆನಂದಜಿ ದೋಸಾ, ರಾಜ್ ಸಿಂಗ್, ರಮಾಕಾಂತ ದೇಸಾಯಿ, ನರೇನ್ ತಾಮ್ಹಣೆ ಅಲ್ಲದೆ ಇಂಗ್ಲೆಂಡಿನ ಕೆನ್ ಮಿಲ್ಸ್‌ರನ್ನು ನಾನು ಎಂದಿಗೂ ಸ್ಮರಿಸುವೆ. ಕೆನ್ ನಾನು ಬರೆದಾಗಲೆಲ್ಲ ತಮ್ಮ ದೇಶದ ಕ್ರಿಕೆಟ್ಟಿಗರ ಸಹಿ-ಸಂದೇಶಗಳನ್ನು ಪಡೆದು ಕಳಿಸುತ್ತಿದ್ದಾರೆ."

ರಾಜೇಂದ್ರ ನಾರ್ವೇಕರ್ ಈ ಹವ್ಯಾಸಕ್ಕಾಗಿ ಹಣ ಕಳೆದುಕೊಳ್ಳಬೇಕಾಗುತ್ತದೆಯೇ ವಿನಾ ಅದರಿಂದೇನೂ ಅವರಿಗೆ ಪ್ರಾಪ್ತಿಯಿಲ್ಲ. "ಆದರೆ ಇದನ್ನೆಲ್ಲ ಹಣದಿಂದ ಅಳೆಯಲಾದೀತೆ? ನನ್ನ ಸಹಿಸಂಪತ್ತು ಹಣದಿಂದ ಮಾಪನ ಮಾಡುವಂಥದ್ದಂತೂ ಖಂಡಿತ ಅಲ್ಲ. ಅದು ಯಾವುದರಿಂದಲೂ ಹೋಲಿಸಲಾಗದಂಥದು, ಅಮೂಲ್ಯವಾದದ್ದು" ಎನ್ನುವ ರಾಜೇಂದ್ರರ ಮಾತು ಇಂಥ ಹವ್ಯಾಸವುಳ್ಳವರಿಗೆ ಮಾತ್ರ ಅರ್ಥವಾಗುವಂಥದು.

(ಆಧಾರ: 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಪ್ರಕಟವಾದ ಸುದೀಪ್ ಸೋನಾವಣೆಯವರ ಲೇಖನ.)

---

*ಬಿಸಿಲಲ್ಲಿ ಓಡಾಡುವ ಮನುಷ್ಯ ಮರವೊಂದರ ನೆರಳನ್ನು ಆಶ್ರಯಿಸಿ ವಿಶ್ರಾಂತಿ ಪಡೆದು ಅಲ್ಲಿಯ ತಂಪನ್ನು ಅನುಭವಿಸಿ ಆನಂದಿಸುತ್ತಾನೆ. ಆದರೆ ಕೆಲ ಕ್ಷಣಗಳ ನಂತರ ಅವನಿಗೆ ಮತ್ತೆ ಬಿಸಿಲಿಗೆ ತನ್ನನ್ನೊಡ್ಡಿಕೊಳ್ಳುವ ಚಪಲವುಂಟಾಗುತ್ತದೆ. ಅದೂ ಅಲ್ಪಕಾಲದ್ದೇ. ಆತನಿಗೆ ಆ ಬಿಸಿಲು 'ಭಯಂಕರ'ವೆನ್ನಿಸತೊಡಗುತ್ತದೆ. ಮತ್ತೆ ನೆರಳನ್ನು ಅರಸುತ್ತಾನೆ. ಹೀಗೆ ನೆರಳಿಗೂ ಬಿಸಿಲಿಗೂ ಆತನ ಅಲೆತ ನಿರಂತರವಾಗಿ ನಡೆದೇ ಇರುತ್ತದೆ. ಇಂಥವನಿಗೆ ಏನನ್ನಬೇಕು? 'ದಡ್ಡ' ಎಂದೆ? ಹೌದು. ಜ್ಞಾನಿ ಹೀಗೆಲ್ಲ ಅಲೆದಾಡುವುದಿಲ್ಲ. ಆತ ನೆರಳಲ್ಲಿದ್ದುಕೊಂಡೇ ಬಿಸಿಲಿನ ಬವಣೆಯನ್ನು ವರ್ಣಿಸುತ್ತಾನೆ.*

– ರಮಣ ಮಹರ್ಷಿ

ಹರಟೆ

# ಬಾಡಿಗೆಯವರ ಬಾಧ್ಯತೆ

ನೀವೆಂದಾದರೂ ಮನೆಯನ್ನು
ಬಾಡಿಗೆ ಕೊಟ್ಟು ನೋಡಿದ್ದೀರಾ?
"ಆ ಅನುಭವ! ಅಬ್ಬಬ್ಬಾ!"
ಅನ್ನುತ್ತೀರಾ?

"ಹಂಗಿನರಮನೆಗಿಂತ ಇಂಗಡದ ಗುಡಿಲೇಸು...." ಎಂಬಂತೆ ಯಾರ ಹಂಗಿಗೂ ಬೀಳಬಾರದೆಂದು ಇದ್ದ ಸೈಟಿನಲ್ಲಿ ಸಾಲ-ಸೋಲ ಮಾಡಿ ಮನೆಕಟ್ಟಿಸಿ, "ಅಂಬಲಿ ಕುಡಿದು ಕುಳಿತರೂ ಯಾರೂ ಕೇಳಲಾರರು" ಎಂದು ಸ್ವಂತ ಮನೆಗೆ ಹೋದ ಮೇಲೆಯೇ ನಳಿನಿಗೆ ಅಲ್ಲಿನ ಸಾಧಕ-ಬಾಧಕಗಳು ಒಂದೊಂದಾಗಿ ಅರಿವಿಗೆ ಬರತೊಡಗಿದ್ದು.

ಹೊಸ ಬಡಾವಣೆ ಎಂದ ಮೇಲೆ ಕೇಳಬೇಕೆ! ಅಂಗಡಿ ಮುಂಗಟ್ಟಿಗೆ ಹರದಾರಿ ನಡೆದು ಹೋಗಬೇಕು. ತಕ್ಷಣ ಒಂದು ಮಾತ್ರೆ ಬೇಕೆಂದರೆ ಅಷ್ಟು ದೂರ, ಇನ್ನು ಬಿ.ಟಿ.ಎಸ್. ಬಸ್ಸು ಹಿಡಿಯಲು ಅಷ್ಟು ದೂರ ನಡೆದು ಸ್ಟಾಪು ತಲುಪಬೇಕು ಎಂದು ನಳಿನಿಯ ಗೊಣಗಾಟ ನಡೆದೇ ಇತ್ತು. ನಾನು ಆಫೀಸಿಗೆ ಹೊರಟು, ಹುಡುಗರು ಸ್ಕೂಲಿಗೆ ಹೊರಟು ಹೋದ ಮೇಲೆ ಮಾತ್ರ ಈ ತಾಪತ್ರಯ. ಸ್ಕೂಟರ್ ಇದ್ದುದರಿಂದ ಸಂಜೆ ವೇಳೆಗೆ ಈ ತಾಪತ್ರಯವಿರುತ್ತಿರಲಿಲ್ಲ.

"ಅಲ್ವೇ ನಳಿನಿ, ಅಕ್ಕಪಕ್ಕದವರೊಡನೆ ಸ್ನೇಹ ಮಾಡ್ಕೋಬೇಕು ಅಂತಿದ್ದೆಯಲ್ಲಾ, ಹೋಗಿ ಮಾತನಾಡಿಸಿ ಬಾ," ಎಂದೆ.

"ಅಕ್ಕಪಕ್ಕದಲಿಲ್ಲಿ ಮನೆ ಇದೆ, ಅದೂ ಅಲ್ಲೊಂದು. ಇಲ್ಲೊಂದು ಆದರೂ ಬಲಗಡೆ ಪಕ್ಕದಲ್ಲಿ ಮನೆ ಇದೆಯಲ್ಲಾ, ಆ ಮನೆಯವರು ವಿಮಲಮ್ಮ ಅಂತಾ, ಮಾತನಾಡಿಸಿ ಬರೋಣವೆಂದು ಒಂದು ದಿವಸ ಹೋಗಿದ್ದೆ. ಆಕೆನೂ ಗೇಟಿನ ಬಳಿಯೇ ನಿಂತಿದ್ದರು. ಮುಖನೋಡಿ ನಕ್ಕರು. 'ಓಹೋ, ಹೋ, ಹೊಸದಾಗಿ ಬಂದಿದ್ದೀರಲ್ಲಾ ಅವರೇ ಅಲ್ವಾ?' ಎಂದರು.

"ಹೌದು 'ನಳಿನಿ' ಅಂತಾ ಎಂದು ಹೇಳಿ ಒಳಗೆ ಹೋದೆ. 'ಕುಳಿತುಕೊಳ್ಳಿ' ಅಂದ್ರು. ಕುಳಿತೆ. 'ಮುಂಚೆ ಎಲ್ಲಿದ್ರಿ ಏನು ಎತ್ತ' ಅಂತಾ ಒಂದು ಪ್ರಶ್ನೆ ಕೇಳಿದ್ರೆ ಸರಿ, ಶುರು ಮಾಡಿದ್ರು ನೋಡಿ ಪುರಾಣ. ಇವರಿಬ್ಬರ ಮದುವೆ ಮನೆಯವರಿಗೆ ಇಷ್ಟವಿಲ್ಲದ್ದು, ಇವರಿಗೂ ಇವರತ್ತೆಗೂ ಜಗಳವಾದದ್ದು, ಮಗನನ್ನು ಬೈದದ್ದು. ತಮ್ಮಂದಿರೆಲ್ಲರೂ ಅಮ್ಮನ ಪರ ವಹಿಸಿದ್ದು, ಕಡೆಗೆ ಬೇಜಾರಾಗಿ ಮನೆ ಕಟ್ಟಿಸಿಕೊಂಡು ಬಂದು ಬಿಟ್ಟಿದ್ರು.... ಹೀಗೆ ಕುಳಿತಿರುವವರೆಗೂ ತಮ್ಮ ಅತ್ತೆಯನ್ನು ಬೈಯುತ್ತಲೇ ಇದ್ದರು. ಜೊತೆಗೆ ಆಫೀಸು ಮುಗಿದ ತಕ್ಷಣ ಅವರ ಗಂಡ ಮನೆಗೆ ಓಡೋಡಿ ಬರ್ತಾರಂತೆ, ಕ್ಲಬ್ಬು ಮೀಟಿಂಗ್ ಎಂದು ಯಾವತ್ತೂ ತಡವಾಗಲ್ವಂತೆ.

ಭಾನುವಾರ ಕೂಡಾ ಹೊರಗಡೆಯೇ ಹೋಗೋಲ್ವಂತೆ, ರಜದ ದಿನ ಮನೇಕೆಲ್ಸಾ ಎಲ್ಲಾ ಅವರೇ ಮಾಡ್ತಾರಂತೆ. ಹೀಗೆ ಒಂದೇ.... ಎರಡೇ.... ಅತ್ತೆಗೆ ಸಹಸ್ರನಾಮ, ಗಂಡನ ಗುಣಗಾನ ನಡೆದೇ ಇತ್ತು. ಕೇಳಿ ಕೇಳಿ ತಲೆನೋವು ಬಂದು ಬಿಡ್ತು. 'ಇನ್ನೊಂದಾದ್ರು ಬರ್ತೀನೆ' ಎಂದು ಬಲವಂತದಿಂದ ಬಿಡಿಸಿಕೊಂಡು ಬಂದೆ ಎಂಥಾ ಬೈರಿಗೇರೀ. ಕೊರೆದು ಕೊರೆದು ತಲೆ ತೂತು ಮಾಡಿಬಿಟ್ಟರು," ಎಂದಳು.

"ನೀನು ಇಷ್ಟಕ್ಕೆಲ್ಲಾ ಬೇಜಾರು ಮಾಡಿಕೊಂಡರೆ ಹೇಗೆ? ಪಾಪ ಅವರಿಗೂ ಹೇಳಿಕೊಳ್ಳುವವರು ಸಿಗದೆ ಬಹಳ ದಿನದಿಂದ ಕಾದಿದ್ರು ಅಂತಾ ಕಾಣುತ್ತೆ. ನೀನು ಸಿಕ್ಕಿದ್ದೇ ತಡ ಕೊರೆದಿರಬೇಕು. ಈಗ ಹೇಗೂ ವಿಷಯ ಹೇಳಿ ಮುಗಿದು ಹೋಗಿದೆಯಲ್ಲಾ, ಇನ್ನು ಏನು ವಿಷಯ ಮಾತನಾಡಲಿದ್ದೀತು. ಮತ್ತೊಮ್ಮೆ ಹೋಗಿ ಬಾ," ಎಂದೆ.

● ವೈ. ಎನ್. ಗುಂಡೂರಾವ್



"ಅಯ್ಯೋ, ನೀವು ಹೇಳೋದೇನು ಅದೂ ಆಯ್ತು. ಮೊನ್ನೆ ಅಂಗಡಿಗೆ ಹೋಗಿದ್ದು ಬರ್‍ತಾ ಹಾಗೆ ಬಂದೆ. ಬಾಗಿಲಲ್ಲೇ ನಿಂತಿದ್ರು. ಬನ್ನಿ ಬನ್ನಿ ಅಂದ್ರು. ಪುನಃ ಕೊರೆತಕ್ಕೆ ಸಿಕ್ಕಿ ಹಾಕಿಕೊಳ್ಳಬಾರದೆನಿಸಿ 'ಸ್ವಲ್ಪ ಕೆಲಸ ಇದೇರಿ, ಮನೆಗೆ ಯಾರೋ ಬರ್‍ತೀನಿ ಅಂತಾ ಹೇಳಿದ್ದಾರೆ' ಎಂದು ಹಾಗೆ ನಿಂತೆ. ಅಷ್ಟರಲ್ಲೇ 'ಮೊನ್ನೆ ಏನಾಯ್ತು ಗೊತ್ತಾರೀ, ಇವರ ನಾದಿನಿ ಬಂದಿದ್ರು. ಅವರು ಬಂದು ಬಹಳ ದಿನವಾಗಿತ್ತು. ಏನೋ ಬಂದ್ರಲ್ಲಾ ಅಂತಾ ಒಳಗೆ ಕರೆದು ತಿಂಡಿ, ಕಾಫಿ ಮಾಡಿ ಕೊಟ್ರೆ ಸುಮ್ನೆ ತಿಂದು ಹೋಗಬಾರದಾ? ನಾವು ಮನೆ ಬಿಟ್ಟು ಬರೋವಾಗ ಅವರ ಮನೆ ಬೆಳ್ಳಿ ಸಾಮಾನೆಲ್ಲಾ ತಂದು ಬಿಟ್ಟಿದ್ದೀವಂತೆ. ಅದನ್ನು ಅಮ್ಮ ಕೇಳ್ಕೊಂಡು ಬಾ ಅಂತಾ ಹೇಳಿದ್ರು ಎಂದು ರಾಮಾಯಣ ಶುರು ಮಾಡಿದಳು' ಅಂತಾ ತಮಗೂ ತಮ್ಮ ನಾದಿನಿಗೂ ನಡೆದ ಜಗಳದ ವಿವರಣೆ ಕೊಡತೊಡಗಿದರು. ನಾನು ಇವರ ಕೈಯಿಂದ ಹೇಗೆ ತಪ್ಪಿಸಿಕೊಳ್ಳೋದು ಅಂತಾ ಅತ್ತ ಇತ್ತ ನೋಡತೊಡಗಿದೆ. ಅಷ್ಟರಲ್ಲಿ ನಮ್ಮ ರಸ್ತೆ ಕಡೆಗೆ ಯಾರೋ ಹೆಂಗಸರು ಬಂದಂತಾಯ್ತು. 'ಮನೆಗೆ ಯಾರೋ ಬಂದ್ರೂಂತ ಕಾಣುತ್ತೆ ಮತ್ತೆ ಮತ್ತೆ ಯಾವಾಗಲಾದ್ರೂ ಸಿಕ್ತೀನಿ' ಎಂದು ತಪ್ಪಿಸಿಕೊಂಡು ಬಂದೆ. ಸಧ್ಯ ಆ ಕಡೆ ಮತ್ತೆ ಹೋದ್ರೆ ಕೇಳಿ," ಎಂದಳು.

ಸಂಜೆ ಶಿವು ಮನೆ ಹುಡುಕಿಕೊಂಡು ಬಂದ. "ಎಂತದು ಮಾರಾಯಾ, ಮನೆ ಹುಡ್ಕಿ ಹುಡ್ಕಿ ಸಾಕಾಯ್ತು," ಎಂದಾಗ, "ಸುಸ್ತಾಗಿದ್ದೀರಾ ಕಾಫಿ ಕುಡೀರಿ," ಎಂದು ನಳಿನಿ ಕಾಫಿ ತಂದಿತ್ತಳು.

"ಅಲ್ಲಾ ನಳಿನಿಯವರೇ, ಒಬ್ರೇ ಹೇಗೆ ಮನೇಲಿರ್‍ತೀರಾ? ಬೇಜಾರಾಗೋಲ್ವಾ? ಮೇಲೊಂದು ಮನೆ ಕಟ್ಟಿಸಿ ಬಾಡಿಗೆಗೆ ಕೊಟ್ರೆ ಬಾಡಿಗೆಯೂ ಬಂದೀತು, ನೆರೆಹೊರೆಯೂ ಆದೀತು," ಎಂದು ಸಲಹೆ ನೀಡಿದ.

"ಹೌದು, ಯಾಕ್ರಿ ಹಾಗೆ ಮಾಡಬಾರದು?" ಎಂದಳು ನಳಿನಿ. ಮನೆಕಟ್ಟಿ ಮೂರು ನಾಲ್ಕು ವರ್ಷವಾಗುತ್ತಾ ಬಂದಿದ್ದರಿಂದ ಸಾಕಷ್ಟು ಸಾಲವೂ ತೀರಿತ್ತು. ಶಿವು ಕೊಟ್ಟ ಐಡಿಯಾ ಸರಿ ಎನಿಸಿತು. ನಾಲ್ಕೈದು ಚದರ ಕಟ್ಟಿಸಿದ್ದಾಯ್ತು. ಮನೆ ನೋಡಿದ ಹಲವಾರು ಜನ ಬಾಡಿಗೆಗೆ ಬರಲು ತಯಾರಾಗಿದ್ದರು. ಶಿವು ಸೂಚಿಸಿದ ಒಬ್ಬರಿಗೆ ಬಾಡಿಗೆಗೆ ಕೊಡಲು ನಿರ್ಧರಿಸಿದೆವು.

ಹೊಸದಾಗಿ ಮದುವೆಯಾದ, ದುಡಿಯುವ ದಂಪತಿ. ಮನೆ ನೋಡಿದರು. ಬಾಡಿಗೆ ಅಡ್ವಾನ್ಸ್ ಇಷ್ಟು ಎಂದಾಗ ದುಸರಾ ಮಾತಾಡದೆ ಚೆಕ್ ಬರೆದು ಕೊಟ್ಟು ಮಾರನೆಯ ದಿನವೇ ಬಂದು ಬಿಟ್ಟರು. ನಳಿನಿಗೆ ಖುಷಿಯೋ ಖುಷಿ. ಆತನಿಗೆ ಸರ್ಕಾರಿ ಕೆಲಸ- ಆಕೆ ಎಲ್ಲೋ ಸ್ಕೂಲ್ ಟೀಚರ್ ಕೆಲಸ ಮಾಡುತ್ತಿದ್ದುದರಿಂದ ಐದು ಗಂಟೆಗೆಲ್ಲಾ ಮನೆಗೆ ಹಿಂದಿರುಗುತ್ತಿದ್ದರು. ಈಗ ಸಂಜೆ ವೇಳೆ ನಳಿನಿಗೂ ಜೊತೆ ಎನಿಸಿತು.

"ರೂಪ-ಮಹೇಶ್‌ದು ಲವ್ ಮ್ಯಾರೇಜ್ ಅಂತೇರೀ" ಎಂದು ಮಹಾಗುಟ್ಟನ್ನು ಭೇದಿಸಿದವಳಂತೆ ನಳಿನಿ ರಾತ್ರಿ ಕಿವಿಯಲ್ಲಿ ಉಸುರಿದಳು. ನನಗೆ ಅಷ್ಟೇನೂ 'ಆಶ್ಚರ್ಯ ಎನಿಸದಿದ್ದರೂ ಗುಟ್ಟನ್ನು ಹೇಳಿದ ನಳಿನಿಗೆ ನಿರಾಶೆಯಾಗಬಾರದೆಂದು "ಹೌದಾ!" ಎಂದು ಬಾಯಿ ಇಷ್ಟಗಲ ಮಾಡಿದೆ.

"ಪೊಲೀಸ್ ಕಂಪ್ಲೇಂಟ್ ಅದೂ ಇದೂ ಮತ್ತೇನಾದರೂ ರಾಮಾಯಣವಾದರೆ ಏನುಮಾಡೋದು?" ಎಂದೆ.

"ಅಯ್ಯೊ ಬಿಡ್ರಿ, ಮದುವೆಯಾಗಿ ಆಗಲೇ ಒಂದು ವರ್ಷವಾಯಿತಂತೆ" ಎಂದಾಗ ನಿರಾಳವಾಗಿ ಉಸಿರಾಡಿದೆ.

ಸ್ವಲ್ಪ ಸಮಯದಲ್ಲೇ ರೂಪ, ನಳಿನಿ ಎಷ್ಟೊಂದು ಹೊಂದಿಕೊಂಡರೆಂದರೆ ಇಬ್ಬರು ಮಾಡಿದ ಅಡಿಗೆ, ತಿಂಡಿಯನ್ನು ಹಂಚಿಕೊಳ್ಳದ ದಿನವೇ ಇರುತ್ತಿರಲಿಲ್ಲವೆನ್ನಬಹುದು. ಎಷ್ಟೋ ಸಾರೆ ಇದು ನಮ್ಮ ಮನೆ ತಿಂಡಿ, ಅಡಿಗೆಯೋ ಅಥವಾ ರೂಪಾ ಮನೆಯದೋ ಎಂಬುದೇ ತಿಳಿಯದಾಗಿ ಬಿಡುತ್ತಿತ್ತು.

ಇಷ್ಟೊಂದು ಗಾಢವಾಗಿದ್ದ ಮೈತ್ರಿ ಸಡಿಲಗೊಳ್ಳತೊಡಗಿದ್ದು ರೂಪಳ ಸ್ನೇಹಿತೆ ರಮ, ರೂಪಳಿಗೆ ಫೋನು ಮಾಡಿದಾಗಲೇ. ಹಿಂದಿನ ರಸ್ತೆಯ ಶಾರದಾ ಮನೆಯಲ್ಲಿ ಫೋನಿದೆ ಎಂಬ ವಿಷಯ

ವನ್ನು ರೂಪ ಯಾವಾಗ ಸಂಪಾದಿಸಿದಳೋ ತಿಳಿಯದು. ಫೋನಿರುವ ವಿಚಾರ ನಮಗೇ ತಿಳಿದಿರಲಿಲ್ಲ. ಫೋನು ಕರೆ ಬಂದಾಗ ರೂಪ ಕೆಲಸಕ್ಕೆ ಹೊರಟು ಹೋಗಿದ್ದಳು.

“ನಿಮ್ಮ ಮನೆಯಲ್ಲಿ ಬಾಡಿಗೆಗಿರುವವರಿಗೆ ಫೋನು ಬಂದಿದೆಯಂತೆ” ಎಂದು ಹುಡುಗ ಬಂದು ಹೇಳಿದಾಗ “ಅವರಿಲ್ಲ ಕೆಲಸಕ್ಕೆ ಹೋಗಿದ್ದಾರೆ” ಎಂದು ನಳಿನಿ ತಾನೇ ಹೋಗಿ ರಿಸೀವ್ ಮಾಡಿದಳು. ರೂಪ ಕೆಲಸದಿಂದ ಬರುವ ವೇಳೆಗೆ ನಳಿನಿ ತಲೆನೋವೆಂದು ಮಲಗಿದ್ದಳು. ಆಫೀಸಿನಿಂದ ಬಂದನಂತರ ರೂಪ-ರಮೇಶ್ ಹೊರಗೆ ಹೋದವರು ಹಿಂದಿರುಗಿದಾಗ ರಾತ್ರಿಯಾಗಿತ್ತು. ನಳಿನಿ, ರೂಪಳಿಗೆ ಫೋನ್ ಬಂದ ವಿಚಾರ ತಿಳಿಸಲಾಗಲಿಲ್ಲ. ಮಾರನೆಯದಿನ ಪುನಃ ರೂಪಳ ಸ್ನೇಹಿತೆ ರಮ ಫೋನು ಮಾಡಿದಳು. ಸರಿ, ಏನೋ ಅರ್ಜೆಂಟ್ ಇರಬೇಕೆಂದು ನಳಿನಿ ತಾನೇ ಹೋಗಿ ಮಾತನಾಡಿದಾಗ ಅತ್ತ ಕಡೆಯಿಂದ, “ಅಲ್ರೀ ನಿನ್ನೆ ಫೋನು ಮಾಡಿ ನಿಮ್ಮನೆ ಬಾಡಿಗೆಗಿರುವವರಿಗೆ ವಿಷಯ ತಿಳಿಸಿ ಅಂತಾ ಹೇಳಿದ್ದೆ. ನಿಮಗೆ ಅಷ್ಟೂ ಮಾಡಲಿಕ್ಕೆ ಆಗಲಿಲ್ಲವೇನ್ರೀ? ಎಂಥಾ ಇರ್ರೆಸ್ಪಾನ್ಸಿಬಲ್ ನೀವು” ಹಾಗೇ ಹೀಗೇ ಎಂದು ಬೈದಾಗ ನಳಿನಿಗೂ ರೇಗಿಹೋಯಿತು. ತನಗೆ ಹುಷಾರಿಲ್ಲದಿದ್ದುದರಿಂದ ಅವರನ್ನು ನೋಡಲಾಗಲಿಲ್ಲ ಎಂಬ ಸಮಜಾಯಿಷಿಯನ್ನು ಆಕೆ ಕೇಳಿಸಿಕೊಳ್ಳುವ ತಾಳ್ಮೆಯೂ ಇಲ್ಲದೆ ಏನೇನೋ ಮಾತನಾಡತೊಡಗಿದಾಗ ನಳಿನಿಗೂ ರೇಗಿ ಹೋಗಿ ಫೋನಿಟ್ಟು ಬಂದಳು.

ಸಂಜೆ ರೂಪ ಬಂದಾಗ ವಿಷಯ ತಿಳಿಸಿ ದಯವಿಟ್ಟು ಕ್ಷಮಿಸಿ, ನಿಮಗೆ ವಿಷಯ ತಿಳಿಸಲಾಗಲಿಲ್ಲವೆಂದಾಗ, “ಅಯ್ಯೋ ಬಿಡ್ರಿ, ಪ್ರಪಂಚವೇನೂ ಮುಳುಗಿಹೋಗಲಿಲ್ಲ,” ಎಂದು ಹೇಳಿಬಿಟ್ಟಳು ರೂಪ.

ಆದರೂ ಒಂದು ಭಾನುವಾರ ರೂಪಳ ಸ್ನೇಹಿತಳೇ ಮನೆಗೆ ಬಂದಾಗ ಮಹಡಿಯ ಮೇಲೆ ನಿಂತು ಇಬ್ಬರೂ ಏನೋ ಮಾತನಾಡಿಕೊಳ್ಳುತ್ತಿದ್ದುದನ್ನು ನೋಡಿದ ನಳಿನಿಗೆ ತನ್ನನ್ನೇ ನೋಡಿ ಬಹುಶಃ ಮಾತನಾಡಿಕೊಳ್ಳುತ್ತಿರಬಹುದು ಎಂಬ ಸಂಶಯ ಹೆಡೆಯಾಡತೊಡಗಿತು.

**‘ದ್ವಂದ್ವ’**

ಪ್ರತಿಯೊಂದು ಮುಗುಳ್ನಗುವಿಗೂ
ಒಂದೊಂದು ಮಲ್ಲಿಗೆ ಹೂ
ಅರಳುತ್ತದೆ.
ಪ್ರತಿಯೊಂದು
ಕಣ್ಣೀರ ಬಿಂದುವಿಗೂ
ಒಂದೊಂದು ಸ್ವಾತಿ ಮುತ್ತು
ಉದುರುತ್ತದೆ!!

• **ಆರ್. ಚಂದ್ರಕುಮಾರ್**

ಮಾರನೆಯ ದಿವಸ, “ಗ್ಯಾಸ್‌ನವನು ಬರಬಹುದು ಸ್ವಲ್ಪ ತೆಗೆದಿರಿಸಿರಿ” ಎಂದು ಹೇಳಿದ ರೂಪ ಖಾಲಿ ಸಿಲಿಂಡರ್ ಇಟ್ಟು ಹೊರಟು ಹೋಗಿದ್ದಳು. ಆತುರದಲ್ಲಿ ನಳಿನಿ ಹಣವನ್ನು ತೆಗೆದುಕೊಳ್ಳಲಿಲ್ಲ. ರೂಪಳೂ ಕೊಡುವುದನ್ನು ಮರೆತಳು. ಗ್ಯಾಸ್‌ನವ ಬಂದು ರಶೀದಿ ಕೊಟ್ಟಾಗ ವಿಧಿಯಿಲ್ಲದೆ ನಳಿನಿಯೇ ಹಣ ಕೊಡಬೇಕಾಯಿತು.

ಸಂಜೆ ರೂಪ ಬಂದಾಗ ವಿಷಯ ತಿಳಿಸಿ, ನೋಡಿ ತಾನೇ ಹಣ ಕೂಡಾ ಕೊಟ್ಟಿದ್ದೇನೆ ಎಂದು ನಳಿನಿ ಹೇಳಿದಾಗ “ಹೌದಲ್ಲಾ, ಹೊರಡುವ ಆತುರದಲ್ಲಿ ಮರೆತೆಹೋಯ್ತು, ಕೊಡ್ತೇನೆ,” ಎಂದು ಹೇಳಿಹೋದಳು. ಎಂಟು ದಿವಸ ಕಳೆದರೂ ಹಣ ಕೊಡುವುದನ್ನು ಮತ್ತೆ ಮರೆತಳು. ಇದೇನು ಬೇಕೆಂದೇ ರೂಪ ಹೀಗೆ ಮಾಡುತ್ತಿದ್ದಾಳೋ ಇಲ್ಲಾ ಕೆಲಸದ ತರಾತುರಿಯ ಮರೆವೆಯೋ ಎಂದು ಯೋಚಿಸಿದ ನಳಿನಿ, “ನೋಡ್ರಿ ಅವಳ ಧಿಮಾಕು, ಹಣ ಕೊಟ್ಟು ಸಿಲಿಂಡರ್ ತೆಗೆದಿರಿಸಿದರೂ ಅದರ ಹಣ ಕೊಡಬೇಕೆಂಬ ಪರಿಜ್ಞಾನ ಕೂಡಾ ಇಲ್ಲ,” ಎಂದು ರೇಗಾಡಿದಳು.

“ನೋಡು ನಳಿನಿ, ಇಬ್ಬರೂ ದುಡಿಯುವವರು. ಹೊರಡುವ ಆತುರದಲ್ಲಿ ಮರೆತಿರಬಹುದು” ಎಂದು ನಾನೇ ಸಮಜಾಯಿಷಿ ನೀಡಿದೆನಾದರೂ ಇಬ್ಬರ ಸ್ನೇಹ ಏಕೋ ಹಳಹಳಿಸುತ್ತಿರುವ ವಾಸನೆ ಮೂಗಿಗೆ ಬಡಿದು, ಇನ್ನು ರೂಪ ಪರವಹಿಸಿ ಮಾತನಾಡಿದರೆ ಇನ್ನೇನಾದರೂ ಅಪಾರ್ಥ ಕಲ್ಪಿಸಿಕೊಂಡಾಳು ಎಂದು ಸುಮ್ಮ

ನಾದೆ.

ಧೋಭಿಯವನನ್ನು ನಾವೇ ಗೊತ್ತು ಮಾಡಿದ್ದೆವು. ಹಲವಾರು ಬಾರಿ ಅವರ ಮಡಿಮಾಡಿದ ಬಟ್ಟೆಯನ್ನು ಆ ಧೋಭಿ ನಮ್ಮ ಮನೆಯಲ್ಲಿಯೇ ಕೊಟ್ಟು ಹೋಗುತ್ತಿದ್ದನು. "ಏನ್ ಅಮ್ಮಾವ್ರೆ ಅವರು ಯಾವಾಗ ಬಂದರೂ ಸಿಗೋದಿಲ್ಲ, ನೀವೇ ದುಡ್ಡಿದ್ರೆ ಕೊಟ್ಬಿರಿ, ಆಮೇಲೆ ಇಸ್ಕೊಳ್ಳಿ" ಎಂದಾಗ ನಳಿನಿ ಕೆಲವು ಸಾರೆ ಹಾಗೇ ಮಾಡಬೇಕಾಗುತ್ತಿತ್ತು.

"ಇದೆಂತಾದ್ರಿ ಈ ಕೆಲಸ, ಪ್ರತಿಯೊಂದಕ್ಕೂ ನಾವೇ ಜವಾಬ್ದಾರರಾಗೋಕ್ಕೆ ನಮಗೇನು ತೀಟೆ?" ಎಂದು ನಳಿನಿ ತನ್ನ ಕೋಪವನ್ನು ತೋಡಿಕೊಂಡಳು.

"ನೋಡು ಪಾಪ, ಬಾಡಿಗೆಯನ್ನು ನಿಯತ್ತಿನಿಂದ ತಿಂಗಳಾಗೋದಕ್ಕೆ ಮುಂಚೇನೇ ಕೊಟ್ಟುಬಿಡ್ತಾರೆ. ಅದೂ ಅಲ್ದೆ, ಅವರಿಂದ ಯಾವ ತರಹದ ತೊಂದರೆಯೂ ಇಲ್ಲ, ಮಕ್ಕಳು-ಮರಿಗಳಿದ್ರೆ ಅವರದೇ ತೊಂದರೆ. ಅದು ಕಿತ್ತು ಹಾಕು, ಇದು ಒಡೆದು ಹಾಕು.... ಅಂಥಾ ತೊಂದರೆ ಯಾವುದು ಇಲ್ಲ ಅಲ್ವಾ?" ಎಂದೆ.

"ಆದರೆ, ಆ ತೊಂದರೆ ಸಧ್ಯಕ್ಕಿಲ್ಲ. ಈ ರೀತಿಯ ತೊಂದರೆಗಳನ್ನು ನುಂಗೋಕೂ ಆಗ್ದು ಅನುಭವಿಸೋಕೂ ಆಗ್ದು ಆ ರೀತಿಯಾಗಿದೆ. ಇವರ ಮನೆಗೆ ಬರುವ ಹಾಲಿನವ, ಧೋಭಿ, ಗ್ಯಾಸಿನವರಿಗೆಲ್ಲಾ ಉತ್ತರ ಹೇಳಬೇಕು. ಅವರು ಹಣ ಚುಕ್ತಾಮಾಡಲಿಲ್ಲವೆಂದರೆ ನಾನು ಕೊಡಬೇಕು. ಇವರಿಗೆ ಬರುವ ಫೋನ್‌ಗಳಲ್ಲಿ ಮಾತನಾಡಬೇಕು. ಬಯ್ದರೆ ಬೈಸಿಕೊಳ್ಳಬೇಕು. ಇದ್ಯಾವುದ್ರೀ ನಮಗೆ ಈ ಹಣೆಬರಹ? ದಿನ ಬೆಳಗಾದ್ರೆ ನಮ್ಮನೆ ಕೆಲ್ಸ ನಾವು ಮಾಡಿಕೊಳ್ಳೋದ್ರ ಜತೆಗೆ ಅವರ ಮನೆ ಕೆಲ್ಸಾನೂ ನಾನೇ ಮಾಡಬೇಕಿದೆ, ಇನ್ನು ಮುಂದೆ ಇವರಿಗೆ ಮಕ್ಕಳು ಮರಿಗಳಾದ್ರೆ ಇಲ್ಲೇ ಬಿಟ್ಟು 'ಸ್ವಲ್ಪ ನೋಡ್ಕೊಳ್ರಿ' ಅಂತಾ ಕೆಲಸಕ್ಕೆ ಹೊರಟರೆ ಅದೂ ನಾವೇ ಮಾಡಬೇಕು" ಎಂದು ರೇಗಾಡಿದಳು.

'ಮನೆ ಕಟ್ಟಿನೋಡು, ಬಾಡಿಗೆಗೆ ಕೊಟ್ಟು ನೋಡು' ಎಂಬಂತಾಗಿತ್ತು ನಮ್ಮ ಸ್ಥಿತಿ. ಇದೆಲ್ಲಿಯ ತಾಪತ್ರಯ ಎಂದು ನನಗೂ ಯೋಚಿಸುವಂತಾಯಿತು.

ಸಂಜೆ ಶಿವು ಬಂದಾಗ "ನೆರೆ-ಹೊರೆ ಆಗ್ತಾರೆ ಅಂತಾ ಬಾಡಿಗೆಗೆ ಕೊಟ್ಟು ಬರೇ ಹೊರೆಯಾದರಲ್ಲಾ" ಎಂದು ನಳಿನಿ ತನ್ನ ಅಳಲನ್ನು ತೋಡಿಕೊಂಡಳು.

"ಬಿಡ್ರಿ, ಇದಕ್ಕೆಲ್ಲಾ ಯಾಕೆ ಯೋಚಿಸ್ತೀರಾ? ಬೆಳಗಿನಿಂದ ಸಂಜೆಯವರೆವಿಗೂ ಇಲ್ಲೇ ಇದ್ದು ಜಗಳ ಕಾಯೋರಿಗಿಂತ, ಮರೆಯಾಗಿ ಹೊರಟು ಹೋಗುವ ಇವರೆಷ್ಟೋ ವಾಸಿ ಅಲ್ವಾ?" ಎಂದ.

"ನಿಮಗೇನ್ರಿ ನನ್ನ ಕಷ್ಟ ಗೊತ್ತು, ಎರಡು ದಿವಸ ಇಲ್ಲಿ ಬಂದು ಇದ್ದು ನೋಡಿ," ಎಂದು ದಬಾಯಿಸಿದಳು. ಈಗ ಶಿವುಗೆ ಏಕಾದರೂ ಈ ಸಲಹೆ ಕೊಟ್ಟೆನೋ ಎನಿಸಿರಬೇಕು. ಮಾತೇ ಆಡದೆ ಕಾಫಿ ಕುಡಿದು ಮೇಲೆದ್ದು- "ಒಂದ್ ಕೆಲ್ಸ ಮಾಡಿ, ಇವರನ್ನು ಬಿಡಿಸಿ ಬೇರೆಯವರಿಗೆ ಬಾಡಿಗೆಗೆ ಕೊಟ್ಟರೆ ಹೇಗೆ?" ಎಂದಾಗ, ಈಗಿರುವವರನ್ನು ಯಾವ ಕಾರಣ ಹೇಳಿ ಬಿಡಿಸುವುದು ಎಂಬ ಸಮಸ್ಯೆ ಎದುರಾಯಿತು.

ಹಾಗೂ ಹೀಗೂ ಒಂದೆರಡು ತಿಂಗಳು ಕಳೆದೇ ಹೋಯಿತು. ಇದ್ದಕ್ಕಿದ್ದಂತೆ ಒಂದು ಭಾನುವಾರ ಬೆಳಿಗ್ಗೆ ಮಹೇಶ್ ಬಂದು, "ಸಾರ್ ಒಂದು ವಿಷಯ ನಿಮಗೆ ತಿಳಿಸಿರಲಿಲ್ಲ, ಅದು ನಮ್ಮ ಸಂಸಾರಕ್ಕೆ ಸಂಬಂಧಪಟ್ಟ ವಿಷಯ ಅಂತಿಟ್ಕೊಳ್ಳಿ. ಆದರೂ ಈಗ ಹೇಳಲೇಬೇಕಾದ ಸಂದರ್ಭ ಬಂದಿದೆ. ಮುಂದಿನ ತಿಂಗಳು ಮನೆ ಬಿಟ್ಟುಬಿಡ್ತಾ ಇದ್ದೇವೆ. ನಮ್ಮ ಮಾವನವರಿಗೆ ಇವಳೊಬ್ಬಳೇ ಮಗಳು. ಅವರ ಅತಿಯಾದ ಪ್ರೀತಿಯಿಂದ ಏನೋ ಒಂದು ಮಾತು ಹೇಳಿದರು. ನನ್ನ ಸ್ವಾಭಿಮಾನಕ್ಕೆ ಪೆಟ್ಟು ಬಿದ್ದಂತಾಗಿ ಬೇರೆ ಮನೆ ಮಾಡಿಕೊಳ್ಳುವುದೇ ವಾಸಿ ಅಂತಾ ಬಂದುಬಿಟ್ಟೆವು. ಆದರೆ ವಯಸ್ಸಾದ ಅವರನ್ನು ನೋಡಿಕೊಳ್ಳೋರಿಲ್ದೆ ಬಹಳ ಪೇಚಾಡ್ತಾ ಇದ್ದಾರಂತೆ. ಈಗ್ಗೆ ಮೂರು ದಿವಸದ ಹಿಂದೆ ಅವರ ನೆರೆಮನೆಯಾತ ನಮ್ಮ ಆಫೀಸಿನ ಬಳಿ ಸಿಕ್ಕಿದರು. 'ನೋಡಿ ನಾನು ನನ್ನ ಮಗಳು- ಅಳಿಯನಿಗೋಸ್ಕರ ಮನೆಕಟ್ಟಿಸಿದೆವು. ಕಷ್ಟ ಕಾಲದಲ್ಲಿ ಆಸರೆ ಆಗ್ತಾರೆ

ಅನ್ನೋ ಭರವಸೆಯಿತ್ತು. ಮನೆ ಅಂದ ಮೇಲೆ ಒಂದು ಮಾತು ಬರುತ್ತೆ ಹೋಗುತ್ತೆ. ಮಗಳೂ ಕೂಡಾ ಈ ರೀತಿ ನಿರ್ಧಾರತೊಗೊಂಡು ಹೊರಟು ಹೋಗೋದಾ?' ಎಂದು ಅಲವತ್ತುಕೊಂಡರಂತೆ. ಎಷ್ಟಾದರೂ ಪಾಪ, ವಯಸ್ಸಾದವರು. ನಾವೇ ಸೋತರೂ ಪರವಾಗಿಲ್ಲವೆಂದು ಅವರ ಯೋಗಕ್ಷೇಮ ವಿಚಾರಿಸಿಕೊಂಡು ಬರೋಣವೆಂದು ಹೋದಾಗ ಪುನಃ ಅಲ್ಲೇ ಬಂದಿರಲು ಬಲವಂತಪಡಿಸಿದರು. ಮಾನವೀಯವಾಗಿಯೂ ಯೋಚನೆ ಮಾಡಬೇಕಲ್ಲಾ ಸಾರ್. ಅಲ್ಲಿಗೆ ಹೊರಟುಬಿಡ್ತಾ ಇದ್ದೇವೆ," ಎಂದು ಸುಮ್ಮನಾದರು.

"ಹೇಗಪ್ಪಾ ಹೀಗೆ ನಿಂತ ಕಾಲಮೇಲೆ ಮನೆ ಬಿಟ್ಟರೆ ನಿಮ್ಮ ಅಡ್ವಾನ್ಸ್ ಹಣ ಹೇಗೆ ಹೊಂದಿಸೋದು?"

"ಅಯ್ಯೋ ಬಿಡಿ ಸಾರ್, ಅದಕ್ಯಾಕೆ ಯೋಚನೆ? ಬೇರೆ ಬಾಡಿಗೆಯವರು ಬಂದನಂತರ ಅವರಿಂದ ಪಡೆದು ಹಣಕೊಡಿ. ನೀವೇನೂ ಹಣದ ವ್ಯವಸ್ಥೆ ಮಾಡಲು ತೊಂದರೆ ತೊಗೋಬೇಡಿ," ಅಂದಾಗ ನಾನು ಹ್ಞೂ ಅನ್ನದೆ ವಿಧಿ ಇರಲಿಲ್ಲ. ನಳಿನಿಯೂ ಅಡಿಗೆಯಮನೆ ಬಾಗಿಲಲ್ಲಿ ನಿಂತು ಕೇಳಿಸಿಕೊಂಡಿದ್ದಳು.

ಅವರು ಬಿಟ್ಟುಹೋಗುವ ದಿನ ನಳಿನಿ ಮಂಕಾಗೇ ಇದ್ದಳು. "ಇಷ್ಟು ದಿವಸ ಅವರಿಂದ ತೊಂದರೆ ಅನ್ನುತ್ತಿದ್ದೆಯಲ್ಲಾ?" ಎಂದು ರೇಗಿಸಿದೆ. ಸುಮ್ಮನಿದ್ದಳು. ಆದರೂ ಈ ಸಾರೆ ಉದ್ಯೋಗದಲ್ಲಿರುವ ಹೆಂಗಸರಿಗೆ ಬಾಡಿಗೆಗೆ ಕೊಡಬಾರದೆಂದೇ ನಿರ್ಧರಿಸಿದೆವು.

ಕಡೆಗೆ ಶಿವುನೇ ಮತ್ತೊಬ್ಬರನ್ನು ಕರೆತಂದ. ಚಂದ್ರು ಬ್ಯಾಂಕ್ ಉದ್ಯೋಗಿ, ಹೆಂಡತಿ ರೋಹಿಣಿಗೆ ಉದ್ಯೋಗವಿಲ್ಲ. ಈಗ ನಳಿನಿ-ರೋಹಿಣಿ ಎಷ್ಟೊಂದು ಅನ್ಯೋನ್ಯವಾಗಿದ್ದಾರೆಂದರೆ, ಸಂಜೆ ನಾನು ಚಂದ್ರು ಆಫೀಸಿನಿಂದ ಮನೆಗೆ ಬಂದು ಕರೆದರೂ ನಳಿನಿ-ರೋಹಿಣಿಯರ ಮಾತು ಮುಗಿದಿರುವುದೇ ಇಲ್ಲ! ●

---

**ಬೇ**ಸಿಗೆ ಬಂತೆಂದರೆ ಸಾಕು. ಅಮೆರಿಕದ ನ್ಯೂಹೆವನ್ ಕನೆಕ್ಟಿಕೆಟ್ ಹತ್ತಿರದ ವೆಸ್ಟ್‌ವಿಲೆ ಎಂಬ ಜಾಗದಲ್ಲಿ ವಿಚಿತ್ರ ಅಂಗಡಿಯೊಂದು ತಲೆ ಎತ್ತುತ್ತದೆ. ಮಾಲಿಕನೇ ಇಲ್ಲದ ತರಕಾರಿ ಅಂಗಡಿ ಅದು. ಒಬ್ಬಾತ ಹಿತ್ತಲಲ್ಲಿ ತಾನೇ ಬೆಳೆಸಿದ ಟೊಮೇಟೋ ಹಣ್ಣುಗಳು, ಸೌತೆಕಾಯಿ ಮತ್ತು ಹಸಿರು-ಹಳದಿ ಬಣ್ಣದ ಸ್ಕ್ವಾಷ್ (ಒಂದು ರೀತಿಯ ತುಪ್ಪದ ಹೀರೇಕಾಯಿ ಜಾತಿಯದು), ದೊಣ್ಣ ಮೆಣಸಿನಕಾಯಿ (Bell pepper) ಇತ್ಯಾದಿಗಳನ್ನು ತನ್ನ ಮನೆಯ ಮುಂದೆ ನಾಲ್ಕಾರು ಟೇಬಲ್ಲುಗಳನ್ನು ಜೋಡಿಸಿ ಅವುಗಳ ಮೇಲಿಡುತ್ತಾನೆ. ಅಲ್ಲಿಯೇ, ಒಂದು ಮುಚ್ಚಳವಿರುವ ಪೆಟ್ಟಿಗೆಯ ತುಂಬ ಚಿಲ್ಲರೆಗಳನ್ನೂ ಸುರಿಯುತ್ತಾನೆ. ಪಕ್ಕದಲ್ಲೊಂದು ದರಪಟ್ಟಿ. ಆ ಟೊಮೇಟೋದ ಗಾತ್ರವೇ ಅದ್ಭುತ. ತೂಕ ಒಂದೊಂದರದೂ ಒಂದೆರಡು ಪೌಂಡು! ಜನ ತಮಗೆ ಬೇಕಾದ ತರಕಾರಿ ತೂಕಮಾಡಿ ತೆಗೆದುಕೊಂಡು ಅದಕ್ಕೆ ಸರಿಯಾದ ಹಣವನ್ನು ಆ ತೆರೆದ ಪೆಟ್ಟಿಗೆಯಲ್ಲಿ ಹಾಕಿ, ಚಿಲ್ಲರೆ ಬರುವಂತಿದ್ದರೆ ಅದನ್ನು ಅಲ್ಲಿಂದ ತೆಗೆದುಕೊಂಡು ಹೋಗುತ್ತಾರೆ.

ಆ ಅಂಗಡಿಯ ಮಾಲಿಕ ಮತ್ತು ಆತನ ಹೆಂಡತಿ ಇಬ್ಬರೂ ಬೇರೆಡೆ ಕೆಲಸಕ್ಕೆ ಹೋಗುವವರು. ಮನೆಯಲ್ಲಿ ಬೇರೆ ಯಾರೂ ಇಲ್ಲ. ಹೀಗಾಗಿ ಈ ಉಪಾಯ.

ನ್ಯೂ ಹೆವನ್‌ನಲ್ಲಿ ನಾನಿದ್ದುದು ೨೫ ವರ್ಷ. ಆ ಅಂಗಡಿ ಪ್ರಾರಂಭವಾಗಿಯೂ ಸರಿಸುಮಾರು ಅಷ್ಟೇ ವರ್ಷಗಳಾಗಿವೆ. ಒಮ್ಮೆಯೂ ಅಂಗಡಿಯ ಮಾಲಿಕ ಹಣ ಹೆಚ್ಚು ಕಡಿಮೆ ಇದೆ ಎಂದಾಗಲಿ, ಯಾರೋ ಹಣ ಹಾಕದೇ ತರಕಾರಿ ಎತ್ತಿಕೊಂಡೊಯ್ದಿದ್ದಾರೆಂದಾಗಲಿ ದೂರಿದ್ದು ನನ್ನ ಗಮನಕ್ಕೆ ಬಂದಿಲ್ಲ.

ನಮ್ಮಲ್ಲಾಗಿದ್ದರೆ?

● "ಮಾಧವಪ್ರಿಯೆ"

ಸ್ಥಳನಾಮ

# 'ಮುಂಬಯಿ' ಹೆಸರು ಬಂದದ್ದು ಹೀಗೆ...

• ಸೋನಿ




**ಬಾಂ**ಬೆ... ಬೊಂಬೈ... ಬಂಬೈ... ಮುಂಬೈ... ಎಂದೆಲ್ಲ ಕರೆಯಲ್ಪಡುವ ಆ ಬೃಹನ್ಮುಂಬಯಿ ನಗರಿಗೆ 'ಮುಂಬಯಿ' ಎಂಬುದೇ ಸರಿಯಾದ ಹಾಗೂ ಸೂಕ್ತವಾದ ಹೆಸರು ಎಂದು ಈಗ ಮಹಾರಾಷ್ಟ್ರದ ಜನ ಅಭಿಪ್ರಾಯಕ್ಕೆ ಬಂದಿದ್ದಾರೆ. ಸರಕಾರಿ ಕಡತಗಳಲ್ಲೂ ಆಡಳಿತಾತ್ಮಕ ವ್ಯವಹಾರಗಳಲ್ಲೂ 'ಮುಂಬಯಿ'ಯೇ ಈಗ ರಾರಾಜಿಸುತ್ತಿದೆ.

ಮುಂಬಯಿ ಎಂಬ ಹೆಸರಿಗೊಂದು ಇತಿಹಾಸವನ್ನೂ ಮರಾಠಿ ಸ್ಥಳನಾಮ ತಜ್ಞರು ಹೇಳುತ್ತಾರೆ. ಅವರ ಪ್ರಕಾರ ನಗರ ದೇವತೆ 'ಮುಂಬಾದೇವಿ'ಯಿಂದಾಗಿ ಈ ಹೆಸರು ಬಂತು.

" 'ಮುಂಬಯಿ' ಎಂಬುದೇ ನಿಜವಾದ ಉಚ್ಚಾರ. ಬಾಂಬೆ, ಬೊಂಬಾಯಿಗಳೆಲ್ಲ ವಿದೇಶಿ ಉಚ್ಚಾರಗಳು. ಆಯಾ ಕಾಲಘಟ್ಟಗಳಲ್ಲಿ ಇನ್ನೂ ಅನೇಕ ರೀತಿಯ ಉಚ್ಚಾರಗಳು ಇದ್ದವು. ಆಯಾ ಉಚ್ಚಾರಕ್ಕೆ ತಕ್ಕಂಥ ಒಂದೊಂದು ಘಟನೆಯೂ ಅವುಗಳೊಂದಿಗೆ ತಳಕು ಹಾಕಿಕೊಂಡಿತು," - ಇದು ಬಹ್ವಂಶ ಇತಿಹಾಸಕಾರರ ಅಭಿಪ್ರಾಯ.

ಈ 'ಬಾಂಬೆ' ಎಂಬ ಹೆಸರು ಮೂಲತಃ ಪೋರ್ತುಗೀಜ್‌ನ 'ಬುಲನ್-ಬಹ್ಯ' (ಒಳ್ಳೆಯ ಆಖಾತ) ಎಂಬುದರಿಂದ ಹುಟ್ಟಿಕೊಂಡದ್ದಂತೆ. ಹದಿನಾರನೆಯ ಶತಮಾನದ ವಿದೇಶೀ ಪ್ರವಾಸಿಗರ ದಿನಚರಿಯ ಪುಟಗಳಲ್ಲಿ ಈ ಹೆಸರು 'ಬೊಂಬ್ಯಾನ,' 'ಬೊಂಬಾಯ್,' 'ಬೊಂಬಾಂ' ಮುಂತಾಗಿ ಕಾಣಿಸಿಕೊಂಡಿದೆ. ಇವೆಲ್ಲ ಮುಂದೆ ಆಂಗ್ಲೀಕರಣಗೊಂಡು 'ಬಾಂಬೆ' ಹುಟ್ಟಿಕೊಂಡಿರಬೇಕು. ೧೬೭೭ರಲ್ಲಿ ಮೊಟ್ಟಮೊದಲ ಬಾರಿಗೆ ರೂಪಾಯಿ ನಾಣ್ಯವೊಂದರ ಮೇಲೆ 'ಬಾಂಬೆ' ಮುದ್ರಿಸಲ್ಪಟ್ಟದ್ದು ದಾಖಲೆಗಳಿಂದ ಗೊತ್ತಾಗುತ್ತದೆ.

ಆದರೆ ಸಾಮಾನ್ಯವಾದ ಒಂದು ನಂಬಿಕೆಯ ಪ್ರಕಾರ (ಹಾಗೂ 'ಎಡ್ವರ್ಡ್ಸ್ ಗೆಜೆಟಿಯರ್' ಮತ್ತು ಜೆರ್ಸನ್ ಡ ಕುನ್ಹಾ ಅವರ 'ದಿ ಒರಿಜಿನ್ ಆಫ್ ಬಾಂಬೆ'ಯಲ್ಲಿ ಉಲ್ಲೇಖಿಸಲ್ಪಟ್ಟಂತೆ) ನಗರ ದೇವತೆ 'ಮುಂಬಾದೇವಿ'ಯಿಂದಾಗಿಯೆ 'ಮುಂಬಯಿ' ಎಂಬ ಹೆಸರು ಬಳಕೆಯಲ್ಲಿ ಬಂತು.

ಹಾಗಾದರೆ ಈ 'ಮುಂಬಾದೇವಿ' ಯಾರು? ಆಕೆಯ ದೇವಾಲಯ ಸ್ಥಾಪಿಸಲ್ಪಟ್ಟಿದ್ದು ಯಾವಾಗ?

ಈಗಿನ ವಿ.ಟಿ (ವಿಕ್ಟೋರಿಯಾ ಟರ್ಮಿನಸ್) ಪ್ರದೇಶದ ಸಮೀಪವೇ ಹಳೆಯ ಕೋಟೆಯ ಅಳಿದುಳಿದ ಕಟ್ಟಡಗಳಿವೆ. ಅದರಾಚೆಗೆ ಸ್ವಲ್ಪ ದೂರದಲ್ಲಿ ಘಣಸಿ ತಾಲಾಬ್ ಅಥವಾ ಗಿಬೆಟ್‌ರ ಕೆರೆ. ೧೪ನೆಯ ಶತಮಾನದ ಮಧ್ಯಾವಧಿಯಲ್ಲಿ ಮುಬಾರಕ್ ಶಾ ಎಂಬ ದಾಳಿಖೋರ ದೊರೆ ಮುಂಬಯಿ ದ್ವೀಪದಿಂದ ತನ್ನ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಂಡ ನಂತರ ಈ ದೇವಾಲಯ ಅಲ್ಲಿ ನಿರ್ಮಾಣವಾಯಿತೆಂದು ಇತಿಹಾಸಕಾರರು ಹೇಳುತ್ತಾರೆ.

ಮುಬಾರಕ್ ಶಾ ಅದೆಷ್ಟು ಕ್ರೂರಿ ಎಂದರೆ ಮುಂಬಯಿ ಪ್ರದೇಶದ ಮೂಲ ನಿವಾಸಿಗಳಾದ ಕೋಳೀ ಜನ ಆತನನ್ನು 'ಮುಬಾರಾಕ್ಷಸ'ನೆಂದೇ ಕರೆಯತೊಡಗಿದರು. ಕೋಳೀ ಜನ "ಮುಬಾನನ್ನು ಕೊಲ್ಲು ಆಯಿ" ಎಂದು ಪ್ರಾರ್ಥಿಸಿಕೊಂಡರಂತೆ. ಅವರ ಬಿನ್ನಹಕ್ಕೆ ದೇವಿ ಮನ್ನಣೆ ಇತ್ತಳೇನೋ ಎಂಬಂತೆ ಸಾಂಕ್ರಾಮಿಕ ರೋಗವೊಂದಕ್ಕೆ ಬಲಿಯಾದ ಮುಬಾರಕ್ ಶಾ. ಇದರಿಂದ ಆ ಭಾವುಕ ಭಕ್ತರು "ಮುಬಾನ ಮುಗಿಸಿದ ಆಯಿ" (ತಾಯಿ) ಎಂದು ಕುಣಿದಾಡಿದರಂತೆ. ಅದೇ ಬರಬರುತ್ತ 'ಮುಬಾಯಿ' ಎನಿಸಿಕೊಂಡು 'ಮುಂಬಾಯಿ' 'ಮುಂಬಯಿ' ಆಯಿತಂತೆ.

ಇನ್ನೂ ಒಂದು ಕಥೆ ಬೇರೆಯ ಸಂಗತಿಯನ್ನೇ ಸಾರುತ್ತದೆ. ಮುಂಗಾ ಎಂಬೊಬ್ಬ ಬೆಸ್ತ. ಕೋಳೀ ಜನಾಂಗದವನೇ. ಆತನೇ ಘಣಸಿ ತಾಲಾಬ್ ಬಳಿ ಈ ದೇವಾಲಯ ಕಟ್ಟಿಸಿದನಂತೆ. ಹೀಗಾಗಿ ಅದಕ್ಕೆ 'ಮುಂಗಾಚಿ ಆಯಿ ದೇವಳ' ಅಥವಾ ಮುಂಗಾನ ತಾಯಿಯ ಗುಡಿ ಎಂಬ ಅಡ್ಡ ಹೆಸರು ಬಂತು. ಅದು 'ಅಂಬಾ'ಳ (ಪಾರ್ವತಿ) ದೇವಾಲಯ. ಅಂತೆಯೆ 'ಮುಂಗಾಚಿ ಅಂಬಾ ಆಯಿ' ಎಂಬುದಾಗಿಯೂ ಜನ ಕರೆಯತೊಡಗಿದರು. ಈ 'ಮುಂಗಾಚಿ ಅಂಬಾ ಆಯಿ'ಯೇ ಕಾಲ ಕ್ರಮೇಣ 'ಮುಂಬಾಯಿ' - 'ಮುಂಬಯಿ' ಆಗಿರಬೇಕು ಎನ್ನುವ ಗುಂಪೂ ಇದೆ.

ಮುಂಬಯಿಯ ಸುಪ್ರಸಿದ್ಧ ಮಹಾಲಕ್ಷ್ಮಿ ಪ್ರದೇಶದಲ್ಲಿ ಥಾಕಜಿ ದಾದಾಜಿ ಎಂಬಾತ ದೇವಾಲಯವೊಂದನ್ನು ಕಟ್ಟಿಸಿದನಂತೆ. ಇಂದಿಗೂ ಈ ಗುಡಿಯನ್ನು 'ಥಾಕ್ಲೇಶ್ವರ'ನೆಂದೇ ಕರೆಯಲಾಗುತ್ತದೆ. ಹಾಗೆಯೇ ಪರೇಳ್‌ದಲ್ಲಿ ಮಂಕೋಜಿ ಎಂಬ ಸಾಮಂತ ಕಟ್ಟಿಸಿದ ಗುಡಿಯಲ್ಲಿರುವ ವಿಗ್ರಹ 'ಮಂಕೇಶ್ವರ'ನೆಂದೇ ಗುರುತಿಸಲ್ಪಡುತ್ತದೆ.

'ಮುಂಬಯಿ' ಎಂಬ ಹೆಸರು ಕೂಡ ಒಂದು ಅಪಭ್ರಂಶ ರೂಪವೇ ಆಗಿರಬೇಕೆಂದು ವಾದಿಸುವ ಜನರೂ ಇದ್ದಾರೆ. 'ಮಹಾ-ಅಂಬಾ-ಆಯಿ'ಯೇ (ಅಥವಾ 'ಮಹಮ್ಮಾಯಿ' ಎಂದು ನಾವನ್ನುವುದಿಲ್ಲವೇ....) 'ಮುಂಬಯಿ' ಆಯಿತು ಎಂಬುದು ಅವರ ತರ್ಕ.

ಏನೇ ಇರಲಿ- ಈ 'ಮುಂಬಯಿ' ಎಂಬುದು 'ಬಾಂಬೆ' ಅಥವಾ 'ಬೊಂಬಾಯಿ'ಗಿಂತ ಹೆಚ್ಚು ಪ್ರಿಯವೆನಿಸುವ ಹೆಸರು, ಅಲ್ಲವೆ?

(ಆಧಾರ: 'ಸ್ಯಾಟರ್ಡೆ ಟೈಂಸ್'ನಲ್ಲಿ ಪ್ರಕಟವಾದ ಸಿಫ್ರಾ ಸ್ಯಾಮ್ಯುಯಲ್ ಲೆಂಟನ್‌ರ ಲೇಖನ)

---

'ಸಾಕ್ಷಾತ್ಕಾರ'ವನ್ನು ಕಾಗೆಗೆ ಹೋಲಿಸಬೇಕಾಗುತ್ತದೆ. ಯಾಕೆಂದರೆ ಅದು ಕೊಳವೊಂದರ ಬಳಿಯೇ ಕುಳಿತಿದ್ದರೂ ದಾಹ ಹಿಂಗಿಸಿಕೊಳ್ಳಲೆಂದು ಹಾರಿ ಬೇರೊಂದು ಜಲಾಶಯವನ್ನು ಅರಸತೊಡಗುತ್ತದೆ. ಆದರೆ ಅಂಥ ಯಾವುದೇ ನೀರ್‌ತಾಣ ಕಾಣದೇ ನಿರಾಶೆಯಿಂದ ಮತ್ತೆ ಮೊದಲಿನ ಕೊಳಕ್ಕೇ ಹಿಂತಿರುಗುತ್ತದೆ.

– 'ಪದ್ಮ ಸಂಭವ'ದಿಂದ

---

"ಕನಸುಗಳು ನನಸಾಗಬೇಕಾದರೆ ಜನರ ಸತತ ಪ್ರಯತ್ನ ಅವಶ್ಯ"

# ಒಂಟಿಗಾಲಿನ ಓಟಗಾರ: ಟೆರಿಫಾಕ್ಸ್

• ವನಮಾಲಾ ರಂಗನಾಥರಾವ್

**ಕ**ಳೆದ ವರ್ಷ ಸಪ್ಟೆಂಬರ್ ೧೩ರಂದು ಕೆನಡಾದ ಫ್ರೆಡರಿಕ್‌ಟನ್ ಎಂಬ ಊರಿನಲ್ಲಿ ಪೇಟೆಯ ಕಡೆ ಹೊರಟಿದ್ದೆವು. ಹತ್ತಾರು ಜನ ಯುವಕರು, ಬಾಲಕ ಬಾಲಕಿಯರು, ಪ್ರೌಢವಯಸ್ಕರು, ವೃದ್ಧರು ಮ್ಯಾರಥಾನ್ ಮಾದರಿಯ 'ಓಟ' ಓಡುತ್ತಿರುವುದನ್ನು ಕಂಡೆ. ಕುತೂಹಲದಿಂದ ನನ್ನ ಮಗ ಗೋಪಾಲನನ್ನು ಕೇಳಿದೆ, "ಅವರೇಕೆ ಓಡುತ್ತಿದ್ದಾರೆ?" ಎಂದು. ಅವನು, "ಅಮ್ಮಾ ಇದು 'ಮ್ಯಾರಥಾನ್ ಆಫ್ ಹೋಪ್' ಅಂತ. ಟೆರಿಫಾಕ್ಸ್ ಎಂಬ ಯುವಕ ಈ ಓಟಕ್ಕೆ ಕಾರಣ. ಕ್ಯಾನ್ಸರ್ ರೋಗಕ್ಕೆ ಬಲಿಯಾಗಿ ತನ್ನ ಬಲಗಾಲನ್ನು ಕಳೆದುಕೊಂಡ. ಕೃತಕಕಾಲನ್ನು ಜೋಡಿಸಿದ್ದರು. ಅಂತಹ ಪರಿಸ್ಥಿತಿಯಲ್ಲಿಯೇ ಕ್ಯಾನ್ಸರ್‌ರೋಗಕ್ಕೆ ಮದ್ದು ಕಂಡುಹಿಡಿಯುವ ಸಂಶೋಧನೆಗಾಗಿ ಸಾವಿರಾರು ಮೈಲು ಓಡಿ ಹಣ ಸಂಗ್ರಹ ಮಾಡಿದ. ಅವನೀಗ ಇಲ್ಲ. ಆದರೆ ಅವನ ನೆನಪಿಗಾಗಿ ಪ್ರತಿವರ್ಷ ಜನ ಓಡಿ, ಹಣ ಸಂಗ್ರಹಿಸಿ, ಕ್ಯಾನ್ಸರ್ ರೋಗದ ಸಂಶೋಧನೆಗಾಗಿ ಕೊಡುತ್ತಾರೆ," ಎಂದ.

ಟೆರಿಫಾಕ್ಸ್‌ನ ಬಗ್ಗೆ ಇನ್ನಷ್ಟು ತಿಳಿಯುವ ಬಯಕೆ ಬಲವಾಯಿತು. ಇದೊ, ಇಲ್ಲಿದೆ ಅವನ ಸಾಹಸಗಾಥೆ.

ಕೆನಡಾದೇಶದ ಮಾನಿಟೋಬಾ ಪ್ರಾಂತ್ಯದ ವಿನಿಪೆಗ್ ಎಂಬಲ್ಲಿ ರಾಲಿಫಾಕ್ಸ್ ಹಾಗೂ ಬೆಟ್ಟಿಗೆ ಎರಡನೆಯ ಮಗನಾಗಿ ೧೯೫೮ರ ಜುಲೈ ೨೮ರಂದು ಹುಟ್ಟಿದ ಟೆರಿಫಾಕ್ಸ್. ಪ್ರೀತಿಯಿಂದ ಎಲ್ಲರೂ 'ಟೆರಿ' ಎಂದು ಕರೆಯುತ್ತಿದ್ದರು. ೧೯೬೬ರಲ್ಲಿ ತಂದೆ ತಾಯಿ, ಮಕ್ಕಳೊಂದಿಗೆ ವ್ಯಾಂಕೊವರಿನ ಹೊರಭಾಗದಲ್ಲಿರುವ ಕಾಕಿಟ್ಲಾಮ್ ಎಂಬಲ್ಲಿ ನೆಲೆಸಿದರು.

ಚಿಕ್ಕಂದಿನಿಂದಲೇ 'ಟೆರಿ'ಗೆ ಹಿಡಿದದ್ದನ್ನು ಸಾಧಿಸುವ ಸ್ವಭಾವ, ಶಾಲೆಗೆ ಹೋಗಲು ಮೊದಲುಮಾಡಿದಾಗ ಬ್ಯಾಸ್ಕೆಟ್‌ಬಾಲ್ ಆಡಬಯಸಿದ. ಆಟಕ್ಕೆ ಎತ್ತರವಾಗಿರಬೇಕು. ಆದರೆ ಟೆರಿ ಸ್ವಲ್ಪ ಕುಳ್ಳ. ಕೋಚ್, "ಟೆರಿ, ನೀನು ಕುಸ್ತಿ ಆಡುವುದು ಒಳ್ಳೆಯದು," ಎಂದು ಸಲಹೆ ಮಾಡಿದ. ಆದರೆ ಹುಡುಗ, "ನಾನು ಆಡಿದರೆ ಬ್ಯಾಸ್ಕೆಟ್‌ಬಾಲನ್ನೇ ಆಡುವುದು," ಎಂದಂದು ಅಭ್ಯಾಸ ಮಾಡತೊಡಗಿದ. ಅದಕ್ಕಾಗಿ ಬೇಕಾದ ತರಬೇತಿಯ ಅಂಗವಾಗಿ ಇಷ್ಟ ಇಲ್ಲದೆ ಹೋದರೂ ದಿನವೂ ಸ್ವಲ್ಪ ಹೊತ್ತು ಓಡತೊಡಗಿದ. ಸಮಯ ದೊರೆತಾಗಲೆಲ್ಲ ಗೆಳೆಯನೊಂದಿಗೆ ಬ್ಯಾಸ್ಕೆಟ್‌ಬಾಲ್ ಎಸೆಯುವ ಎಡೆಬಿಡದ ಅಭ್ಯಾಸದಿಂದಾಗಿ ತಾನು ಓದುವ ಹೈಸ್ಕೂಲಿನಲ್ಲಿ ಅತ್ಯುತ್ತಮ ಆಟಗಾರನೆಂಬ ಪ್ರಶಸ್ತಿ ಪಡೆದ- ಗೆಳೆಯ ಡೌಗ್ ಅಲ್‌ವರ್ಡ್‌ನೊಂದಿಗೆ.

'ಟೆರಿ'ಯದು ಪ್ರೇಮಮಯ ಸಂಸಾರ. ಮನೆಯ ಜನರೆಲ್ಲ ಛಲವಾದಿಗಳು. ತಂದೆ, ತಾಯಿ, ಮಕ್ಕಳು ಒಬ್ಬರಿಗೊಬ್ಬರು ಸಹಕರಿಸುವರು. ಟೆರಿ, ಅವನೇ ಹೇಳಿಕೊಳ್ಳುವಂತೆ 'ಸಾಮಾನ್ಯ' ಮೇಧಾವಿಯಲ್ಲ. ಆದರೆ ಏನನ್ನಾದರೂ ಮಾಡಬೇಕೆಂದಲ್ಲಿ ಅದನ್ನು ಪಟ್ಟುಬಿಡದೆ ಸಾಧಿಸುವ. ಈ ಗುಣದಿಂದಾಗಿಯೇ ಕಷ್ಟಪಟ್ಟು ಅಭ್ಯಾಸಮಾಡಿ, ತರಗತಿಯಲ್ಲಿ ಪ್ರತಿವರ್ಷ

(ವಿವಿಧ ಮೂಲಗಳಿಂದ)

ಉತ್ತಮದರ್ಜೆಯಲ್ಲಿ ತೇರ್ಗಡೆ ಹೊಂದುವ.

ಹೈಸ್ಕೂಲು ಮುಗಿಸಿದ ಟೆರಿ ಕಾಲೇಜು ಸೇರಿದ. 'ಕಿನೆಸಿಯೊಲಜಿ' (ಅಂಗಚಲನ ಶಾಸ್ತ್ರ) ಓದತೊಡಗಿದ. ದೈಹಿಕ ಶಿಕ್ಷಣವನ್ನು ಹೇಳಿಕೊಡುವವನಾಗುವ ಬಯಕೆ ಅವನದು.

೧೯೭೭ರಲ್ಲಿ, ಕಾಲೇಜಿನ ಮೊದಲವರ್ಷದಲ್ಲಿ 'ಟೆರಿ'ಗೆ ಬಲಗಾಲಿನಲ್ಲಿ ನೋವುಕಾಣಿಸಿಕೊಂಡಿತು. ಮೊದಮೊದಲು ಅಲಕ್ಷ್ಯ ಮಾಡಿದ. ನೋವು ತಡೆಯಲು ಅಸಾಧ್ಯವಾದಾಗ ತಂದೆ ಮಗನನ್ನು ಆಸ್ಪತ್ರೆಗೆ ಕರೆದೊಯ್ದರು. ಪರೀಕ್ಷಿಸಿದ ವೈದ್ಯರು "ಅದು ಎಲುಬಿನ ಕ್ಯಾನ್ಸರ್" ಎಂದರು. ದೇಹದ ಬೇರೆ ಭಾಗಗಳಿಗೆ ಕ್ಯಾನ್ಸರ್ ಹಬ್ಬುವುದನ್ನು ತಡೆಗಟ್ಟಲು ಕೂಡಲೇ ಕ್ರಮ ಕೈಗೊಂಡರು. ಬಲಗಾಲಿನ ಮಂಡಿಯ ಮೇಲ್ಭಾಗದಿಂದ ಆರು ಇಂಚಿನಷ್ಟು ಕಾಲನ್ನು ಕತ್ತರಿಸಿದರು.

ಟೆರಿ ಅತ್ತೂ ಅತ್ತೂ ದಣಿದ. ಅನಂತರ, ಏನೇ ಬಂದರೂ ಎದುರಿಸಿ ಮುನ್ನುಗ್ಗಲು ನಿಶ್ಚಯಿಸಿದ. ತನ್ನ ಅಂಗವಿಕಲತೆಯನ್ನಾತ ಎದುರಿಸಿದ ಬಗೆ ಅದ್ಭುತವಾದುದು.

ಕಾಲನ್ನು ಕತ್ತರಿಸಿದ ಮೂರುವಾರಗಳ ನಂತರ ಕೃತಕ ಕಾಲನ್ನು ಜೋಡಿಸಲಾಯಿತು. ಈಗ ಆತ ಸಾವಕಾಶವಾಗಿ ನಡೆಯುವ ಪ್ರಯತ್ನ ಮಾಡತೊಡಗಿದ. ಆಸ್ಪತ್ರೆಯಲ್ಲಿ ಮಲಗಿ ಉಪಚಾರ ಹೊಂದುತ್ತಿರುವಾಗ ಬೇರೆ ಕ್ಯಾನ್ಸರ್ ರೋಗಿಗಳನ್ನು ವೀಕ್ಷಿಸಿದ. ಹಲವು ರೋಗಿಗಳು ದಾರುಣವಾದ ನೋವು ಅನುಭವಿಸುತ್ತಿರುವಾಗಲೂ ನಗುವ, ನಗಿಸುವ ಸಹನೆ, ಧೈರ್ಯ ಹೊಂದಿರುವುದನ್ನು ನೋಡಿ ಅಚ್ಚರಿಗೊಂಡ. ಈ ವ್ಯಥೆಯನ್ನು ಕಡಿಮೆ ಮಾಡುವ ದಾರಿ ಇದೆಯೇ? ಎಂದು ಚಿಂತಿಸಿದ.

ಕ್ಯಾನ್ಸರ್ ಮಹಾರೋಗಕ್ಕೆ ಮದ್ದು ಕಂಡುಹಿಡಿಯಬೇಕು. ಹೇಗೆ? ಈ ವಿಭಾಗದಲ್ಲಿ ಹೆಚ್ಚಿನ ಸಂಶೋಧನೆ ನಡೆಯಬೇಕು. ಅದಕ್ಕಾಗಿ ಬಹಳಷ್ಟು ಖರ್ಚು ಬರುತ್ತದೆ. 'ಹಾ! ಇದೀಗ ಹೊಳೆಯಿತು ಉಪಾಯ. ನಾನು ಹಣ ಸಂಗ್ರಹ ಮಾಡುವೆ. ಅದಕ್ಕಾಗಿ ಓಡುವೆ. ಕೆನಡಾದ ಒಂದು ತುದಿಯಿಂದ ಇನ್ನೊಂದು ತುದಿಗೆ ಓಡಿ ಹಣ ಸಂಗ್ರಹಿಸುವೆ. ಕೆನಡಾದ ಪ್ರಜೆಗಳು ತಲೆಗೊಂದೊಂದು ಡಾಲರಿನಂತೆ ಕೊಟ್ಟರೂ ಮಿಲಿಯಗಟ್ಟಲೆ ಹಣ ಕೂಡೀತು. ನಾನು ಮಾಡಿಯೇ ತೀರುವೆ' ಎಂದು ನಿರ್ಧರಿಸಿದ. ಹೀಗೆ "ಮ್ಯಾರಥಾನ್ ಆಫ್ ಹೋಪ್"ನ ಉದಯವಾಯಿತು.



"ಈ ನೋವು, ಈ ಸಂಕಟ ನಿಲ್ಲಬೇಕು. ಅದಕ್ಕಾಗಿ ನನ್ನ ಶಕ್ತಿಮೀರಿ ಪ್ರಯತ್ನಿಸುವೆ. ಕ್ಯಾನ್ಸರ್ ರೋಗಿಗಳಿಗೆ 'ಪವಾಡ'ಗಳನ್ನು ನಂಬುವ ಜನರ ಬೆಂಬಲ ಬೇಕು. ನಾನು ಕನಸುಗಾರನಲ್ಲ, ನನ್ನೀ ಪ್ರಯತ್ನದಿಂದ ಕ್ಯಾನ್ಸರ್ ವಾಸಿಯಾಗುವ ಮದ್ದು ದೊರಕುವ ನಂಬಿಕೆ ನನಗಿಲ್ಲ. ಆದರೆ ನಾನು ಪವಾಡಗಳನ್ನು ನಂಬುವೆ" ಎಂಬೀ ಒಕ್ಕಣೆಯೊಂದಿಗೆ ಹಲವು ಪ್ರತಿಷ್ಠಿತ ಕಂಪನಿಗಳಿಗೆ ತನ್ನ 'ಓಟ'ವನ್ನು ಸ್ಪಾನ್ಸರ್ ಮಾಡಲು ಕೇಳಿ ಕಾಗದ ಬರೆದ.

ಫೋರ್ಡ್, ಇಂಪೀರಿಯಲ್ ಆಯಿಲ್ ಮತ್ತು ಆದಿದಾಸ್ ಕಂಪನಿಯವರು 'ಟೆರಿ'ಯ ಕಾಗದಕ್ಕೆ ಸ್ಪಂದಿಸಿದರು. ವ್ಯಾನ್, ಪೆಟ್ರೋಲ್, ಓಡುವ ಷೂ ಇವುಗಳಿಗಾಗಿ ಹಣ ಸಹಾಯ ಮಾಡುವ ಭರವಸೆ ಇತ್ತರು. 'ಕೆನೆಡಿಯನ್ ಕ್ಯಾನ್ಸರ್ ಸೊಸೈಟಿ'ಯವರು ಓಟಕ್ಕೆ ಸಂಪೂರ್ಣ ಪ್ರೋತ್ಸಾಹವಿತ್ತರು.

ಟೆರಿ ತನ್ನ ಗೆಳೆಯ ಡೌಗ್ ಆಲ್‌ವರ್ಡ್‌ನನ್ನು ಕೇಳಿದ, "ನಾನು ಕೆನಡಾದ ಒಂದು ತುದಿಯಿಂದ ಇನ್ನೊಂದು ತುದಿಗೆ ಓಡಲು ನಿರ್ಧರಿಸಿದ್ದೇನೆ. ಜೊತೆ ಕೊಡುವಿರಾ?" ಗೆಳೆಯ ಮರುಮಾತಾಡದೆ ಸಂತೋಷದಿಂದ ಒಪ್ಪಿಗೆ ಇತ್ತ. ತಾಯಿ ಮಗನ ಈ ನಿರ್ಧಾರ ತಿಳಿದು ಹೌಹಾರಿದಳು. ಆಕೆ "ಒಂದೇ ಕಾಲಿನಿಂದ ಹೇಗೆ ಓಡುವಿ ಮಗು?" ಎಂದಳಾದರೂ ಅವನ ಸ್ವಭಾವವನ್ನು ಅರಿತ ತಂದೆತಾಯಿಗಳು ಈ ಕಾರ್ಯದಲ್ಲಿ ಸಹಕರಿಸತೊಡಗಿದರು. ದಾರಿಯ ಖರ್ಚಿಗಾಗಿ ಗರಾಜ್‌ಸೇಲ್, ಡ್ಯಾನ್ಸ್ ಕಾರ್ಯಕ್ರಮಗಳನ್ನು ಏರ್ಪಡಿಸಿ ಹಣ ಕೂಡಿಸತೊಡಗಿದರು.

ಅನಂತರದ ಎರಡೂವರೆ ವರ್ಷಗಳಲ್ಲಿ ಟೆರಿ ಓಟಕ್ಕೆ ಬೇಕಾದ ಶಕ್ತಿ ಸಂಪಾದನೆ ಮಾಡತೊಡಗಿದ. ತರಬೇತಿಯಲ್ಲಿ ಬ್ಯಾಸ್ಕೆಟ್‌ಬಾಲ್ ಆಡುವುದೂ ಒಂದು. ಗಾಲಿಕುರ್ಚಿಯಲ್ಲಿ ಕುಳಿತೇ ಆಡತೊಡಗಿದ. ಕುರ್ಚಿಯನ್ನು ದೂಡುವಾಗ ಕೈಗೆ ಗಾಯವಾಗಿ ರಕ್ತ ಸುರಿಯುತ್ತಿತ್ತು. ಆದರೂ ಬಿಡದೆ ಆಡಿ ಅದರಲ್ಲಿ ಪರಿಣತಿ ಸಾಧಿಸಿದ. ಎಡ್ಮಂಟನ್ ಎಂಬಲ್ಲಿ ನಡೆದ ರಾಷ್ಟ್ರೀಯ ಗಾಲಿಕುರ್ಚಿ ಆಟದಲ್ಲಿ ಭಾಗವಹಿಸಿ, ತನ್ನ ತಂಡಕ್ಕೆ ಟ್ರೋಫಿ ಗಳಿಸಿದ.

೧೯೭೯ರ ಫೆಬ್ರವರಿಯಿಂದ ಓಟಕ್ಕಾಗಿ ಅಭ್ಯಾಸ ಮಾಡತೊಡಗಿದ. ಮೊದಮೊದಲು ದಿನಕ್ಕೆ ೫೦೦ ಮೀಟರ್ ಓಡುತ್ತಿದ್ದ. ಅನಂತರ ದಿನಕ್ಕೆ ೧೦೦೦ ಮೀಟರ್ ಆಯಿತು. ಒಂದು ವಾರ ಕಳೆಯುವಷ್ಟರಲ್ಲಿ ೧೫೦೦ ಮೀಟರ್ ಓಡತೊಡಗಿದ. ಕೃತಕ ಕಾಲಿನಿಂದ ಓಡುವುದು ಬಲು ಪ್ರಯಾಸಕರವಾಗಿತ್ತು. ಗಾಯವಾಗಿ ರಕ್ತ ಸುರಿಯುತ್ತಿತ್ತು. ಆದರೆ ಟೆರಿಯದು ದೃಢನಿರ್ಧಾರ. ಟ್ರೈನಿಂಗ್ ಮುಗಿಯುವ ಹೊತ್ತಿಗೆ ೩೦೦೦ ಮೈಲು ಓಡಿದ್ದ.

ಎಪ್ರಿಲ್ ೧೨, ೧೯೮೦ರಂದು ಟೆರಿ ನ್ಯೂಫೌಂಡ್‌ಲ್ಯಾಂಡ್‌ನ ಸೇಂಟ್ ಜಾನ್ ಎಂಬಲ್ಲಿ ತನ್ನ ಕೃತಕ ಕಾಲನ್ನು ಅಟ್ಲಾಂಟಿಕ್ ಸಾಗರದಲ್ಲಿ ಅದ್ದಿ ತನ್ನ ಓಟವನ್ನು ಪ್ರಾರಂಭಿಸಿದ. ದಿನವೊಂದಕ್ಕೆ ಸರಾಸರಿ ೨೬ ಮೈಲು ಓಡುತ್ತಿದ್ದ. ಓಡುವುದು ಸುಲಭವಾಗಿರಲಿಲ್ಲ. ತನ್ನ ಚೆನ್ನಾಗಿರುವ ಕಾಲನ್ನು ಮುಂದೆ ಇಟ್ಟು ಭುಜವನ್ನು ಎತ್ತರಿಸಿ, ಕೃತಕ ಕಾಲನ್ನು ಎತ್ತಿಡುತ್ತಿದ್ದ. ಕಾಲನ್ನು ಜೋಡಿಸಿದ ಸ್ಥಳದಲ್ಲಿ ಒಮ್ಮೊಮ್ಮೆ ಕೀಲು ಕಳಚುತ್ತಿತ್ತು. ಓಡಿ ಓಡಿ ಎದೆನೋವು ಬರುತ್ತಿತ್ತು. ಆದರೂ ಟೆರಿ ಓಟವನ್ನು ನಿಲ್ಲಿಸಲಿಲ್ಲ.

ಜನ ಈ ಒಂಟಿಗಾಲಿನ ಓಟಗಾರನನ್ನು ನೋಡಿದರು. ದಂಗಾದರು, ಮೆಚ್ಚಿದರು. ಪ್ರೋತ್ಸಾಹಿಸಿ, ಕೈಲಾದ ಸಹಾಯ ಮಾಡಿದರು. ಮಕ್ಕಳು ತಮ್ಮ ತಂದೆತಾಯಿಗಳು ಖರ್ಚಿಗೆಂದು ಕೊಟ್ಟ ಹಣವನ್ನು ದಾನ ಮಾಡಿದರು. ಟೆರಿ ಮತ್ತವನ ಸಹಚರ ಡೌಗ್‌ನನ್ನು ಮನೆಗೆ ಊಟಕ್ಕೆ ಆಹ್ವಾನಿಸಿದರು. ಹೊಟೇಲಿನವರು ಕರೆದು ಪುಕ್ಕಟೆ ರೂಂ ಕೊಟ್ಟು ಸತ್ಕರಿಸಿದರು. ಹಲವರು ಈ ಸಾಹಸಿಯ ಗುಣಗಾನ ಮಾಡಿ ಕವಿತೆ ಕಟ್ಟಿ ಹಾಡಿದರು.

ಟೆರಿ ಓಡಿದ, ಸುರಿಯುವ ಮಳೆ, ಬೀಸುವ ಗಾಳಿ, ಕವಿದ ಮಂಜು, ಗದಗುಟ್ಟಿ ನಡುಗಿಸುವ ಚಳಿ, ಉರಿಯುವ ಬಿಸಿಲು ಇವುಗಳನ್ನೂ ಲೆಕ್ಕಿಸದೆ ಓಡಿದ. ದಾರಿಯುದ್ದಕ್ಕೂ ಕಾರಿನ, ಬಸ್ಸಿನ ಜನ ಕಾದು ನಿಂತು ಹಣ ಕೊಟ್ಟರು.

ಹಲವರು ಅವನ ಸಂದರ್ಶನ ಮಾಡಿ ಮಾತುಕತೆ ಆಡಬಯಸುತ್ತಿದ್ದರು. ಪತ್ರಿಕೆಗಳವರು ಪ್ರಶ್ನೆಗೆ ಆತ ಉತ್ತರಿಸಬೇಕಾಗುತ್ತಿತ್ತು. ಭೋಜನಕೂಟಗಳಲ್ಲಿ ಭಾಗವಹಿಸಿ ತನ್ನ ಉದ್ದೇಶವನ್ನು ತಿಳಿಸಿ ಭಾಷಣ ಮಾಡಬೇಕಾಗುತ್ತಿತ್ತು. ಇದೆಲ್ಲದರಿಂದ ಟೆರಿಗೆ ದಿನದ ಕೊನೆಯಲ್ಲಿ ಅತೀವ ಆಯಾಸವಾಗುತ್ತಿತ್ತು.

ಮಕ್ಕಳನ್ನು ನೋಡಿದಾಗ ಟೆರಿ ತಮಾಷೆ ಮಾಡುತ್ತಿದ್ದ: "ನನಗಾಗಿ ಮರುಗಬೇಡಿ. ನೋಡಿ, ನನ್ನ ಈ ಬಲಗಾಲಿಗೆ ಎಷ್ಟೋ ಸಾರಿ ಪೆಟ್ಟು ಬಿದ್ದಿದೆ. ಆದರೆ ನೋವೇ ಆಗುವುದಿಲ್ಲ ಗೊತ್ತೆ?"

ಅಂಟಾರಿಯೋದ 'ಟೊರಾಂಟೋ' ತಲುಪಿದಾಗ ಜನ ಹತ್ತಾರು ಸಾವಿರ ಸಂಖ್ಯೆಯಲ್ಲಿ ಸೇರಿ ಜಯಕಾರ ಮಾಡಿದರು. ತಮ್ಮೀ ವೀರಕುವರನನ್ನು ಸನ್ಮಾನಿಸಿ ಹಣದ ಸುರಿಮಳೆಗೈದರು. ಎಸೆದ ಹಣವನ್ನು ದೊಡ್ಡ ದೊಡ್ಡ ಚೀಲಗಳನ್ನು ಬಾಚಿ ತಂದು ತುಂಬಿದರು.

ದಿನಗಳೆದಂತೆ ಟೆರಿಯ ಬಲಗಾಲ ಮೇಲಿನಿಂದ ರಕ್ತ ಸುರಿಯುವುದು ಹೆಚ್ಚಾಯಿತು. ಜನ 'ಇನ್ನು ಓಡುವುದು ಸಾಕು' ಎಂದರು. ಟೆರಿ ಜಗ್ಗಲಿಲ್ಲ. "ಕ್ಯಾನ್ಸರ್ ವ್ಯಥೆಯನ್ನು ಅನುಭವಿಸುತ್ತಿರುವವರೊಂದಿಗೆ ಹೋಲಿಸಿದರೆ ಇದೇನೂ ಅಲ್ಲ" ಎಂದ. ಅಂದು ೪೨ ಕಿ.ಮೀ. ಓಡಿದ.

ಸಪ್ಟಂಬರ್ ೧, ೧೯೮೦ ರಂದು ೧೪೩ನೇ ದಿನ. ೩೩೩೯ ಮೈಲು ಓಡಿದ ನಂತರ ಟೆರಿ ಓಟ ನಿಲ್ಲಿಸಬೇಕಾಯಿತು. ಈಗ ಕ್ಯಾನ್ಸರ್ ಅವನ ಹೃದಯಕ್ಕೆ ವ್ಯಾಪಿಸಿತ್ತು. ಕಿಮೊಥೆರಪಿ ಮಾಡಿದರೂ ಫಲಕಾರಿಯಾಗಲಿಲ್ಲ. ಜೂನ್ ೨೮, ೧೯೮೧ ರಂದು ತನ್ನ ೨೩ನೇ ಹುಟ್ಟುಹಬ್ಬಕ್ಕೆ ಒಂದು ತಿಂಗಳ ಮೊದಲು ಕೊನೆಯುಸಿರೆಳೆದ. ತನ್ನ ನೋವನ್ನು ಲೆಕ್ಕಿಸದೆ ಪರರ ಹಿತಕ್ಕಾಗಿ ಜೀವ ತೇಯ್ದ ಅಸಮ ಸಾಹಸಿಯನ್ನು ವರ್ಣಿಸಲು ಶಬ್ದಗಳು ಸಾಲವು.

'ಕೆನಡಾದ ಪ್ರಜೆಗಳು ತಲೆಗೊಂದೊಂದು ಡಾಲರ್ ಕೊಡಲಿ' ಎಂಬ ಟೆರಿಫಾಕ್ಸ್‌ನ ಕನಸು ಈಡೇರಿದೆ. ಕೆನಡಾದ ಜನಸಂಖ್ಯೆ ೨೪.೧ ಮಿಲಿಯನ್. ಟೆರಿಫಾಕ್ಸ್ 'ಮ್ಯಾರಥಾನ್ ಆಫ್ ಹೋಪ್'ನ ಹಣ ೨೪.೧೭ ಮಿಲಿಯನ್ ಡಾಲರ್‌ಗಳು!

೧೯೮೧ರಲ್ಲಿ ಮೊದಲಬಾರಿ 'ಟೆರಿಫಾಕ್ಸ್ ರನ್' ಆರಂಭವಾಯಿತು. ಒಂದೇ ಒಂದು ದಿನ ನಡೆಯುವ ಈ ಕಾರ್ಯಕ್ರಮದಲ್ಲಿ ಮಿಲಿಯಗಟ್ಟಲೆ ಹಣ ಸಂಗ್ರಹ ಆಗುತ್ತದೆ. ಪ್ರತಿವರ್ಷ ಸಪ್ಟಂಬರ್ ತಿಂಗಳ ಎರಡನೇ ಭಾನುವಾರದಂದು ಓಟ ಏರ್ಪಡಿಸುತ್ತಾರೆ. ಅಂದು ಕೆನಡಾದಾದ್ಯಂತ ಇರುವ ೩೦೦೦ ಓಟದ ಜಾಗಗಳಿಂದ ೫೦೦,೦೦೦ ಜನ ಆಬಾಲವೃದ್ಧರಾದಿಯಾಗಿ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ.

ಕೆನಡಾ ಒಂದೇ ಅಲ್ಲದೆ ಭಾರತವೂ ಸೇರಿದಂತೆ ಹಲವು ದೇಶಗಳಲ್ಲಿ 'ಟೆರಿಫಾಕ್ಸ್ ರನ್' ಏರ್ಪಡಿಸಿ ಹಣ ಸಂಗ್ರಹ ಮಾಡುತ್ತಾರೆ. ಹಾಗೆ ಶೇಖರಿಸಿದ ಹಣವನ್ನು 'ನ್ಯಾಷನಲ್ ರಿಸರ್ಚ್ ಇನ್ಸಿಟ್ಯೂಟ್ ಆಫ್ ಕೆನಡಾ (NCIC)'ಗೆ ಕೊಡಲಾಗುತ್ತದೆ. ಕ್ಯಾನ್ಸರ್ ರೋಗಕ್ಕೆ ಮದ್ದು ಕಂಡುಹಿಡಿಯಲು ಸಂಶೋಧನೆ ಮಾಡುವವರಿಗೆ ಈ ಸಂಸ್ಥೆ ಹಣ ಸಹಾಯ ಮಾಡುತ್ತದೆ.

೧೯೮೮ರಲ್ಲಿ 'ಟೆರಿಫಾಕ್ಸ್ ರನ್' ಕೆನೆಡಿಯನ್ ಕ್ಯಾನ್ಸರ್ ಸೊಸೈಟಿಯಿಂದ ಹೊರಬಂದು 'ಟ್ರಸ್ಟ್' ಆಯಿತು. ಟೆರಿಯ ತಂದೆತಾಯಿಗಳು ಈ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾವಹಿಸಿ, ಹಣ ಸ್ವಲ್ಪವೂ ಪೋಲಾಗದೆ ಉದ್ದೇಶಿತ ಕಾರ್ಯಕ್ಕೆ ಖರ್ಚಾಗುವಂತೆ ನೋಡಿಕೊಳ್ಳುತ್ತಾರೆ. ವರ್ಷವರ್ಷಕ್ಕೂ ಹಣ ಹೆಚ್ಚಾಗಿ ಹರಿದು ಬರುತ್ತಿದೆ.

ಪರರ ಒಳಿತಿಗಾಗಿ ಬೆನ್ನು ಹುರಿಯನ್ನು ಕೊಯ್ದು ಕೊಟ್ಟ ದಧೀಚಿ, ಹಕ್ಕಿಗಾಗಿ ಪ್ರಾಣತೆರಲು ಸಿದ್ಧನಾದ ಶಿಬಿ ಚಕ್ರವರ್ತಿಯಂತಹ ತ್ಯಾಗಿಗಳ ಗುಂಪಿಗೆ ಸೇರಲರ್ಹನಾದವನು ಟೆರಿಫಾಕ್ಸ್. ಬೇರೊಬ್ಬರ ದುಃಖ, ಸಂಕಟ ಶಮನ ಮಾಡುವ ಸಲುವಾಗಿ ತನಗೆ ಸಾವೇ ಬಂದರೂ ಎದುರಿಸಿ ನಿಂತ ಅನುಪಮ ವೀರ. ಜಗತ್ತಿನ ಯುವಕರಿಗೆ ಆದರ್ಶ. ●

# "ನನಗೊಲಿದ ಗುರೂಜೀ ನಿಮಗೊಲಿಯಲಿ!"

ಡಾ. ಎ. ಚಂದ್ರಶೇಖರ ಉಡುಪ ಅವರು 'ನನಗೊಲಿದ ಗುರೂಜಿ ನಿಮಗೊಲಿಯಲಿ!' ಎಂಬ ಈ ಪುಸ್ತಕದಲ್ಲಿ ತಮ್ಮ ಸಾಧನಾನುಭವದ ಮಿಂಚುನೋಟವನ್ನು ಹರಿಸಿದ್ದಾರೆ. ಈ ಪುಸ್ತಕದ ೬೭, ೬೭ ಹಾಗೂ ೬೮ ನೆಯ ಪುಟಗಳಲ್ಲಿ ಪ್ರಕಟವಾಗಿರುವ ಅಂಶಗಳು ಇಡೀ ಪುಸ್ತಕದ ಸಾರವೇನೋ ಎಂಬಂತಿವೆ. (ಪ್ರಕಾಶಕರು: ವಿವೇಕ ಪ್ರಕಾಶನ, ಡಿವೈನ್ ಪಾರ್ಕ್ ಟ್ರಸ್ಟ್ (ರಿ) ಸಾಲಿಗ್ರಾಮ-೫೭೬೨೨೫ ದ.ಕ.)

ಅದೇ ದಿನ ರಾತ್ರಿ ಕ್ಲಿನಿಕ್‌ನಿಂದ ಬಂದವನೇ ಸ್ನಾನ ಮಾಡಿ ಜಪಕ್ಕೆ ಕುಳಿತೆ. ನೂರು ಬಾರಿ ಜಪಿಸಿದ್ದೆನಷ್ಟೇ. ರೋಗಿಗಳು ಬಂದು ಔಷಧಿಗಾಗಿ ಬಾಗಿಲು ತಟ್ಟಿದರು. ಔಷಧಿ ಕೊಟ್ಟು ಬಂದು ಪುನಃ ಜಪ ಆರಂಭಿಸಿದೆ. ಮತ್ತೊಮ್ಮೆ ಬಾಗಿಲು ಬಡಿದಂತಾಗಿ ಎದ್ದೆ. ವಿಸಿಟ್‌ಗೆ ಕರೆದೊಯ್ಯಲು ಸಮೀಪದ ಹಳ್ಳಿಯ ಗೌಡರು ಬಂದಿದ್ದರು. ವಿಸಿಟ್ಟಿಗೂ ಹೋಗಿಬಂದೆ. ಬೆಳಗ್ಗೆ ಬೇಗ ಎದ್ದು ಜಪಿಸಿದರಾಯಿತೆಂದು ಮಲಗಿದೆ. ಬೇಗ ಎದ್ದು ಜಪ ಆರಂಭಿಸಿದ್ದು ನಿಜ. ಆದರೆ ಇದೇ ಹಾಡು ಮುಂದಿನ ಒಂದೆರಡು ದಿನ ಅಲ್ಲ, ಹತ್ತು ದಿನಗಳಲ್ಲೂ ಇದೇ ಅವಸ್ಥೆ ಆಯಿತು. ಕೈಗೆ ಬಂದ ತುತ್ತು ಬಾಯಿಗೆ ಬರದಂತಾಯಿತು. ಒಮ್ಮೆಯಂತೂ ೯೨೦ ಬಾರಿ ಜಪಿಸಿದ್ದೆ. ಇನ್ನು ಕೆಲವೆ ನಿಮಿಷಗಳಲ್ಲಿ ನನ್ನ ಬಾಳಿನ ಅಮೃತಗಳಿಗೆ ಬರುವುದೆಂದು ಕಾತರಿಸುತ್ತಿದ್ದೆ. ಆದರೆ ಅಷ್ಟರಲ್ಲೆ ಕದ ತಟ್ಟಿದ ಸದ್ದಾಗಿತ್ತು. ಮತ್ತೊಮ್ಮೆ ನಿರಾಸೆಯೇ ಕಾದಿತ್ತು. ಹನ್ನೊಂದನೆಯ ದಿನ ನಾನು ದೃಢ ನಿರ್ಧಾರ ಮಾಡಿದೆ. ಶ್ರೀ ಗುರೂಜಿ ಮನಸ್ಸು ಮಾಡದಿದ್ದರೆ ನನ್ನಿಂದ ಏನೇನೂ ಆಗದೆಂದು ತೀರ್ಮಾನಿಸಿ ಬೆಳಿಗ್ಗೆ ಬೇಗ ಎದ್ದು, ಕಂಬನಿಗರೆದು ಬೇಡಿ ಕಾಡುತ್ತ ಶ್ರೀ ಗುರೂಜೀಗೆ ಸಾಷ್ಟಾಂಗ ನಮನಗಳನ್ನು ಸಲ್ಲಿಸತೊಡಗಿದೆ. ಶ್ರೀ ಗುರೂಜೀ ದರುಶನಕ್ಕಾಗಿ ಮೈಸೂರಿನ ರೂಮಿನಲ್ಲಿರುವಾಗ ನಾನು ಪಟ್ಟಪಾಡಿನ ನೆನಪು ಮರುಕಳಿಸಿತ್ತು. ಇಂದೀಗ ಆ ಜಗಜ್ಜನನಿಯ ದರುಶನಕ್ಕಾಗಿಯೇ ನನ್ನ ಜೀವ ತುಡಿಯುತ್ತಿತ್ತು. ಆ ತಾಯಿಯ ದಿವ್ಯ ದರುಶನವಾಗದೆ ಏನನ್ನೂ ಸೇವಿಸುವುದಿಲ್ಲವೆಂದು ಪಣತೊಟ್ಟೆ ಆದರೆ ನನ್ನ ಗುರೂಜಿಯನ್ನು ಉಪವಾಸ ಕೆಡವಲು ಮನಸ್ಸಾಗದೆ ಒಂದು ಲೋಟ ನೀರನ್ನಷ್ಟೇ ಅವರಿಗರ್ಪಿಸಿ ಕುಡಿದೆ. ಅನ್ನವನ್ನಂತೂ ಅಂದು ಮಾಡಲಿಲ್ಲ. ಕ್ಲಿನಿಕ್‌ಗೆ ಎಂದಿನಂತೆ ಹೋಗಿದ್ದೆ. ನನ್ನ ಕಣ್ಣಂಚಿನಲ್ಲಿ ಕಂಬನಿ ಮಿಡಿಯುತ್ತಿದ್ದುದನ್ನು ಕಂಡ ರೋಗಿಗಳು "ಏನಾಯಿತು ಸರ್? ಮೈ ಹುಷಾರಿಲ್ಲವೆ?" ಎಂದೆಲ್ಲ ಕೇಳಿದ್ದರು. ಕಣ್ಣೊರಿಸಿಕೊಳ್ಳುತ್ತ ನಾನು, "ಹಾಗೇನಿಲ್ಲವಲ್ಲ" ಎಂದಷ್ಟೇ ಉತ್ತರಿಸಿದ್ದೆ. ಒಂದೊಮ್ಮೆ "ನನಗೆ ಆ ಜಗನ್ಮಾತೆ ಬೇಕಪ್ಪ!" ಎಂದಿದ್ದರೆ ಆ ಜನರು ನಕ್ಕು "ಉಡುಪ ಡಾಕ್ಟರರಿಗೆ ಹೆಣ್ಣಿನ ಹುಚ್ಚು ಹಿಡಿದಿದೆ!" ಎಂದೆಲ್ಲ ಅಪಪ್ರಚಾರ ಮಾಡುತ್ತಿದ್ದರೋ ಏನೋ!

## ಅಚ್ಚಳಿಯದ ಪುಟಗಳು

ರಾತ್ರಿ ಕ್ಲಿನಿಕ್‌ನಿಂದ ಬಂದವನೆ ಪುನಃ ಸಾಷ್ಟಾಂಗ ನಮನಗಳನ್ನು ಸಲ್ಲಿಸಿ ಧ್ಯಾನಕ್ಕೆ ಕುಳಿತೆ. "ಹೇ ತಾಯೇ, ನನ್ನ ಈ ದಿನ ನಿನಗೆ ಅರ್ಪಿತ" ಎನ್ನುತ್ತಾ ಗೋಗರೆದೆ. ಕಂಬನಿ ಧಾರಾಕಾರವಾಗಿ ಹರಿಯುತ್ತಲೇ ಇತ್ತು. ಅಷ್ಟು ಅಸಹಾಯಕ ವ್ಯಾಕುಲ ತುಡಿತ ನನ್ನದಾಗಿತ್ತು. ನನ್ನ ವ್ಯಾಕುಲತೆ ಆ ತೀವ್ರತೆಗೇರುವುದನ್ನೇ ನನ್ನ ಗುರೂಜೀ ಕಾದಿದ್ದರೋ ಏನೋ. ಕಾಳಿಕಾಮಂತ್ರ ಜಪ ಮುಂದುವರಿಸಿದೆ. ಮಧ್ಯೆ ಯಾವ ವಿಘ್ನವೂ ಬರದಂತೆ ಕಾಪಾಡಲು ಗಣೇಶದೇವರನ್ನು ಬೇಡುತ್ತಿದ್ದೆ.

ಗುರೂಜೀ ಬೇರೇ. ಅಲ್ಲ, ಗಣೇಶದೇವರು ಬೇರೆ ಅಲ್ಲ ಎಂಬೀ ಸತ್ಯವನ್ನು ನಾನು ತಿಳಿದಿದ್ದರೂ, ನನ್ನ ಬೇಡಿಕೆಗೆ ಬಲ ಹೆಚ್ಚಲೆಂಬುದೇ ನನ್ನ ಇಂಗಿತವಾಗಿತ್ತು. ಅಂತು ಅವರೆಲ್ಲರ ಕೃಪೆಯಿಂದ ೯೯೦ ಬಾರಿ ಜಪಿಸಿದೆ. ರಾಕೇಟನ್ನು ಹಾರಿಸುವಾಗಿನ ಕ್ಷಣಗಳಂತೆ ಮತ್ತೆ ಕಾತರದ ಕ್ಷಣಗಳು ಎದುರಾದವು. ಒಂದೊಂದಾಗಿ ಜಪಿಸುತ್ತ ಹೋದಂತೆ ಎದೆಯೊಳಗಿಂದ ಅವರ್ಣನೀಯ ಆನಂದದ ಕಾರಂಜಿಯೇ ಚಿಮ್ಮಿತು. ೯೯೯ ಆಯಿತು. ೧೦೦೦ವೂ ಆಯಿತು. ಚಿತ್ತದ ಪರದೆ ಹೊಂಬೆಳಕಿನ ಕಾಂತಿಯಿಂದ ಮಿನುಗಿತು. ಅಲ್ಲಿ ಶ್ರೀ ಗುರೂಜಿಯ ಭವ್ಯ ನಿಲುವಿನ ಪೂರ್ಣ ದರುಶನವಾಯಿತು. ಅವರು ಎಡಗೈ ತೋರುಬೆರಳಿನಿಂದ "NotI, butHe" ("ನಾನಲ್ಲ ಅವರು") ಎಂದು ಮೇಲಿರುವವರನ್ನು ತೋರಿಸುತ್ತಿದ್ದರು. ಸಿನೆಮಾ ಚಿತ್ರ ಸರಿದಂತೆ ತಕ್ಷಣ ಮೇಲ್ಗಡೆ ಇರುವ ಪರಮಗುರೂಜೀ ಶ್ರೀ ರಾಮಕೃಷ್ಣರ ಭವ್ಯ ದರುಶನವಾಯಿತು. ಅವರೂ ಮುಗುಳ್ನಗುತ್ತ ಎಡಗೈ ತೋರುಬೆರಳಿನಿಂದ "Not I, but She" ("ನಾನಲ್ಲ ಅವಳು") ಎಂದು ಮೇಲೆ ತೋರುತ್ತಿದ್ದರು. ಆಗಲೇ ಮೇಲ್ಗಡೆ ಇರುವ ಆ ಕಾಳಿ ತಾಯಿಯ ಭವ್ಯ ನಿಲುವು ಗೋಚರಿಸಿತು. ಕಡು ಹಸಿರು ಬಣ್ಣದ ಜರಿ ಸೀರೆ, ಹೆಗಲ ಮೇಲಿನಿಂದ ಕೆಳಗಿಳಿದ ನೀಳ ಕಡು ಕಪ್ಪು ಕೇಶರಾಶಿ, ಥಳಥಳಿಸುವ ಮೂಗುತಿ, ಝಗ ಝಗಿಸುವ ಸುಂದರ ಕಿರೀಟ, ಎದೆ ನಡುಗಿಸುವ ರುಂಡ ಮಾಲೆ, ಬಳಿ ಕರೆಯುವ ಮಂದಸ್ಮಿತೆಯ ಅಭಯ ಹಸ್ತ, ಮೈ ರೋಮಾಂಚನವಾಗಿ ಆನಂದಾಮೃತದ- ಅಭಿಷೇಕವಾದಂತಾಯಿತು. ಧನ್ಯತೆಯ ಕಡಲಲ್ಲಿ ತೇಲುತ್ತ ಕಣ್ತೆರೆದು ಧ್ಯಾನದಿಂದ ಮೇಲೆದ್ದೆ. ಆಗಲೇ ಕಂಬನಿಯಿಂದ ಲುಂಗಿ ಸಂಪೂರ್ಣವಾಗಿ ಒದ್ದೆಯಾಗಿ ನೆಲವೆಲ್ಲ ತೋಯಲ್ಪಟ್ಟಿರುವುದು ತಿಳಿದು ಅದೆಷ್ಟು ಅತ್ತಿರುವೆ ಎಂದು ಆಶ್ಚರ್ಯಪಟ್ಟೆ. ಅದೇನಿದ್ದರೂ ಮೈಸೂರಿನ ಆ ರೂಮಿನಲ್ಲಿನ ೧೧ ದಿನಗಳ ಹೋರಾಟ, ಕ್ಯಾತನಹಳ್ಳಿಯ ಈ ರೂಮಿನಲ್ಲಿನ ಈಗಿನ ೧೧ ದಿನಗಳ ಹೋರಾಟ- ಇವು ನನ್ನ ಬಾಳಿನ ಸುವರ್ಣ ಪರ್ವಗಳು.

ಸಂಗ್ರಹ: **ಹ. ನ. ಕಿರಣಕುಮಾರ್**

---

ಆಶಾವಾದಿ ಮತ್ತು ನಿರಾಶಾವಾದಿ ಇಬ್ಬರಿಂದಲೂ ಮನುಕುಲಕ್ಕೆ ಉಪಕಾರವಾಗಿದೆ. ಆಶಾವಾದಿ ವಿಮಾನವನ್ನು ಕಂಡು ಹಿಡಿದ; ನಿರಾಶಾವಾದಿ ಪ್ಯಾರಾಶೂಟನ್ನು ಶೋಧಿಸಿದ.

ಮನೆಯ ಬಾಗಿಲಿಗೆ ಬಂದವರು ಅಪರಿಚಿತರ್‍ಯಾರೇ ಆಗಿರಲಿ, ಅವರನ್ನು ಸ್ವಾಗತಿಸಿ ಸತ್ಕರಿಸುವುದನ್ನು ಮರೆಯಬೇಡ. ಯಾಕೆಂದರೆ ಹಾಗೆ ಬಂದವರಲ್ಲಿ ನಿಮ್ಮ ಬಾಳಿಗೆ ಬೆಳಕು ನೀಡಬಲ್ಲ ಮಹನೀಯನೂ ಇರಬಹುದು.

**- ಹೀಬ್ರೂಸ್**

ಕೋಪವನ್ನು ಪ್ರೀತಿಯಿಂದ ಜಯಿಸು. ಕೆಟ್ಟತನವನ್ನು ಒಳ್ಳೆಯತನದಿಂದ ಜಯಿಸು. ಜಿಪುಣನನ್ನು ದಾನದಿಂದ ಜಯಿಸು. ಅನೃತವಾಡುವಾತನನ್ನು ಸತ್ಯದಿಂದ ಜಯಿಸು.

**- ಧಮ್ಮಪದ**

# ಅಲ್ಲಿ ಅರಳುವುದಿಲ್ಲ...

• ಹೊರೆಯಾಲ ದೊರೆಸ್ವಾಮಿ

ಉಸಿರು ಬಳಲಿದ ಒಡಲು
ಬಸಿರು ಕುಗ್ಗಿದ ಕಡಲು
ಚಡಿಪಡಿಸುತ್ತಿರುವಾಗ
ತಡವರಿಸುತಿರುವಾಗ
ಅಲ್ಲಿ ಅರಳುವುದಿಲ್ಲ
ಖುಷಿ ಕೊಡುವ ಕಾವ್ಯ.

ಸುಕ್ಕುಗಟ್ಟಿದ ಮನಸು
ಸಿಕ್ಕುಗಟ್ಟಿದ ಕನಸು
ಒಳಗೊಳಗೆ ನರಳುತ್ತ
ಕಡೆಯಿರದ ದಣಿಯುತ್ತ
ಉಸ್ಸೆಂದು ಕೂತಾಗ
ಸೋ ಎಂದು ಸೋತಾಗ
ಅಲ್ಲಿ ಅರಳುವುದಿಲ್ಲ
ಖುಷಿ ಕೊಡುವ ಕಾವ್ಯ.

ಎಳೆಯ ಕಂದನ ತನುವು
ಅರಪಲ್ಲತ್ತಿದ ಮನವು
ಪ್ರೀತಿ ಇಲ್ಲದ ಬದುಕು
ಸಂಪ್ರೀತಿ ಇಲ್ಲದ ಕ್ಷಣವು
ಕ್ಷಣ ಕ್ಷಣವು ಸಿಡಿವಾಗ
ಅನುಕ್ಷಣವು ಮಿಡಿವಾಗ
ಅಲ್ಲಿ ಅರಳುವುದಿಲ್ಲ
ಖುಷಿ ಕೊಡುವ ಕಾವ್ಯ.

ಚೆಲುವೆ ಕಂಗಳ ಕನಸು
ಆಗಲಾರದೆ ನನಸು
ಬಿಕ್ಕುತ್ತ ಬಿಗುಡುತ್ತ



ದುಕ್ಕುತ್ತ ದುಗುಡುತ್ತ
ತಹತಹಿಸುತಿರುವಾಗ
ದಹದಹಿಸುತಿರುವಾಗ
ಅಲ್ಲಿ ಅರಳುವುದಿಲ್ಲ
ಖುಷಿ ಕೊಡುವ ಕಾವ್ಯ.

ಜೀವ ಭಾವದ ನೋವು
ಹೇಳಲಾರದ ಕಾವು
ಸಿಡಿಸಿಡಿಯುತಿರುವಾಗ
ಕಿಡಿ ಕೆದರುತಿರುವಾಗ
ಅಲ್ಲಿ ಅರಳುವುದಿಲ್ಲ
ಖುಷಿ ಕೊಡುವ ಕಾವ್ಯ.

ಎದೆಯ ಗೂಡಿನ ಮಾತು
ನಡೆಯಿರದೆಯೆ ಕೂತು
ಸೋತು ಸೊರಗಿರುವಾಗ
ಹೂತು ಕೂತಿರುವಾಗ
ಅಲ್ಲಿ ಅರಳುವುದಿಲ್ಲ
ಖುಷಿಕೊಡುವ ಕಾವ್ಯ.

ಹೊತ್ತು ಕರಗುವ ಹೊತ್ತು
ಮುತ್ತು ಎರಗಿದ ಕುತ್ತು
ತಕಪಕನೆ ಕುಣಿಯುತ್ತ
ಪಕಪಕನೆ ಅದುರುತ್ತ
ಚದುರತ್ತ ಸರಿವಾಗ
ಮುದುರುತ್ತ ಕೆಡೆವಾಗ
ಅಲ್ಲಿ ಅರಳುವುದಿಲ್ಲ
ಖುಷಿ ಕೊಡುವ ಕಾವ್ಯ.

# ಆ ಕೂಗು ಅವರನ್ನು ದಿಕ್ಕೆಡಿಸಿಬಿಟ್ಟಿತು...

ಕಥೆ



• ಕೃಷ್ಣಮೂರ್ತಿ ಚಂದರ್

**ಚೆ**ಲುವಾಂಬ ಅಗ್ರಹಾರದ ನಾಲ್ಕುನೂರ ಇಪ್ಪತ್ತನೇ ನಂಬರ್ ಮನೇಲಿ ವಾಸವಾಗಿದ್ದ ಪ್ರಾಣೇಶರಾಯರಿಗೆ ಪ್ರತಿ ರಾತ್ರಿ ಹನ್ನೆರಡೂವರೆ, ಒಂದು ಘಂಟೆಯ ಹೊತ್ತಿಗೆ ನೈಟ್ ಶೋ ನೋಡಿ ವಾಪಸಾಗುತ್ತಿದ್ದ ಜನಗಳ ಸದ್ದು ಬರುತ್ತಿದ್ದಂತೆ ಥಕ್ ಅಂತ ಎಚ್ಚರವಾಗುವುದು. "ಗುರೂ, ರಾಘವೇಂದ್ರ, ಕಾಪಾಡಪ್ಪ" ಎನ್ನುತ್ತ ಎದ್ದು ರಾಯರು ದೀಪಹಾಕದೇ ಕಿಟಕಿಯಿಂದ ರಸ್ತೆಯನ್ನೇ ದಿಟ್ಟಿಸುವರು. ಒಂದೆರಡು ಗಳಿಗೆ ಹಾಗೇ ನಿಂತಿದ್ದು ಕಡೆಗೆ ಪಂಚೆಯನ್ನು ಮಂಡಿ ಮೇಲೆ ಕಟ್ಟಿಕೊಳ್ಳುತ್ತ ಬಚ್ಚಲು ಮನೆ ಕಡೆಗೆ ತೆರಳಿ, ಕೈಕಾಲು ತೊಳೆದುಕೊಂಡು ವಾಪಸಾಗುವರು. ಬಂದು, ಅಲ್ಲೇ ಇಟ್ಟಿದ್ದ ನೀರಿನ ಬೋಸಿಯಿಂದ ಹಾಗೆಯೇ ನೀರು ಕುಡಿದು ಪವಡಿಸುವರು. ಇದು ಅವರ ಒಂದು ರೀತಿಯ ದಿನಚರಿಯೇ.

ಪ್ರಥಮ ಏಕಾದಶಿ ದಿನ ರಾಯರು ರಾತ್ರಿ ಫಲಹಾರ ಮಾಡಿ ಮಲಗಿದ್ದರು. ಯಾಕೋ, ಏನೋ, ಅಂದು ಅವರಿಗೆ ಸರಿಯಾಗಿ ನಿದ್ರೆಯೇ ಹತ್ತದೆ ಆಟ ಆಡಿಸುತ್ತಿತ್ತು. "ಪದ್ದೂ, ಪದ್ದೂ" ಅಂತ ರಾಯರು ಧರ್ಮಪತ್ನಿಯನ್ನು ಕರೆದರು. "ಯಾಕೋ ಏನೋ ನಿದ್ರೇನೇ ಕಣ್ಣಿಗೆ ಹತ್ತುತ್ತಿಲ್ಲ ನೋಡು" ಅಂದು ಆಕೆಯ ನಿದ್ರೆಯನ್ನೂ ಹಾಳು ಮಾಡಿದರು. ಪದ್ದಮ್ಮ "ಬೇಡ ಬೇಡಾಂತಂದರೂ ಗೋಳು ಹುಯ್ದುಕೊಂಡು ಕಾಫಿ ಕುಡಿದಿರಿ ಸಾಯಂಕಾಲ, ಈಗ ಅನುಭವಿಸಿ" ಅಂದು ಮಗ್ಗಲಾದರು. "ಅದು ನೆನ್ನೆ ಕಣೇ, ಇವತ್ತು ಸಾಯಂಕಾಲ ಎಲ್ಲಿ ನಾನು ಕಾಫೀನೇ ಕುಡಿದಿಲ್ಲ" ಅಂತ ರಾಯರು ಪರಸಿಸ್ಟ್ ಮಾಡಿದ್ದಕ್ಕೆ ಪದ್ದಮ್ಮ ಆಚೆ ಮಗ್ಗಲಿಂದಲೇ "ಕಾಫೀನೋ, ಟೀನೋ, ಇವತ್ತೋ ನೆನ್ನೇನೋ ಎಲ್ಲಾ ಸರಿಯಾಗಿದೆ. ನನ್ನ ನಿದ್ರೆ ಮಾತ್ರ ಹಾಳುಮಾಡಬೇಡಿ. ದಿನಪೂರ್ತಿ ಏಗಿ ಏಗಿ ಸಾಕಾಗ್‌ಹೋಗಿದೆ," ಅಂದು ರಾಯರ ಬಾಯಿ ಮುಚ್ಚಿಸಿದರು.

ಪ್ರಾಣೇಶರಾಯರು ಹಾಗೇ ಅಂಗಾತ ಮಲಗಿ ಸೂರನ್ನೇ ಬೆಡ್‌ಲೈಟ್‌ನ ಮಂಕು ಮಂಕು ಬೆಳಕಿನಲ್ಲಿ ದಿಟ್ಟಿಸಿದರು. ಮಂಗಳೂರು ಹಂಚಿನ ಮನೆ. ಬಣ್ಣಗೆಟ್ಟ ಹಂಚುಗಳು, ಮರದ ತೊಲೆಗಳು, ಜಂತಿಗಳು, ಹಾಗೆಯೇ ಬೆಳಕಿನ ಕಿಂಡಿಯಿಂದ ಆಕಾಶದಲ್ಲಿ ಸಣ್ಣಗೆ ಹೊಳೆಯುತ್ತಿದ್ದ ಚಂದ್ರನೂ ಕಂಡುಬಂದ. ಪ್ರಾಣೇಶರಾಯರಿಗೆ ಏಕೋ

(ಧಾರವಾಡದ 'ಮನೋಹರ ಗ್ರಂಥಮಾಲಾ' ಪ್ರಕಟಿಸಿದ "ಸಂಬಂಧಗಳು ಮತ್ತು ಇತರ ಕಥೆಗಳು" ಸಂಗ್ರಹದಿಂದ ಸಾಭಾರ.)

ಏನೋ ಆ ಮೂರು ಜನ ಮೂನ್‌ವಾಕ್ ಮಾಡಿದ್ದು ಜ್ಞಾಪಕ ಬಂತು. ಹಾಗೆಯೇ ಪೇಪರೊಂದರಲ್ಲಿ ಅಮೇರಿಕನ್ನರು ನಡೆದದ್ದು ನಾವು ಪುರಾಣ ಹರಿಕಥೆಯಲ್ಲಿ ಕೇಳುತ್ತೇವಲ್ಲ ಆ ಚಂದ್ರ ಅಲ್ಲವೆಂದೂ, ಈ ಚಂದ್ರನೇ ಬೇರೆ, ಅವರು ನಡೆದಾಡಿದ ಮೂನೇ ಬೇರೆ ಎಂದು ಯಾರೋ ಬರೆದಿದ್ದುದು ಜ್ಞಾಪಕಕ್ಕೆ ಬಂದು, ಒಂದು ರೀತಿಯ ಕಸಿವಿಸಿ ಆಯಿತು. ಅಯ್ಯೋ, ಎಲ್ಲಾದರೂ ಹಾಳಾಗಿ ಹೋಗಲಿ ಅಂದುಕೊಂಡು ರಾಯರು ಕಣ್ಣು ಮುಚ್ಚಿಕೊಂಡು ನಿದ್ದೆ ಮಾಡಲು ಪ್ರಯತ್ನಿಸಿದರು.

ಒಂದು ಇಪ್ಪತ್ತು ನಿಮಿಷ ಆದರೂ ಕಳೆದಿರಬೇಕು. ಇನ್ನೇನು ರಾಯರ ಮಂಪರು ಮಂಪರು ಒಳ್ಳೇ ನಿದ್ರೆಗೆ ಅನುವು ಮಾಡಿಕೊಡುವ ಸಮಯ. ಆ ಸರಿ ಹೊತ್ತಿಗೆ ಆಚೆಯಿಂದ 'ಪಾಣಿ', ಪಾಣಿ' ಎಂದು ಯಾರೋ ರಾಯರನ್ನು ಸ್ಪಷ್ಟವಾಗಿ ಕೂಗಿದ್ದು ಕೇಳಿಸಿತು.

ಅವರ ನಿದ್ರೆಯ ಸ್ಥಿತಿಯಿಂದಲೋ ಏನೋ ರಾಯರಿಗೆ ತಾವು ಕೇಳಿಸಿಕೊಂಡಿದ್ದು ನಿಜವೋ, ಸುಳ್ಳೋ ತಿಳಿಯಲಿಲ್ಲ. ಅಯ್ಯೋ ಏನೋ ಹುಚ್ಚುಚ್ಚು ಅನಿಸಿಕೆ ಅಂದುಕೊಂಡು ಆಚೆ ತಿರುಗಿದರು. ಯಾಕೋ ತಡೆಯಲಿಕ್ಕಾಗಲಿಲ್ಲ. ಮನಸ್ಸಲ್ಲೆಲ್ಲಾ ಯಾವುದೋ ಅವ್ಯಕ್ತ ಕಸಿವಿಸಿ. ಬಚ್ಚಲು ಮನೆಗೆ ಹೋದರು. ಕೈಕಾಲು ತೊಳೆದುಕೊಂಡು ಮತ್ತೆ ವಾಪಸ್ಸು ಬಂದು ಮಲಗಿ ಇನ್ನೂ ಹತ್ತು ಹದಿನೈದು ನಿಮಿಷಕೂಡ ಆಗಿರಲಿಲ್ಲ. 'ಪಾಣಿ, ಪಾಣಿ,' 'ಲೋ ಪಾಣಿ' ಅಂತ ಯಾರೋ ಕಾತರದಿಂದ ಮತ್ತೆ ಕೂಗಿದ ಹಾಗಾಯಿತು ಆಚೆಯಿಂದ. ಪ್ರಾಣೇಶರಾಯರಿಗೆ ಒಂದ್ನಿಮಿಷ ಎಚ್ಚರವೇ ಆಗಲಿಲ್ಲ. ಆಚೆನ ಧ್ವನಿ ಒಂದೆರಡು ನಿಮಿಷ ಬಿಟ್ಟು ಮತ್ತೆ 'ಪಾಣಿ, ಪಾಣಿ,' ಅಂದಿತು. ಆಗಲೂ ಒಳಗಡೆಯಿಂದ ಯಾರಾದರೂ ಎಚ್ಚರವಾದ ಚಿಹ್ನೆಯೇ ಕಂಡು ಬಾರದಿದ್ದಾಗ 'ಪ್ರಾಣೇಶರಾವ್, ರೀ ಪ್ರಾಣೇಶರಾವ್' ಅಂತ ಸ್ವಲ್ಪ ಧ್ವನಿ ಎತ್ತರಿಸಿ ಕೂಗಿದ ಹಾಗಾದಾಗಲೇ ರಾಯರಿಗೆ ಮಂಪರಿನಿಂದ ಎಚ್ಚರವಾಯಿತು, ಅಂದರೆ ಸಾವಧಾನವಾಗಲ್ಲ. ಧಡಕ್ಕನೆ ಯಾವುದೋ ದರಿದ್ರ ಸ್ವಪ್ನ ಕಂಡಂತೆ ಬೆದರಿ ಬೆವರುತ್ತಾ ಎದ್ದು ಕೂತು, "ಪದ್ದೂ ಪದ್ದೂ, ಯಾರೋ ನನ್ನ ಹೆಸರು ಹಿಡಿದು ಕೂಗಿದ ಹಾಗಾಯ್ತು ಕಣೆ?" ಅಂದರು. ಪದ್ದಮ್ಮನವರಿಗೆ ಯಾರಾದರೂ ನಿದ್ದೆಯಲ್ಲಿ ಮಧ್ಯೆ ಎಬ್ಬಿಸಿದರೆ ಪ್ರಳಯಾಂತಕ ಸಿಟ್ಟು ಬರುವುದು ಎಲ್ಲರಿಗೂ ತಿಳಿದ ವಿಷಯ. ರಾಯರ ಸ್ವಭಾವ ತಿಳಿದಿದ್ದ ಅವರಿಗೆ ಈ ಸಲ ಅಂತೂ ಸಿಟ್ಟು ಮಿತಿಮೀರಿತ್ತು. "ಇನ್ನಾರು, ನಿಮ್ಮ ತಂದೇನೇ ಇರಬೇಕು. ಹಜಾರದ ಬಾಗಿಲು ತೆಗೆದು ಸೋಫಾದ ಮೇಲೆ ಕೂಡಿಸಿ ಕಾಫೀಗೆ ನೀರಿಡಿ" ಅಂತ ನಿದ್ದೆ ಕಣ್ಣಲ್ಲೇ ರೇಗಿ ಮತ್ತೆ ಮುಸುಕೆಳೆದುಕೊಂಡು ಸಣ್ಣಗೆ ಗೊರಕೆ ಹೊಡೆಯಲು ಪ್ರಾರಂಭಿಸಿದರು. ರಾಯರಿಗೆ ಅವರ ವ್ಯಂಗ್ಯ ಸ್ವಲ್ಪವೂ ತಿಳಿಯದೇ "ನಮ್ಮಪ್ಪ ಅಂತೀಯಾ" ಅಂದರು. ಅವರಿಗೆ ಆತ ಕಾಲವಾಗಿ ಸುಮಾರು ನಲವತ್ತು ವರ್ಷವಾದರೂ ಆಗಿದ್ದುದು ಹೊಳೆಯಲೇ ಇಲ್ಲವೇನೋ. ಹಾಗೇ ಕುಳಿತಿದ್ದಂತೆ ಅಮ್ಮನವರ ವ್ಯಂಗ್ಯ ಅರಿವಾಗಿ ಎದ್ದು ನಿಂತರು. ಮೆಲ್ಲನೆ ಕಿಟಕಿಯ ಬಳಿ ನಿಂತು ಹೊರಗಡೆ ದಿಟ್ಟಿಸಿದರು. ಅರ್ರೇ, ಯಾರೂ ಇಲ್ಲವಲ್ಲ! ಅಂದರೆ ತಮ್ಮ ಹೆಸರು ಕೂಗಿದ್ದುದು ಕನಸೇ? ಆದರೂ ಎಷ್ಟು ಸ್ಪಷ್ಟವಾಗಿ ಕೇಳಿಸಿತಲ್ಲ ತಮಗೆ!! ಮೊದಲು ತಮಗೆ ಬಹಳ ಪರಿಚಯದವರು ಕರೆದಂತೆ 'ಪಾಣಿ', ಪಾಣಿ,' ಅಂದ ಹಾಗೂ, ಆ ಮೇಲೆ 'ಪ್ರಾಣೇಶರಾವ್' ಅಂತ ಆಫೀಸಿನ ಕೊಲೀಗ್ಸು ಕೂಗಿದ ಹಾಗೂ ಅಯ್ತಲ್ಲ! ಎಂಥ ವಿಚಿತ್ರ ಅಂದುಕೊಂಡು ಮತ್ತೆ ಮಲಗಿದರು.

ಆದರೂ ಕಣ್ಣಿಗೆ ನಿದ್ರೆ ಹತ್ತಲೇ ಇಲ್ಲ. ಬರೀ ಅತ್ತಿಂದಿತ್ತ, ಇತ್ತಿಂದತ್ತ ಹೊರಳಾಡುತ್ತಲೇ ಇದ್ದರು. ಬೆಳಕಾಗುವುದಕ್ಕೆ ಬಕಪಕ್ಷಿಯ ತರಹ ಕಾದಿದ್ದು, ಎಲ್ಲ ಕೆಲಸ ಮುಗಿಸಿ ಹತ್ತು ಘಂಟೆಗೆಲ್ಲ ತಮ್ಮ ಸಂಬಂಧಿಕ ಗುರ್ರಾಜರಾಯರ ಮನೆಗೆ ತೆರಳಿದರು.

ರಾಯರ ದಿನಚರಿ, ರಿಟೈರಾದ ಮೇಲೆ ಹೆಚ್ಚು ಕಮ್ಮಿ ಹೀಗೆ. ಬೆಳಿಗ್ಗೆ ಎದ್ದು ಎಲ್ಲಾ ಪ್ರಾತರ್ವಿಧಿಗಳನ್ನೂ ಮುಗಿಸಿ, ಒಂಭತ್ತುವರೆ ಹತ್ತು ಘಂಟೆಗೊಂದು ಸಲ ಗುರ್ರಾಜರಾಯರ ಮನೆಗೆ ಹೊರಡುವುದು. ಅಲ್ಲಿ ಪೇಪರ್ ಓದಿ, ಹರಟೆ ಕೊಚ್ಚಿ, ಕಾಫಿ ಕುಡಿದು ಮತ್ತೆ ಊಟದ ಹೊತ್ತಿಗೆ ವಾಪಸ್ಸು.

ಊಟ, ಸಣ್ಣ ನಿದ್ದೆ ಆದ ಮೇಲೆ ಸಾಯಂಕಾಲ ಸಯ್ಯಾಜಿರಾವ್ ರಸ್ತೆ, ಕೊಳ್ಳುವುದು ಇರಲಿ ಇಲ್ಲದಿರಲಿ, ಮಾರ್ಕೆಟ್ಟು. ಎಂಟೂವರೆ ಹೊತ್ತಿಗೆ ಮನೆಗೆ ವಾಪಸ್ಸು, ಊಟ; ನಿದ್ದೆ.

ಇವತ್ತೂ ಹೀಗೆ ಗುರ್ರಾಜರಾಯರ ಮನೆಗೆ ಬಂದು ಕೂತು, ಕಾಫಿ ಕುಡಿಯುತ್ತ "ಗುರ್ರಾಜಿ, ನೆನ್ನೆ ರಾತ್ರಿ ಏನಾಯ್ತು ಅಂತೀಯಾ," ಅಂತ ಪೀಠಿಕೆ ಹಾಕಿದರು. ಗುರ್ರಾಜರಾಯರಿಗೆ ಯಾವಾಗಲೂ ಸಸ್ಪೆನ್ಸ್ ಕಾದಂಬರಿಗಳು ಅಂದರೆ ಹುಚ್ಚು. "ಯಾವುದಾದರೂ ಕಳ್ಳಗಿಳ್ಳ ಬಂದಿದ್ದನೇನೋ," ಅಂತ ಅಡ್ಡ ಬಾಯಿ ಹಾಕಿದರು. "ಸುಮ್ಮನೆ ಕೇಳಯ್ಯ, ನಿನಗ್ಯಾವಾಗಲೂ ಅದರದೇ ಚಿಂತೆ"



ಅಂದು ರಾಯರು "ರಾತ್ರಿ ಎರಡು ಮೂರು ಸಲ ಯಾರೋ ನನಗೆ ಚೆನ್ನಾಗಿ ಪರಿಚಯ ಇದ್ದವರು ನನ್ನ ಹೆಸರು ಕೂಗಿದ ಹಾಗಾಯ್ತು ಕಣಯ್ಯ, ಆಚೆ ಬೀದಿಯಿಂದ. ಆದರೆ ಕಿಟಕಿ ಹತ್ರ ನಿಂತು ನೋಡಿದರೆ, ಯಾರೂ ಇಲ್ಲ. ಏನಂತಿ" ಅಂದರು.

ಗುರ್ರಾಜರಾಯರು "ಟಾರ್ಚ್ ಇರಲಿಲ್ಲವೇ ಮನೇಲಿ?" ಅಂದರು. "ಇದೆ" ಅಂದಿದಕ್ಕೆ "ಟಾರ್ಚು, ದೊಣ್ಣೆ ಹಿಡಿದು, ಬಾಗಿಲು ತಕ್ಕೊಂಡು ಸ್ವಲ್ಪ ಇನ್‌ವೆಸ್ಟಿಗೇಟ್ ಮಾಡ್ಬೇಕಿತ್ತಯ್ಯ, ಪುಕ್ಕಲು, ಪುಕ್ಕಲಾಗಿ ಲೈಟಾರಿಸಿ, ರಗ್ಗು ಹೊದ್ದು ಕೊಂಡು, ಮುಸುಕು ಹಾಕಿಕೊಂಡು ಮಲಗಿಬಿಟ್ಟೇಂತ ಕಾಣುತ್ತೆ," ಅಂದರು. "ಹೋಗಲಿ, ಇವತ್ತೇನಾದ್ರೂ ಹಾಗಾದರೆ 'ಜೈ ಭಜರಂಗಬಲೀ' ಅಂದು ಎಲ್ಲ ದೀಪ ಹಾಕಿ ನೋಡು" ಅಂದರು. "ಒಂದು ಚೇಸ್ ಬುಕ್ಕಲ್ಲಿ ಹೀಗೆ ಆಗುತ್ತೆ ಗೊತ್ತಾ?" ಅಂತ ಆ ಕಾದಂಬರಿಯ ಕಥೆಯೆಲ್ಲಾ ಹೇಳಿ ತಲೆ ತಿಂದರು. ಕಡೆಗೆ "ಆ ಬುಕ್ಕಲ್ಲಿ ಕೊಲೆ ಆಗಿಬಿಡುತ್ತೆ ಕಣಯ್ಯ" ಅಂದು ದೇಶಾವರಿ ನಗೆ ಬೀರಿದರು. "ಯುಸೀ, ದೇರ್ ಈಸ್ ಎ ಮರ್ಡ್‌ರ್" ಅಂದು ಆದರ ಪರಿಣಾಮ ಹೇಳುವಷ್ಟರಲ್ಲಿ ಪ್ರಾಣೇಶರಾಯರು "ಸಾಕು, ಸಾಕು ನಿನ್ನ ಚೇಸ್ ಕತೆ" ಅಂತ ಅವರುತ್ಸಾಹಕ್ಕೆ ತಣ್ಣೀರೆರಚಿದರು.

ಇದಾಗಿ ಎರಡು ಅಥವಾ ಮೂರು ದಿನ ಕಳೆದಿರಬಹುದು. ಪ್ರಾಣೇಶರಾಯರು ಸಯ್ಯಾಜಿ ರಾವ್ ರಸ್ತೆಯಲ್ಲಿ ಸಾಯಂಕಾಲ ಮಾರ್ಕೆಟ್ಟಿನ ಜನಜಂಗುಳಿಯ ಮಧ್ಯೆ ಹಾದು ಹೋಗುತ್ತಿದ್ದಂತೆ ಯಾರೋ ಏನೋ, 'ಪ್ರಾಣಿ, ಪ್ರಾಣಿ' ಅಂತ ಮತ್ತೆ ಕೂಗಿದ ಹಾಗಾಯಿತು. ಅರ್ರೇ, ಅದೇ ಧ್ವನಿ. ಅದೇ ರೀತಿ ಕೂಗುತ್ತಿದೆ. ರಾಯರು ಥಕ್ಕನೆ ನಿಂತಲ್ಲೇ ನಿಂತು ಎಲ್ಲಾ ಕಡೆಯೂ ಕತ್ತು, ದೃಷ್ಟಿ ತಿರುಗಿಸಿದರು. ಯಾರೂ ಇವರ ಕಡೆ ಗಮನ ಹರಿಸಲೇ ಇಲ್ಲ. ರಸ್ತೆಯ ಆಚೆ ಕಡೆಯಿಂದ ಯಾರಾದರೂ ಕೂಗುತ್ತಾ ಇದ್ದಾರೆಯೇ, ಅಂತ ಕತ್ತು ಹಾಯಿಸಿ ನೋಡಿದರು. ಅಲ್ಲೇ ಇದ್ದ ಮೆಟ್ಟಿಲು ಹತ್ತಿ ನೋಡಿದರು. ಯಾರೂ ಕಾಣಲಿಲ್ಲ. ಏನು ವಿಚಿತ್ರ ಅಂದುಕೊಂಡು ಮುಂದೆ ಹೆಜ್ಜೆ ಹಾಕಿದರು.

ರಾತ್ರಿ ಊಟ ಮಾಡುತ್ತಾ ಧರ್ಮಪತ್ನಿ ಪದ್ದಮ್ಮನವರಿಗೆ ಹೇಳಲೋ, ಬೇಡವೋ ಅಂತ ಯೋಚಿಸಿ ಕಡೆಗೆ ತಡೆಯಲಾರದೆ, "ಪದ್ದೂ, ಪದ್ದೂ, ನನಗೆ ಅವತ್ತು ರಾತ್ರಿ ನನ್ನ ಹೆಸರಿಡಿದು ಯಾರೋ ಕೂಗಿದ ಹಾಗಾಯ್ತಲ್ಲ, ಇವತ್ತು ಏನಾಯ್ತು ಅಂತೀ ಮಾರ್ಕೆಟ್ ಹತ್ತಿರ," ಅಂದರು. ಪದ್ದಮ್ಮನವರಿಗೆ ಅರ್ಧ ಆಸಹನೆ, ಅರ್ಧ ಕುತೂಹಲ. "ಏನಾಯ್ತು! ಆಗಬಾರದ್ದು?" ಅಂದರು. ಇದು ಪ್ರಾಣೇಶರಾಯರ ಉತ್ಸಾಹಕ್ಕೆ ತಡೆ ಹಾಕಿದರೂ ತಡಕೊಳ್ಳಕ್ಕಾಗದೆ, "ಇವತ್ತೂ ಹಾಗೇ ಆಯ್ತು ಕಣೆ, ಆ ಬೇಕರಿ ಹತ್ತಿರ. ಯಾರೋ, ನನ್ನ ಹೆಸರನ್ನು ಹಿಡಿದು ಕೂಗಿದ ಹಾಗಾಯ್ತು. ಆದರೆ ನಿಂತು ನೋಡಿದರೆ ಯಾರೂ ಇಲ್ಲ!" ಅಂದರು.

ಪದ್ದಮ್ಮನವರು, "ನಿಮಗ್ಯಾಕೋ, ಅರಳು ಮರಳು ಶುರುವಾಯ್ತು ಅನ್ನಿಸುತ್ತೆ, ಒಳ್ಳೇ ಭ್ರಾಂತು" ಅಂದರು. "ಏಳಿ, ಏಳಿ, ನಿಮಗೆ ಕೆಲಸ ಇಲ್ಲ ಅಂದರೆ ನನಗಿಲ್ಲವಾ? ಗೋಮ್ಯ ಹಚ್ಚಬೇಕು" ಅಂತ ಎಬ್ಬಿಸಿಬಿಟ್ಟರು. ಈ ರೀತಿ ಎರಡು, ಮೂರು ಸಲ ಆದ ಮೇಲೆ ಗುರ್ರಾಜರಾಯರೂ ಇದನ್ನು ಸ್ವಲ್ಪ ಸೀರಿಯಸ್ಸಾಗೇ ತೊಗೊಂಡರು. "ಯಾರೋ ಏನೋ ನಿಮಗೆ ತಿಳಿದವರು ತಮಾಷೆಗೆ ಅಂತ ಮಾಡ್ತಿಲ್ಲಾ ತಾನೇ? ಈ ಕೆಲಸ?" ಅಂದರು. "ಆ ಧ್ವನಿ ಯಾರದೂ ಅನ್ನಿಸುತ್ತೆ? ಜ್ಞಾಪಿಸಿಕೊಳ್ಳಿ" ಅಂದರು. "ಅದೇ ತುಂಬಾ ಯೋಚನೆ ಮಾಡ್ತಿದ್ದೀನಯ್ಯ, ಯಾರದೂ ಅಂತ ತಿಳೀತಾನೇ ಇಲ್ಲ. ಆದರೆ ಇದು ಮಾತ್ರ ಡೆಫನೆಟ್ಟು. ಅದೂ ಯಾರೋ ನನಗೆ ಚೆನ್ನಾಗಿ ಗೊತ್ತಿರೋರದೇ ಧ್ವನಿ" ಅಂದರು ಪ್ರಾಣೇಶರಾಯರು.

ಇದಾಗಿ ಏಳು ದಿನವಾದರೂ ಆಗಿರಬೇಕು. ಆವತ್ತು ರಾಯರ ಜೊತೆ ಮಾರ್ಕೆಟ್ಟಿಗೆ ಗುರ್ರಾಜರಾಯರೂ ಬಂದರು. ಮಾರ್ಕೆಟ್ಟಿನಲ್ಲಿ ಎಲ್ಲಾ ಕೊಂಡು ಚಿಕ್ಕ ಗಡಿಯಾರದ ಹತ್ತಿರ ಬಂದು ಅಲ್ಲೇ ಇದ್ದ ಗಾಡಿಯವನ ಹತ್ತಿರ ನಿಂತು ನಿಂಬೆಹಣ್ಣು ರೂಪಾಯಿಗೆಷ್ಟು ಅನ್ನುತ್ತಿದ್ದಂತೆ ಪಕ್ಕದಲ್ಲಿ ಬಂದು ನಿಂತಿದ್ದನೊಬ್ಬ "ಹೆಂಗೆ ತಗೊಂಡ್ರಿ? ರಾಯ್ರೇ?"

ಅಂದ. "ಇಲ್ಲ ಇನ್ನೂ ವ್ಯಾಪಾರ ಮಾಡಿಲ್ಲ" ಅಂದರು ರಾಯರು. ವ್ಯಾಪಾರ ಮುಗಿಸಿ ವಾಪಸ್ಸು ಹೆಜ್ಜೆ ಹಾಕುತ್ತಿದ್ದಂತೆ "ಗುರ್ರಾಜರಾಯರಿಗೆ, 'ಗುರ್ರಾಜಿ, ನನ್ನ ಪಕ್ಕ ಬಂದು ನಿಂತು, ಹೆಂಗೆ ತಗೊಂಡ್ರಿ' ಅಂತ ಕೇಳಿದವನನ್ನು ನೋಡಿ ದೆಯಾ? ಆ ಧ್ವನೀನೇ ಅನ್ನಿಸುತ್ತೆ ಕಣೋ. ಅವತ್ತು ನನ್ನ ಹೆಸರು ಹಿಡಿದು ಕೂಗಿದ್ದು" ಅಂದರು.

ಗುರ್ರಾಜರಾಯರು ಪ್ರಾಣೇಶರಾಯರತ್ತ ಅವರ ಬುದ್ಧಿಯನ್ನು ಸಂದೇಹಿಸುವಂಥ ದೃಷ್ಟಿಬೀರಿ, "ಸರಿ, ಸರಿ, ನಡಿ, ನಡಿ. ನಿನಗ್ಯಾಕೋ ಇದು ವಿಪರೀತಕ್ಕಿಟ್ಟುಕೊಂಡಿದೆ" ಅಂದು ಮಾತು ಮುಗಿಸೇ ಇರಲಿಲ್ಲ, ಇಬ್ಬರಿಗೂ ಸ್ಪಷ್ಟವಾಗಿ 'ಪ್ರಾಣೇಶರಾವ್, ಶ್ರೀ ಪ್ರಾಣೇಶರಾವ್' ಅಂತ ಯಾರೋ ಹಿಂದಿನಿಂದ ಕೂಗಿದ್ದು ಕೇಳಿತು. ಇಬ್ಬರೂ ಅಲ್ಲೆ ನಿಂತು ಹಿಂದಿರುಗಿ ನೋಡಿ ದಾದರು. ಯಾರೂ ಇಲ್ಲ! ಈ ಸಲ ಅಂತೂ ಕೂಗಿದ್ದು ಗುರ್ರಾಜರಾಯರಿಗೂ ಸ್ಪಷ್ಟವಾಗಿ ಕೇಳಿ ಸಿತ್ತು. "ಯಾವನೋ ಬೇಕೂಫ, ತಮಾಷೆ, ಕಪಿ ಚೇಷ್ಟೆ ಮಾಡ್ತಿರ್ಬೇಕೋ ಪಾಣಿ" ಅಂದರು ಗುರ್ರಾಜಿ. "ತಮಾಷೆ ಅಂತ ತಮಾಷೆ, ಬೋಳೀ ಮಗ ನನ್ನ ಕೈಲಿ ಸಿಗಲಿ, ಹುಟ್ಲಿಲ್ಲ ಅನ್ನಿಸಿಬಿಡ್ತಿನಿ" ಅಂತ ಹಾರಾಡಿದರು ರಾಯರು.

ಪ್ರಾಣೇಶರಾಯರ ಈ ಅನಿಸಿಕೆಗಳಿಗೆಲ್ಲಾ ಬೇರೆ ರೂಪ ಬಂದಿದ್ದು ಗುರ್ರಾಜರಾಯರ ಮನೆಯಲ್ಲಿ ಅವರು ಮಾತಾಡ್ತಾ ಕೂತಿದ್ದಾಗ. ಗುರ್ರಾಜರಾಯರ ಅತ್ತೆ, ಮಡಿ ಹೆಂಗಸು ಅವರ ಮನೇಲೇ ಅಡಿಗೆ, ಗಿಡಿಗೆ ಮಾಡಿಕೊಂಡು, ಕಡೇ ದಿನ ಎಣಿಸ್ತಾ ಇತ್ತು. ಅದಕ್ಕೆ ಮಗಳಿಂದ ವಿಷಯ ತಿಳಿದು, "ಅಯ್ಯಯ್ಯೋ, ತುಪ್ಪದ ದೀಪ ಹಚ್ಚಿಡು ಅನ್ನು ರಾಯರಿಗೆ, ಹಾಗೇ ಏನೂ ಆಗದಿರಲಪ್ಪ ಅಂತ ಮಂತ್ರಾಲಯಕ್ಕೆ ಹರಸಿಕೋ ಅಂತ ಹೇಳಮ್ಮ ಅವರಿಗೆ" ಅಂದಿದ್ದು ಗುರ್ರಾಜರಾಯರ ಕಿವಿಗೆ, ಬಿದ್ದಿದ್ದು, ಅವರು ವಿಚಾರಿಸಿದಾಗ ತಿಳಿದಿದ್ದು ಇಷ್ಟು. ಅವರ ಪ್ರಕಾರ "ಸ್ವರ್ಗದಲ್ಲಿರೋರು ತಮಗೆ ಪ್ರಿಯವಾಗಿರೋರು ಈ ಲೋಕಾನ ಬಿಡೋ ಸಮಯ ಹತ್ತಿರ ಬಂದಾಗ ಬಂದು, ಬಂದು ನೋಡ್ಕೊಂಡು ಹೋಗ್ತಾರಂತೆ. ಆವಾಗ




"ಒಳ್ಳೇದೇ ಆಯ್ತು ಬಿಡಿ. ಈಗ್ಲಾದ್ರೂ ಸರಕಾರಿ ನೌಕರರು ಕಚೇರಿಗಳಲ್ಲಾದ್ರೂ ನೋಡೋಕೆ ಸಿಕ್‌ಬೌದು."

ಒಂದೊಂದು ಸಲ ತಡೆಯಲಿಕ್ಕಾಗದೆ ಹೆಸರು ಹಿಡಿದು ಕೂಗೂಬಿಡ್ತಾರಂತೆ. ಪ್ರಾಣೇಶರಾಯ ರಿಗೂ ಹೀಗೇ ಆಗಿರ್ಬೇಕು" ಅಂತ ಅಂದರು. ಗುರ್ರಾಜರಾಯರು "ಅಯ್ಯೋ, ಬಿಡ್ತು ಅನ್ನಿ ಬಿಡ್ತು ಅನ್ನಿ" ಅಂದರು.

ಇಷ್ಟರ ಮಧ್ಯೆ ಮತ್ತೆ ರಾತ್ರಿಯೊಂದು ಸಲ ಅದೇ ಧ್ವನಿ, 'ಪ್ರಾಣೇಶರಾವ್, ಶ್ರೀ ಪ್ರಾಣೇಶ ರಾವ್' ಅಂತ ಕೂಗಿದ್ದೂ, ರಾಯರು ಆದದ್ದು ಆಗಿ ಹೋಗಲಿ ಅಂತ ಟಾರ್ಚ್ ಹಿಡಿದು ಬಾಗಿಲು ತೆಗೆದುಕೊಂಡು ಅಂಗಳ ಎಲ್ಲಾ ಹುಡುಕಿ ಸುಸ್ತಾಗಿ ವಾಪಸ್ಸು ಬಂದಾಗಿತ್ತು. ಸುಮ್ಮನೆ ಪದ್ದಮ್ಮನವರ ಕೈಲಿ ಹಂಗಿಸಿಕೊಂಡಾಗಿತ್ತು ಅಷ್ಟೇ.

ಅವರ ಅತ್ತೆ ಹೇಳಿದ್ದ ಮಾತಂತೂ ಗುರ್ರಾಜ ರಾಯರ ತಲೇಲಿ ಕೊರೀತಾನೇ ಇದ್ದೂ ಇದ್ದೂ ಕಡೆಗೆ ತಡೆಯಕ್ಕಾಗದೆ ಬಂದು ಒಂದು ದಿನ ಸುಳ್ಳು ಸುಳ್ಳು ನೆಪ ಹೇಳಿಸಿ ಸುಬ್ಬರಾಯನ ಕೆರೆಯಲ್ಲಿರುವ ರಾಯರ ಬೃಂದಾವನಕ್ಕೆ ಪಂಚಾ

ಮೃತ ಅಭಿಷೇಕ ಮಾಡಿಸಿದರು. "ಪಾಣೀ, ನಾವು ನಾವೇ ಎಲ್ಲಾದರೂ ಹೋಗಿ ಬರೋಣ ಏನಂತೀ?" ಅಂದು, ಹೂ ಅನ್ನಿಸಿ, "ಮಂತ್ರಾಲಯಕ್ಕೆ ಎಲ್ಲಾ ಸರಿ ಹೋದ್ರೆ ಬರ್ತೀವಿ ಅಂತ ಹರಕೆ ಹೊತ್ತಿಸಿದ್ದರು. ಬಹಳ ಇಂಡೈರೆಕ್ಟಾಗಿ ನೋಡು, ಈ ರೀತಿ ಹೆಸರನ್ಯಾರೋ ಕೂಗಿದ ಹಾಗೆ ಅನ್ನಿಸೋದು ಶುಭ ಅಲ್ಲವಂತೆ" ಅಂತ ಬಹಳ ಸೂಕ್ಷ್ಮವಾಗಿ ಹಿಂಟ್ ಕೊಟ್ಟಿದ್ದರು.

ಆ ಧ್ವನಿ ಯಾರದ್ದಿರಬಹುದು ಎಂಬುದರ ಕುತೂಹಲ ಅಂತೂ ಪ್ರಾಣೇಶರಾಯರಿಗೆ ಕಮ್ಮಿ ಆಗಲೇ ಇಲ್ಲ. ತಮಗೆ ಬೇಕಾದ, ಬೇಡವಾದ ಎಲ್ಲರ ಧ್ವನಿಯನ್ನೂ ಜ್ಞಾಪಿಸಿಕೊಂಡರು. ಹಳೆಯ ಕ್ಲಾಸ್‌ಮೇಟ್‌ಗಳ ಧ್ವನಿಯನ್ನೂ ನೆನೆಸಿಕೊಳ್ಳಲು ಪ್ರಯತ್ನಿಸಿದರು. ತಾವು ರಿಟೈರಾಗುವ ಮುಂಚೆ, ಆಫೀಸಿನಲ್ಲಿ ತಮಗೆ ಕಂಡರೆ ಆಗದವರು ಯಾರಾದರೂ ಇದ್ದರೆ, ಅಂತ ಯೋಚಿಸಿ, ಯೋಚಿಸಿ ಸುಸ್ತಾದರು.

ಸಂಜೆ ಮನೆಗೆ ಬಂದಿದ್ದ ಗುರ್ರಾಜರಾಯರ ಜೊತೆ ಹರಟೆ ಕೊಚ್ಚುತ್ತಾ, ಪ್ರಾಣೇಶರಾಯರು, "ನಾವು ತುಂಬ ಹಿಂದೆ ಬೆಂಗಳೂರಿನಲ್ಲಿ ಇದ್ದಾಗಿನ ಘಟನೆ ಕಣೋ ಗುರ್ರಾಜ. ನಮ್ಮ ಅಜ್ಜಿಯ ತಮ್ಮ ನಮ್ಮ ಮನೆ ಪಕ್ಕದಲ್ಲೇ ಇದ್ದರಂತೆ. ಆಗೆಲ್ಲಾ ಶ್ರೀರಾಂಪುರ ಅಂದರೆ ಯಾರೂ ಹೋಗುತ್ತಿರಲಿಲ್ಲವಂತೆ. ಹರಿಶ್ಚಂದ್ರ ಘಾಟ್ ಆದ ಮೇಲೆ ಮೈಸೂರಿನ ದೊಡ್ಡ ಕೆರೆ ತರಹ ಪ್ರಚಂಡವಾದ ಕೆರೆಯಂತೆ. ನಮ್ಮನೆ ಪಕ್ಕ ಇದ್ದವರಲ್ಲಿ ಶ್ರೀಪಾದರಾಯರು, ಸೊಸೈಟೀಲಿ ಅಕೌಂಟೆಂಟ್ ಆಗಿ ರಿಟೈರಾದವರು ಯಾವುದೋ ಅಂಗಡೀಲಿ ಲೆಕ್ಕ ಬರೀತಿದ್ದರಂತೆ. ಬಹಳ ಮಡಿ ಆತ. ಒಂಭತ್ತು ಘಂಟೆಗೆಲ್ಲ ಊಟ ಮುಗಿಸಿ ಕೆಲಸಕ್ಕೆ ಹೊರಡೋರಂತೆ, ಲಕ್ಷಣವಾಗಿ ಜರತಾರಿ ಕಚ್ಚೆ ಪಂಚೆ, ಕ್ಲೋಸ್‌ಕೋಟು, ಪೇಟ, ಪಂಪ್ ಶೂಸು, ಛತ್ರಿ ಹಿಡಿದು ಸಂಜೆವರ್ಗೂ ಕೆಲಸ ಮಾಡಿ ಬರೋರಂತೆ. ಹೀಗೆ ಒಂದು ಗುರುವಾರ, ಶ್ರೀಪಾದರಾಯರು ಲಕ್ಷಣವಾಗಿ ಊಟ ಮಾಡಿ, ಎಲೆ ಅಡಿಕೆ ಅಗಿಯುತ್ತಾ, 'ಕಮಲೂ, ಯಾರೋ ಹೊರಗಿಂದ ಕೂಗಿದ ಹಾಗಾಯ್ತು, ಯಾರು ನೋಡು,' ಅಂದರಂತೆ. ಕಮಲಮ್ಮನವರು ಆಚೆ ಹೋಗಿ, ತಡಕಾಡಿ, 'ಯಾರೂ ಇಲ್ಲಾಂದ್ರೆ, ನಿಮಗೆ ಯಾರು ಕೂಗಿದ ಹಾಗಾಯ್ತು?' ಅಂತ ಕೇಳಿದರಂತೆ. 'ಯಾರೂ ಇಲ್ಲವೇ, ಹೋಗಲಿಬಿಡು' ಅಂತ ಅಂದುಕೊಂಡರಂತೆ. ಪಂಪ್ ಶೂಸ್ ಧರಿಸಿ, ಕೈನಲ್ಲಿ ಛತ್ರಿ ಹಿಡಿದು ಹೊಸ್ತಿಲ ಹತ್ತಿರ ಬಂದವರು ಯಾಕೋ ಏನೋ ಒಂದು ಗಳಿಗೆ ಅಲ್ಲೇ ಯೋಚನೆ ಮಾಡ್ತಾ ನಿಂತವರು ಒಳಗಡೆ ಹಾಲಿಗೆ ವಾಪಸ್ಸು ಬಂದು ಕೂತು ಮೊದಲು ಶೂಸು, ಸಾಕ್ಸು, ತಲೆಪೇಟ, ಕೋಟು, ಶರ್ಟು ಎಲ್ಲಾ ಬಿಚ್ಚಿಟ್ಟು, ಮತ್ತೆ ಕೈಕಾಲು ತೊಳೆದುಕೊಂಡು ಬಂದರಂತೆ. ಕಮಲಮ್ಮ 'ಇದೇನೂ ಅಂದ್ರೆ' ಅಂದಿದ್ದಕ್ಕೆ 'ಇವತ್ತು ನಾನೇ ನಿನಗೆ ಊಟ ಬಡಿಸ್ತೀನಿ' ಅಂದರಂತೆ. ಕಮಲಮ್ಮ 'ಛೇ, ಛೇ, ಎಂಥ ಮಾತೂಂತ ಆಡ್ತೀರ. ಅದೂ ಅಲ್ದೇ ಕೆಲಸಕ್ಕೋಗಲ್ವೆ?' ಅಂದಿದ್ದಕ್ಕೆ 'ಇಲ್ಲ, ಇವತ್ತೊಂದು ದಿನ ನಿನಗೆ ನಾನೇ ಬಡಿಸ್ತೀನಿ, ಕೂತ್ಕೋ, ಊಟ ಮಾಡು' ಅಂತ ಮೃದುವಾದ, ಆದರೆ ದೃಢ ಧ್ವನಿಯಲ್ಲಿ ಹೇಳಿ ಚೆನ್ನಾಗಿ ಉಪಚಾರ ಮಾಡಿ ಬಡಿಸಿದರಂತೆ. ಊಟ ಎಲ್ಲಾ ಆದ ಮೇಲೆ ತಾಂಬೂಲ ಮಡಿಸಿಕೊಟ್ಟರಂತೆ. ಒಂದು ಹತ್ತು ನಿಮಿಷ ಆದ ಮೇಲೆ 'ನೋಡು, ಪಕ್ಕದ ಮನೇಲಿ ರಾಮೂ ಇರ್ತಾನೆ, ಅವನನ್ನು ಕರಿ' ಅಂದು ರಾಮರಾಯರನ್ನು, ಹಿರಿಯರನ್ನೆಲ್ಲಾ ಕರೆಸಿ ನೋಡಿ, 'ಇವತ್ತು ನಾಲ್ಕು ಘಂಟೆಗೆ ನಾನು ಹೊರಟು ಹೋಗ್ತೀನಿ. ಆ ಟ್ರಂಕಿನಲ್ಲಿ ನಾಲ್ಕು ನೂರು ರೂಪಾಯಿ ಇದೆ. ಅದು ಸದ್ಯದ ಖರ್ಚಿಗೆ ಸಾಕಾಗುತ್ತೆ. ನನ್ನ ಬ್ಯಾಂಕಿನಲ್ಲಿ ಎರಡು ಸಾವಿರ ರೂಪಾಯಿ ಇವೆ. ನಾನು ಹೋದ ಮೇಲೆ, ಅವಳನ್ನ ನೀವ್ಯಾರಾದರೂ ನೋಡ್ಕೋಬೇಕು. ಅದಕ್ಕೇಂತ ಆ ದುಡ್ಡು. ಅವಳಿಗೇನು ಬರೀ, ಒಂದು ಗೊಡ್ಡ ಸಾರು, ನೀರು ಮಜ್ಜಿಗೆ ಇದ್ರೆ ಸಾಕು' ಅಂದರಂತೆ. ಅವರಿವರು ಔಪಚಾರಿಕವಾಗಿ, 'ಇದ್ಯಾಕೆ ಹೀಗೆ ಹುಚ್ಚು ಹುಚ್ಚಾಗಿ ಮಾತಾಡ್ತೀದೀರಿ ಅಂತಲೋ ಅಥವಾ ಹೀಗ್ಯಾಕಾಡ್ತೀದೀರಿ' ಅಂತಲೋ ಅಂದಿದ್ದಕ್ಕೆ 'ನನಗ್ಗೊತ್ತು' ಅಂತ, ದೃಢವಾಗಿ ಅಂದು ಧರ್ಮಪತ್ನಿಯನ್ನು ಸಮಾಧಾನ

ಮಾಡಿದರಂತೆ. ಮತ್ತೆ ಸ್ನಾನ ಮಾಡಿ ದೇವರ ಪೂಜೆಗೆ ದೇವರ ಕೋಣೆ ಹೊಕ್ಕು ಮೂರು ಘಂಟೆವರ್ಗೂ ಪೂಜೆ ಮಾಡ್ತಾ ಇದ್ದರಂತೆ. ಕಡೆಗೆ ಅಲ್ಲೇ ಒಂದು ಚಾಪೆ ಹಾಕಿಕೊಂಡು ಮಲಗಿದ್ದ ರಂತೆ. ಕಮಲಮ್ಮನಿಗೆ 'ಬೀಸಣಿಗೇಲಿ ಗಾಳಿ ಹಾಕು' ಅಂದು ಗಾಳಿ ಹಾಕಿಸಿಕೊಳ್ಳುತ್ತಿದ್ದವರು ಒಂದು ಲೋಟ ನೀರು ತರಿಸಿಕೊಂಡು ಕುಡಿದ ರಂತೆ. ಕರೆಕ್ಟಾಗಿ ನಾಲ್ಕು ಘಂಟೆಗೆ ಎಲ್ಲರೂ ನೋಡು ನೋಡುತ್ತಿದ್ದಂತೆಯೇ ತೀರಿಕೊಂಡ ರಂತೆ" ಅಂತ ಮುಗಿಸಿದರು ಪ್ರಾಣೇಶರಾಯರು. "ಪುಣ್ಯ ಮಾಡಿದ್ದರು, ಪುಣ್ಯ ಮಾಡಿದ್ದರು" ಅಂತ ಪದೇ ಪದೇ ಹೇಳುತ್ತಲೇ ಇದ್ದರು. ಕಾಫಿ ಮಾಡುತ್ತಾ ಇವರ ಪ್ರಸಂಗವನ್ನೆಲ್ಲಾ ಕೇಳಿಸಿಕೊಳ್ಳು ತ್ತಿದ್ದ ಪದ್ಮಮ್ಮ "ನಿಮಗಿನ್ನೇನು ವಿಷಯ ಸಿಗಲಿ ಲ್ಲಾಂತ ಕಾಣುತ್ತೆ, ಹರಟೆ ಕೊಚ್ಚಕ್ಕೆ ಯಾವುದೋ ದಂತಕತೇನೋ, ಪುರಾಣನೋ" ಅಂತ ಸಿಡುಕಿ ಜೋರಾಗಿ ಕಾಫಿ ಹೀರಿದರು. ಪ್ರಾಣೇಶರಾಯರಿಗೆ ಯಾರ ಮುಂದಾದರೂ ತಮ್ಮ ಪತ್ನಿ ಹೀಗೆಲ್ಲಾ ಮಾತನಾಡಿದರೆ ರೇಗಿಬಿಡುವುದು ಸಾಮಾನ್ಯ. ಆದರೆ ಇವತ್ತೇಕೋ ಅವರಿಗೆ ಏನು ಹೇಳಬೇಕೂ ಅನ್ನಿಸಲೇ ಇಲ್ಲ. ಸುಮ್ಮನೇ ತದೇಕಚಿತ್ತರಾಗಿ ತಮ್ಮ ಧರ್ಮಪತ್ನಿಯನ್ನೇ ದಿಟ್ಟಿಸಿ ನೋಡುತ್ತಿದ್ದರು, ಒಂದು ರೀತಿಯ ಸಹಾನುಭೂತಿಯಿಂದ.

ಮಾರ್ಕೆಟ್ಟಿನಲ್ಲಿ ಶಾವಂತಿಗೆ ಹೂವು "ಮಾರು ಹೇಗಪ್ಪ?" ಅಂತ ಗುರುರಾಜರಾಯರು ಕೇಳುತ್ತಿ ದ್ದಂತೆ ಪ್ರಾಣೇಶರಾಯರು, "ನಿಮ್ಮ ಅತ್ತೆ ಅವತ್ತು ಏನು ಹೇಳಿದರು ಹೇಳು ಸರಿಯಾಗಿ?" ಅಂದರು. ಗುರುರಾಜರಾಯರಿಗೆ ಪ್ರಾಣೇಶರಾಯರು ಯಾವು ದರ ಬಗ್ಗೆ ಮಾತನಾಡುತ್ತಿದ್ದರೋ ತಿಳಿಯದೇ "ಯಾವ ವಿಷಯ ಹೇಳು?" ಅಂದರು. "ಅದೇ ನಾನು ಹೇಳಿದ್ದೆನಲ್ಲಯ್ಯ ನಿನಗೆ, ಯಾರೋ ಬಂದು ಕೂಗಿದ ಹಾಗಾಯ್ತು ಅಂದಿದ್ದಕ್ಕೆ ನಿಮ್ಮತ್ತೆ ಏನೋ ಅಂದಿದ್ದರೂ ಅಂತ ನೀನೇ ಹೇಳಿದ್ದೆ" ಅಂದರು.

ಗುರ್‍ರಾಜರಾಯರಿಗೆ ಇದ್ಯಾಕೋ ವಿಪರೀತಕ್ಕೆ ಟ್ಟುಕೋತಿದೆ ಅನಿಸಿತು. ಹೇಳಿ ಕೇಳಿ ನಾನ್ಯಾಕಪ್ಪ ಇವನಿಗೆ ಹೇಳಿದೆ, ಅಂದುಕೊಂಡು, "ಏ ಸುಮ್ಮ ನಿರೋ, ಅದೆಲ್ಲಾ ಅಡಗೂಲಜ್ಜಿ ಕತೆ. ಅದನ್ಯಾಕೆ




"ಇವ್ರಿಗೂ ಸಾಹಿತ್ಯ ಗ್ರಂಥಗಳನ್ನ ಕೊಂಡ್ಕೊಳ್ಳೋ ಗೀಳು ಯಾವಾಗ್ನಿಂದ ಬಂತು ಅಂತ ಆಶ್ಚರ್ಯಾನಾ? ಅದಕ್ಕೆ ಕಾರಣಾ ಬೇರೇನೇ ಇದೆ. ಅವ್ರೀಗ ಕೊಂಡು ಕೊಂಡಿರೋ ಪುಸ್ತಕದ ಹೆಸ್ರು 'ಆಶ್ವಾಸನೆಗಳು' ಅಂತ."

ಯೋಚನೆ ಮಾಡ್ತಿದ್ದಿ? ಸುಮ್ಮನಿರಲಾರದೆ. ಅದೂ ಇಲ್ಲಿ! ಮಾರ್ಕೆಟ್ಟಿನಲ್ಲಿ" ಅಂತ ಮಾತು ಹಾರಿಸಕ್ಕೆ ಪ್ರಯತ್ನಿಸಿ ಸೋತರು. ಕಡೆಗೆ "ಶ್ರೇಯಸ್ಸಲ್ಲವಂತೆ ಕಣಯ್ಯ, ಅದಕ್ಕೇ ನಿನಗೆ ಮಂತ್ರಾಲಯಕ್ಕೆ ಹರಕೆ ಇಟ್ಕೋ ಅಂದಿದ್ದು ನಾನು" ಅಂದರು.

ವಾಪಸ್ಸು ಮನೆಗೆ ನಡೆಯುತ್ತಿದ್ದಂತೆ, ಪ್ರಾಣೇ ಶರಾಯರು "ಇತ್ತೀಚೆಗೆ ಆ ಧ್ವನಿ ನನ್ನನ್ನು ಕರೀತಾ ಇರೋದು ಜಾಸ್ತಿ ಆಗಿದೆ ಕಣಯ್ಯ. ನನಗ್ಯಾಕೋ ಒಂದು ತರಹಾ ಆಗುತ್ತೆ. ಪದ್ದೂಗಂತೂ ಹೇಳ ಕ್ಕಾಗಲ್ಲ. ಹೇಳಿದ್ರಾ, ಅವಳಿಗೆ ಅರ್ಥನೂ ಆಗಲ್ಲ, ಸಮ್ಮನೆ ಎಗರಿ ಎಗರಿ ಬೀಳ್ತಾಳೆ ಅಷ್ಟೇ," ಅಂತ ದುಃಖ ತೋಡಿಕೊಂಡರು. ಗುರುರಾಜರಿಗೆ ಹೇಗೆ ಉತ್ತರ ಹೇಳೋದು, ಏನು ಮಾಡೋದು ಅಂತ ತಿಳೀಲೇ ಇಲ್ಲ. "ಅದನ್ನೆಲ್ಲಾ ಯಾಕೆ ನೀನು ಸುಮ್ಮನೆ ತಲೇಗೆ ಹಚ್ಚಿಕೋತಿಯಾ? ನೀನು ಅದರ ಬಗ್ಗೇನೇ ಯೋಚನೆ ಮಾಡ್ತೀರ್‍ತೀ ಅಂತ ಕಾಣುತ್ತೆ. ಅದಕ್ಕೇ

ಅದು ನಿನ್ನ ತಲೇನ ಕೊರೀತಿದೆ. ರಾತ್ರಿ ಬೇರೆ ಕಡೆ ತಲೆ ಹಾಕಿಕೊಂಡು ಮಲಕ್ಕೋ. ತೊಲೆ ಗಿಲೆ ಕೆಳಗೆ ಮಲಗಬೇಡ" ಅಂದು ಸಮಾಧಾನ ಮಾಡಿ ಕಳುಹಿಸಿದರು.

ಮಧ್ಯರಾತ್ರಿ ಎರಡೂವರೆ, ಮೂರು ಘಂಟೆಯ ಸಮಯ. ಯಥಾ ಪ್ರಕಾರ ರಾಯರು ಎದ್ದು, ಕೈಕಾಲು ತೊಳೆದುಕೊಂಡು, ಮತ್ತೆ ಬಂದು ಮಲಗಿದ್ದರು. ಬಳಿಯಲ್ಲಿಯೇ ಮಲಗಿದ್ದ ಪದ್ದಮ್ಮ ಸಣ್ಣದಾಗಿ ಗೊರಕೆ ಹೊಡೆಯುತ್ತಿದ್ದರು.

ರಾಯರಿಗೆ ನಿಜವಾಗಲೂ ಎಚ್ಚರವಾಗಿದ್ದು ತಮ್ಮ ಮನೆಯ ಹೊರಗೆ ಯಾವುದೊ ಕಾಗೆ 'ಕಾ, ಕಾ, ಅಂದ ಹಾಗೆ ಅನ್ನಿಸಿತು. 'ಅರ್ರೇ, ಇಷ್ಟು ಕತ್ತಲಲ್ಲಿ ಅದ್ಯಾವ ಕಾಗೆಯಪ್ಪ?' ಅಂದುಕೊಂಡರು ರಾಯರು. ಯಾವುದೋ ಮರಿ ಕಾಗೆ ಇರಬೇಕು. ಬೆಕ್ಕುಗಿಕ್ಕು ಕೈಲೋ, ಬೀದಿ ನಾಯಿಗಳ ಕೈಲೋ ಸಿಕ್ಕಿದರೆ ಬಗೆದು ಹಾಕಿ ಬಿಡ್ತವಲ್ಲಾ, ಅಂತ ಚಿಂತಿಸಿ ಹಾಗೇ ಕಣ್ಣು ಮುಚ್ಚಿ ಒಂದೈದು ನಿಮಿಷವೂ ಆಗಿಲ್ಲ, ಇದ್ದಕ್ಕಿದ್ದ ಹಾಗೆ ತಮ್ಮ ರೂಮಿನ ಕಿಟಕಿಯ ಕೆಳಗಿಂದ, 'ಪ್ರಾಣೇಶಿ, ಏ, ಪ್ರಾಣೇಶಿ, ಬಾಗಿಲು ತೆಗೆಯೋ,' ಅಂದಿದ್ದು ಸ್ಪಷ್ಟವಾಗಿ ಕೇಳಿಸಿತು. ಅದೇ ಧ್ವನಿ! ತಿಂಗಳಾನುಗಟ್ಟಲೆ ಆ ಧ್ವನಿ ಯಾರದ್ದು ಅಂತ ಯೋಚನೆ ಮಾಡಿ ಮಾಡಿ ಸೊರಗಿದ್ದ ರಾಯರಿಗೆ ಆ ಒಂದು ಕ್ಷಣದಲ್ಲಿ ಆ ಧ್ವನಿ ಯಾರದ್ದು ಎಂದು ತಿಳಿದು ಹೋಯಿತು. ಅವರನ್ನು ಪ್ರಾಣೇಶಿ ಅಂತ ಕರೀತಾ ಇದ್ದವರೂ ಒಬ್ಬರೇ, ಅವರ ತಂದೆ! ಬೇರೆಯವರೆಲ್ಲ ಇಲ್ಲ ಪಾಣಿ' ಅನ್ನೋರು ಅಥವಾ ಪ್ರಾಣೇಶರಾವ್ ಅನ್ನೋರು. ಅವರ ತಂದೆ, ನಲ್ವತ್ತು ವರ್ಷದ ಹಿಂದೆಯೇ ಗತಿಸಿದ್ದ ಅವರ ತಂದೆ, ಆನಂದರಾಯರದ್ದು! 'ಬಂದೇ ಅಣ್ಣಾ, ಬಂದೇ, ತಾಳೀ ಬಾಗಿಲು ತೆಗೀತೀನಿ' ಅನ್ನುತ್ತಾ ರಾಯರು ಧಡಧಡನೆ ಎದ್ದು, ರೂಮಿಂದ ಹಾಲಿಗೆ, ಹಾಲಿಂದ ವರಾಂಡಕ್ಕೆ ಧಾವಿಸಿ, ಬೋಲ್ಟ್ ಎಳೆದು, ಗಾಡ್ರೆಜ್ ಲಾಕನ್ನು ತಿರುಗಿಸಿ ಬಾಗಿಲನ್ನು ವಿಶಾಲಕ್ಕೆ ತೆರೆದರು.

ಧಡಬಡಲ್ ಈ ಸದ್ದು ಕೇಳಿ ಎಚ್ಚರವಾಗಿದ್ದ ಪದ್ದಮ್ಮ "ಯಾರೂಂದ್ರೆ? ಇಷ್ಹೊತ್ತಲ್ಲಿ ಯಾರಿಗೆ ಬಾಗಿಲು ತೆಗೀತಿದ್ದೀರಿ? ನಿಮಗೆ ತಲೆಗಿಲೆ ಕೆಟ್ಟಿದೆಯೋ ಏನೂ ಅಂತೀನಿ; ತಾಳಿ, ತಾಳೀಂದ್ರೆ," ಅಂತ ಜೋರಾಗೇ ಕೂಗಿಕೊಂಡು ಹೊರಬರುತ್ತಿದ್ದಂತೆ ಅವರಿಗೆ ಪ್ರಾಣೇಶರಾಯರು "ಬಂದೇ, ಬಂದೇ," ಅನ್ನುತ್ತಾ ಹೊಸ್ತಿಲು ದಾಟಿ, ಮೆಟ್ಟಲಿಳಿದು ಹೋದದ್ದೂ, ಅಲ್ಲೆ ಅಂಗಳದ ರಂಗೋಲೆಯ ಮೇಲೆ ಕುಸಿದು ಬಿದ್ದದ್ದೂ ಸ್ಪಷ್ಟವಾಗಿ ಕಾಣಿಸಿತು. ●



*ಸಂತನಾಗಲಿ ಪಾಪಿಯಾಗಲಿ ಪರಮಾತ್ಮನದೆ ಸೃಷ್ಟಿ. ಇಬ್ಬರೂ ಆತನ ಮಕ್ಕಳೆ. ಹೀಗಾಗಿ ಇಬ್ಬರಿಗೂ ಒಂದೇ ಬಗೆಯ ನ್ಯಾಯದಾನ. ಇಬ್ಬರೂ ಬೇಕೆಂದರೆ ಮುಂದೆ ಹೋಗಬಹುದು, ಬೇಡವಾದರೆ ಹಿಂದೆ ಹೋಗಬಹುದು. ತಮಗೆ ಸರಿಯೆನಿಸಿದ ಹಾಗೆ ನಡೆದುಕೊಳ್ಳಬಹುದು. ಪಾಪಿಗೋ ತಾನು ಏನು ಮಾಡುತ್ತೇನೆ ಎನ್ನುವುದರ ಅರಿವೇ ಇರುವುದಿಲ್ಲ. ಆದರೆ ಪ್ರಜ್ಞಾಪೂರ್ವಕವಾಗಿ ನಡೆದುಕೊಳ್ಳುವ ಸಂತನ ಮಾತೇ ಬೇರೆ. ಪರಿಸ್ಥಿತಿ ಹೀಗಿರುವಾಗ ಪಾಪಿಗಿಂತ ತಾನೇ ಶ್ರೇಷ್ಠ ಎಂಬ ಅಹಂಭಾವ ಸಂತನಿಗೆ ಬಂದುಬಿಟ್ಟರೆ ತನ್ನ ಸ್ಥಾನದ ಮಹತ್ವವನ್ನೇ ಆತ ಕಳೆದುಕೊಳ್ಳುತ್ತಾನೆ ಎನ್ನುವುದರಲ್ಲಿ ಸಂಶಯವಿಲ್ಲ.*

**- ಮಹಾತ್ಮಾ ಗಾಂಧಿ**

# 'ಯಶಸ್ಸಿನತ್ತ ಪಯಣ'

"ಕೋಪವು ಕರುಣೆಯಾಗಿ, ಮತ್ಸರವು ಪ್ರೇಮವಾಗಿ, ಹಗೆಯು ಪ್ರೀತಿಯಾಗಿ, ಸೇಡು ಸ್ನೇಹವಾಗಿ, ಅಸಾಮರ್ಥ್ಯವು ಸಾಮರ್ಥ್ಯವಾಗಿ, ಆವೇಶವು ಚಿಂತನೆಯಾಗಿ ಬದಲಾಗಬೇಕು. ಹಾಗೆ ಬದಲಾದಾಗಿನ ಅನುಭವವೇ ಅನಿರ್ವಚನೀಯ.

"ನಮಗೆ ಬೇಕಾದ್ದೇನೆಂದರೆ ಪರಿಸ್ಥಿತಿಯನ್ನು ಸಾಕ್ಷೀಭಾವದಿಂದ ನೋಡುವ ಶಕ್ತಿಯನ್ನು ರೂಢಿಸಿಕೊಳ್ಳುವುದು. ಸಮಸ್ಯೆಯನ್ನು ಮತ್ತೊಂದು ತುಂದಿಯಿಂದಲೂ ಪರಿಶೀಲಿಸುವ ಸಾಮರ್ಥ್ಯವನ್ನು ಮೈಗೂಡಿಸಿಕೊಳ್ಳುವುದು.

"ಆಗ ನಮಗೆ ಯಾರೂ ಶತ್ರುಗಳಿರುವುದಿಲ್ಲ, ನಮಗೆ ಸಮಸ್ಯೆಗಳೂ ಇರುವುದಿಲ್ಲ, ನಗುನಗುತ್ತಲೇ ಅವುಗಳನ್ನು ನಿವಾರಿಸುವ ಒಂದು ಮಾರ್ಗ ನಮಗೆಂದೆಂದೂ ಕಾಣುತ್ತಿರುತ್ತದೆ.

"ಅದೇ 'ಯಶಸ್ಸಿನತ್ತ ಪಯಣ...' "

*(ಪುಸ್ತಕದ ಬೆನ್ನುಡಿಯಿಂದ)*

---

## ಭಾಗ ಒಂದು

### ಸಮಸ್ಯೆ:

ಸಮಸ್ಯೆ ಅಂದರೇನು?

ಅರೆ, ಇದೊಳ್ಳೆ ಸಮಸ್ಯೆಯಾಯ್ತಲ್ಲ! ಸಮಸ್ಯೆ ಅಂದ್ರೆ... ಸಮಸ್ಯೆಯೇ. ಕೇವಲ ಮೂರಕ್ಷರಗಳ ಈ ಪದ ನಮ್ಮ 'ಮೂಡ್' ಕೆಡಿಸಿ, ತಲೆಯ ಮೇಲೆ ಕೈ ಹೊತ್ತು ಕುಳಿತುಕೊಳ್ಳುವಂತೆ ಮಾಡುತ್ತದೆ.

ಜೀವನ-ಸಮಸ್ಯೆ-ಸಂಕಟ... ಈ ಮೂರು ಪದಗಳೂ ಮೂರು ಮೂರು ಅಕ್ಷರದವುಗಳೇ. ಜೀವನದಲ್ಲಿ ಸಮಸ್ಯೆ ಉದ್ಭವಿಸುತ್ತವೆ. ಸಮಸ್ಯೆಯಿಂದ ಸಂಕಟ.

ಜೀವನ-ಸಮಸ್ಯೆ-ಸಂಕಟ..... ಇವು ಮೂರು ಸಮುದ್ರಗಳಿದ್ದಂತೆ. ಮೂರನ್ನೂ ಈಜಿ ಪಾರಾಗಬೇಕಾಗುತ್ತದೆ. 'ಆಗದು ಎಂದು.... ಕೈಲಾಗದು ಎಂದು, ಕೈ ಕಟ್ಟಿ ಕುಳಿತರೆ ಸಾಗದು ಕೆಲಸವು ಮುಂದೆ' ಎನ್ನುವುದನ್ನು ನೆನಪು ಮಾಡಿಕೊಳ್ಳಿ. 'ನಡೆಮುಂದೆ ನಡೆಮುಂದೆ, ನುಗ್ಗಿ ನಡೆ ಮುಂದೆ. ಜಗ್ಗದೆಯೆ ಕುಗ್ಗದೆಯೆ ಹಿಗ್ಗಿ ನಡೆ ಮುಂದೆ' ಎನ್ನುವುದು ನಿಮ್ಮ ಸೂತ್ರವಾಗಲಿ. ನಡುವೆಯೆ ಕೈ ಚೆಲ್ಲಿ ಬಿಡುವವರ ಉಸಾಬರಿ ನಿಮಗೆ ಬೇಡ. ಅಂಥವರು ತಮ್ಮ ಸೋಲಿಗೂ ಬಣ್ಣ ಕಟ್ಟುತ್ತಾರೆ.

ರಾಜಕುಮಾರನೊಬ್ಬ ಏಳು ಸಮುದ್ರಗಳನ್ನು ದಾಟಿ, ಆಲದ ಮರದಲ್ಲಿರುವ ಗಿಳಿಯನ್ನು ಹಿಡಿದು ತಂದು, ಮಾಂತ್ರಿಕನನ್ನು ಕೊಂದು, ರಾಜಕುಮಾರಿಯನ್ನು ವರಿಸಿದ ಕಥೆ ನಿಮಗೆ ಗೊತ್ತಿರಬೇಕಲ್ಲ.

ಪರಿಸ್ಥಿತಿ ನಮ್ಮ ಸಂತೋಷವನ್ನು ಅಪಹರಿಸಬಲ್ಲದು. ಆಗ ನಾವು ನಿರಾಶರಾಗದೆ ಕಥೆಯಲ್ಲಿನ ರಾಜಕುಮಾರನಂತೆ, ಸಂಕಟದ ಸಾಗರವನ್ನು ದಾಟಿ, ಸಮಸ್ಯೆಯೊಂದಿಗೆ ಹೋರಾಡಿ ನಮ್ಮ ಸಂತೋಷವನ್ನು ಮರಳಿ ಪಡೆಯಬೇಕಿರುತ್ತದೆ.

ಇಂದಿನ ದಿನಗಳಲ್ಲಿ ಸಮಸ್ಯೆ ಇಲ್ಲದವರು ಯಾರಿದ್ದಾರೆ? ಪ್ರತಿಯೊಬ್ಬನಿಗೂ ಒಂದಿಲ್ಲೊಂದು ಸಮಸ್ಯೆ ಇದ್ದೇ ಇದೆ. ಆ ಸಮಸ್ಯೆಗಳನ್ನು ಹೇಗೆ ಎದುರಿಸಬೇಕು ಎಂಬುದನ್ನು ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪರಿಸ್ಥಿತಿಯನ್ನು ಎದುರಿಸಿ, ಸಮಸ್ಯೆಯೊಂದಿಗೆ ಹೋರಾಡಿ, ಸಂಕಟದ ಸಮುದ್ರ ದಾಟ ಬಂದರೆ- ನಿಮಗಾಗಿ 'ವಿಜಯ' ಕಾಯುತ್ತಿರುತ್ತದೆ.

### ಸಮಸ್ಯೆಗಿಂತಲೂ ಅದರ ಬಗೆಗಿನ ಭಯ ಹೆಚ್ಚಿನದು

ಇದು ಅಕ್ಷರಶಃ ಸತ್ಯ. ವಾಸ್ತವ ಸಮಸ್ಯೆಗಿಂತಲೂ ಅದರ ಬಗ್ಗೆ ಇರುವ ಭಯ ಹೆಚ್ಚಿನ ಸಮಸ್ಯೆಯನ್ನೊಡ್ಡುತ್ತದೆ. 'ಈ ಸಮಸ್ಯೆಗೆ ಏನು ಪರಿಹಾರವಪ್ಪಾ?' ಎನ್ನುವುದೇ ಮಹತ್ತರ ಸಮಸ್ಯೆಯಾಗಿ ಪರಿಣಮಿಸಿಬಿಡುತ್ತದೆ.

ಸಮಸ್ಯೆಯನ್ನು ಕಂಡು ತತ್ತರಿಸುವವರು ಕೆಲವರಾದರೆ, ಎದೆಯೊಡೆದುಕೊಳ್ಳುವವರು ಇನ್ನು ಕೆಲವರು. ಸಮಸ್ಯೆಗೆ ಹೆದರಬೇಕಾದ ಅಗತ್ಯವಿಲ್ಲ. ಹೆದರಿಸಲು ನೋಡುವ ಆ ಸಮಸ್ಯೆಯನ್ನು ಜುಟ್ಟು ಹಿಡಿದು ಬಗ್ಗಿಸಿ, ಅದನ್ನು ಯಶಸ್ಸನ್ನಾಗಿ ಪರಿವರ್ತಿಸಿಕೊಳ್ಳುವುದರಲ್ಲಿಯೇ ನಮ್ಮ ಜಾಣತನವಡಗಿದೆ.

ಈ ಜಗತ್ತಿನಲ್ಲಿರುವ ಸಮಸ್ಯೆಗಳು ಹಲವಾರು ರೀತಿಯವು. ಕೆಲವು ನಮ್ಮನ್ನು ತಲ್ಲಣಕ್ಕೀಡುಮಾಡಿ, ಅವುಗಳ ಕಬಂಧಬಾಹುಗಳಿಂದ ನಾವು ಹೊರಬರುವುದಿಲ್ಲವೇನೋ ಎನ್ನುವ ನಿರಾಸೆ, ಹತಾಶೆಯನ್ನು ಉಂಟುಮಾಡುವಂಥವುಗಳಾಗಿರುತ್ತವೆ. ನಮಗೆ ಅಚ್ಚುಮೆಚ್ಚಾದ ವ್ಯಕ್ತಿಗಳ ಸಾವು, ತುಂಬ ಇಷ್ಟಪಟ್ಟ ವ್ಯಕ್ತಿಗಳು ನಮ್ಮಿಂದ ದೂರವಾಗುವುದು... ಇತ್ಯಾದಿ.

ಇಂತಹ ಸಮಸ್ಯೆ ಉಂಟಾದಾಗ ಅವುಗಳನ್ನು ಎದುರಿಸಿ ನಿಲ್ಲಬಲ್ಲ ಮನೋಸ್ಥೈರ್ಯವನ್ನು ಕೆಲವರಷ್ಟೇ ಪಡೆದಿರುತ್ತಾರೆ. ಇನ್ನು ಕೆಲವರ ವಿಷಯ ನೋಡಿ, ಚಿಲ್ಲರೆ ಸಮಸ್ಯೆಯನ್ನೂ ಪೆಡಂಭೂತ ಮಾಡಿ ಅವರು ಕಸಿವಿಸಿಪಡುತ್ತಾರೆ.

''ಆಕಾಶ ಕಳಚಿ ಬೀಳಲಿದೆ" ಎಂದರೂ, ''ಬಿದ್ದಾಗ ನೋಡಿಕೊಳ್ಳೋಣ" ಎನ್ನುವವರು ಕೆಲವರಾದರೆ, ''ಅಯ್ಯೋ ಆಕಾಶ ಬೀಳುತ್ತಂತಲ್ಲಪ್ಪ, ಅದಕ್ಕೆ ಯಾರಾದರೂ ಊರುಗೋಲು ಕೊಟ್ಟು ನಿಲ್ಲಿಸಬಾರದೆ?" ಎಂದು ತಲ್ಲಣಿಸುವವರು ಕೆಲವರು. ಇಂಥವರನ್ನೆಲ್ಲ ಗಮನಿಸಿದಾಗ ಸಮಸ್ಯೆಯ ಸ್ವರೂಪ, ತೀವ್ರತೆ ಆಯಾ ವ್ಯಕ್ತಿಯ ಸ್ವಭಾವವನ್ನು ಅನುಸರಿಸಿರುತ್ತದೆ ಎನ್ನುವುದು ವೇದ್ಯವಾಗುತ್ತದೆ. ಸಮಸ್ಯೆ ಎನ್ನುವುದಕ್ಕೆ ನಿರ್ದಿಷ್ಟ ಮೌಲ್ಯವೆನ್ನುವುದೇ ಇಲ್ಲವೆನ್ನಬಹುದು.

ನಮ್ಮ ವೇದನೆ, ತಳಮಳವನ್ನು ನಾವು ಗಟ್ಟಿ ಮನಸ್ಸಿನಿಂದ ತಡೆಹಿಡಿಯಬಲ್ಲವರಾದರೆ, ಎಂತಹ ವಿಷಾದವನ್ನಾದರೂ ಸಹಿಸಬಹುದು. ಹಾಲಿನ ಕಡಲನ್ನು ಕಡೆದಾಗ ಉತ್ಪತ್ತಿಯಾದ ಅಮೃತ ಎಲ್ಲರಿಗೂ ಬೇಕಾಯಿತು. ಹಾಲಾಹಲ?! ಅದನ್ನು ಕಂಡು ದೇವ-ದಾನವರೆಲ್ಲ ತಲ್ಲಣಿಸಿದಾಗ ಸಹಾಯಕ್ಕೆ ಶಿವ ಬರಬೇಕಾಯಿತು. ಅದೇ ರೀತಿ ಮನಸ್ಸಿನ ಕಡಲಿನಲ್ಲಿ ಮಥನ ನಡೆದಾಗ ಹುಟ್ಟುವ ಆನಂದಾಮೃತವನ್ನು ಸವಿದಂತೆಯೇ, ವಿಷಾದದ ಹಾಲಾಹಲವೂ ನಮ್ಮ ಪಾಲಿಗೇ. ನಾವೇ ಶಿವನಾಗಬೇಕು.

ಜೀವನವನ್ನು ಅದು ಇರುವಂತೆಯೇ ಒಪ್ಪಿಕೊಳ್ಳಬೇಕು. ಆ ಜೀವನದಲ್ಲಿ ಕೈಲಾದ ಮಟ್ಟಿಗೆ ಅಂದ, ಆನಂದ ತುಂಬುವ ಪ್ರಯತ್ನ ಮಾಡಬೇಕು.

ಅಚ್ಚುಮೆಚ್ಚಿನ ವ್ಯಕ್ತಿಯ ಸಾವು ತುಂಬ ವಿಷಾದಕರವಾಗಿರಬಹುದು. ಆ ದುಃಖ ಅಸಹನೀಯವೂ ಆಗಿರಬಹುದು. ಆದರೆ ಅಂತಹ ಸ್ಥಿತಿ ಶಾಶ್ವತವಲ್ಲ. ನೆರಳು-ಬೆಳಕಿನಾಟದಂತೆ ಈ ಜೀವನ. ದುಃಖದ ಹಿಂದೆ ಸುಖವೂ ಬರುತ್ತದೆ. ಕಾಲ ಮನಸ್ಸಿನ ಗಾಯಕ್ಕೆ ಮದ್ದು ಎನ್ನುವ ಮಾತಿದೆ. ಇದು ಕೇವಲ ನಮ್ಮನ್ನು ನಾವು ಸಮರ್ಥಿಸಿಕೊಳ್ಳುವ ಭಾವನೆ. ಕಾಲವೂ ನಮ್ಮ ಹಿಡಿತದಲ್ಲಿರಬೇಕು. ಬೇಕೆಂದ ಕ್ಷಣದಲ್ಲಿ ದುಃಖವನ್ನು ಮರೆಯಬಲ್ಲವರಾಗಿರಬೇಕು. ಸುಖದಿಂದ ದುಃಖಕ್ಕೆ

ಯಂಡಮೂರಿ ವೀರೇಂದ್ರನಾಥ
ಬರೆದ
ಯಶಸ್ಸಿನತ್ತ ಪಯಣ

ಪ್ರಕಾಶಕರು: ಸಾಹಿತ್ಯ ಪ್ರಕಾಶನ,
ಸಿಟಿ ಕ್ಲಿನಿಕ್ ಕಾಂಪ್ಲೆಕ್ಸ್,
ದಾಜೀಬಾನಪೇಟೆ, ಹುಬ್ಬಳ್ಳಿ-೨೮
ಪುಟಗಳು: ೮ + ೧೫೨
ಬೆಲೆ : ರೂ. ೨೭-೦೦

ದುಃಖದಿಂದ ಸುಖಕ್ಕೆ ರೂಢಿಸಿಕೊಳ್ಳಲು ಒಂದಿಷ್ಟು ವೇಳೆ ಹಿಡಿಯಬಹುದು. ಏಕೆಂದರೆ ಮನಸ್ಸು ಯಂತ್ರವಲ್ಲ- ಗುಂಡಿ ಅದುಮಿದೊಡನೆಯೇ ದುಃಖ ಹೊರಟುಹೋಗಿ ಆನಂದ ಮೂಡಲು. ಆದರೆ ಎಷ್ಟು ಬೇಗ ದುಃಖ, ವಿಷಾದದಿಂದ ಹೊರಬರಲಾಗುತ್ತದೋ ಅಷ್ಟೂ ಒಳ್ಳೆಯದು!

ಪ್ರತಿಯೊಂದು ಸಮಸ್ಯೆಯನ್ನೂ ನಮ್ಮ ಮಾನಸಿಕ ವಿಕಾಸಕ್ಕೆ ಉಪಯೋಗವಾಗುವ ಪಾಠವೆಂದೇ ಭಾವಿಸಬೇಕು. ಸಮಸ್ಯೆಗಳನ್ನು ಎದುರಿಸಿ, ಎದುರಿಸಿ ಮನಸ್ಸು ಹರಿತಗೊಂಡು ಚುರುಕಾಗುತ್ತದೆ.

### ಸಮಸ್ಯೆಗಳೆಷ್ಟು ವಿಧ?

'ಲೋಕೋ ಭಿನ್ನರುಚಿಃ' ಎನ್ನುವ ಉಕ್ತಿಯಂತೆ, ಅದು ಭಿನ್ನ ಸಮಸ್ಯೆಗಳಿಂದೊಡಗೂಡಿದ್ದು ಎಂದೂ ಎನ್ನಬಹುದೇನೋ?! ಹಲವು ಜನ; ಹಲವಾರು ಸಮಸ್ಯೆಗಳು. ಸಮಸ್ಯೆಯ ಭೂತ ಪ್ರತಿಯೊಬ್ಬನನ್ನೂ ಹಿಡಿದುಕೊಂಡಿರುತ್ತದೆ. ಸಮಸ್ಯೆಗಳನ್ನು ಸ್ಥೂಲವಾಗಿ ಮೂರು ರೀತಿ ವಿಭಜಿಸಬಹುದು.

೧. **ಸ್ವಾಭಾವಿಕ ಸಮಸ್ಯೆಗಳು:** ನಮಗೆ ಅಚ್ಚುಮೆಚ್ಚಾದ ವ್ಯಕ್ತಿಗಳ ಸಾವು, ಅಪಘಾತದಿಂದ ಅಂಗವಿಕಲತೆ ಉಂಟಾಗುವುದು, ವಾಸಿಯಾಗದ ಕಾಯಿಲೆಯಾಗುವುದು, ನಿರುದ್ಯೋಗ, ದುರ್ಭರ ದಾರಿದ್ರ್ಯ.... ಇತ್ಯಾದಿ.

೨. **ಉಂಟು ಮಾಡಿಕೊಳ್ಳುವ ಸಮಸ್ಯೆಗಳು:** ವರ್ಷವಿಡೀ ಮೋಜು ಮಾಡಿ, ಕೊನೆಯ ತಿಂಗಳಲ್ಲಿ ಗಡಬಡಿಸಿ, ಹಗಲೂ-ರಾತ್ರಿ ಓದಬೇಕೆಂದುಕೊಳ್ಳುವ ವಿದ್ಯಾರ್ಥಿಗಳ ಸಮಸ್ಯೆ, ಕುರುಡಾಗಿ ಪ್ರೇಮಿಸಿ, ಏನೊಂದು ಉದ್ಯೋಗವಿರದಿದ್ದರೂ ಪ್ರೇಮದ ತೀವ್ರತೆಯಲ್ಲಿ ಮದುವೆಯಾಗಿ ನಂತರ ತಳಮಳಿಸುವ ಪ್ರೇಮಿಗಳ ಸಮಸ್ಯೆ, ದಾಕ್ಷಿಣ್ಯಕ್ಕೋ ಇತರರ ಹೊಗಳಿಕೆಗಾಗಿಯೋ ಬೇರೆಯವರ ಜವಾಬ್ದಾರಿ ಮೈ ಮೇಲೆಳೆದುಕೊಳ್ಳುವವರ ಸಮಸ್ಯೆ, ಮನೆಯಲ್ಲಿ ಅತ್ತೆ-ಸೊಸೆಯರ ಜಗಳ, ಮಾಡಬೇಕಿರುವ ಕೆಲಸಗಳನ್ನು ಮುಂದೂಡುತ್ತ ಬಂದು, ಆ ನಂತರ ಎಲ್ಲವೂ ಒಟ್ಟಿಗೆ ಎದೆ ಮೇಲೇರಿ ಕುಳಿತಾಗ ತಲ್ಲಣಿಸುವವರ ಸಮಸ್ಯೆ... ಹೀಗೇ....

೩. **ಸಮಸ್ಯೆಗಳಲ್ಲದ ಸಮಸ್ಯೆಗಳು:** ಇಂಥವುಗಳೂ ಇವೆ. ಇಂಥ ಸಮಸ್ಯೆಗಳು ಹೆಚ್ಚಾಗಿ ಇರುವುದು ಹೆಂಗಸರಲ್ಲಿ. ಮದುವೆಗೋ ಸಮಾರಂಭಕ್ಕೋ ಯಾವ ಸೀರೆ ಉಡಬೇಕು, ಹೇಗೆ ಮೇಕಪ್ ಮಾಡಿಕೊಳ್ಳಬೇಕು, ಯಾವ ಬಣ್ಣದ ಲಿಪ್‌ಸ್ಟಿಕ್ ಹಚ್ಚಿಕೊಳ್ಳಬೇಕು... ಇತ್ಯಾದಿ ಇತ್ಯಾದಿ.

### ಸಮಸ್ಯೆಯ ಹುಟ್ಟು, ಬೆಳವಣಿಗೆ, ಸಾವು

ಸಮಸ್ಯೆಗೆ ಒಂದು ಹುಟ್ಟು ಇರುವಂತೆ ಬೆಳವಣಿಗೆಯೂ ಇದೆ. ಸಾವೂ ಇದೆ. ಅನಿರೀಕ್ಷಿತ ಘಟನೆ, ಆಘಾತಗಳಿಂದುಂಟಾಗುವ ಸಮಸ್ಯೆ ನಾವು ದುರ್ಬಲ ಮನಸ್ಸಿನವರಾದಲ್ಲಿ ಬೆಳೆದು ನಿಲ್ಲುತ್ತದೆ. ಕೆಲವರು ಅದನ್ನು ಎದುರಿಸಿ, ಮಟ್ಟ ಹಾಕಬಲ್ಲವರಾಗಿರುತ್ತಾರೆ. ದುರ್ಬಲರಾದವರು ಖಿನ್ನತೆಗೊಳಗಾಗಿ ನಿರಾಸೆ, ಹತಾಶೆಯೇ ಮೂರ್ತಿವೆತ್ತವರಂತೆ ದಿನ ತಳ್ಳುತ್ತಿರುತ್ತಾರೆ.

### ಸಮಸ್ಯೆಗಳಿಗೆ ಹೇಗೆ ಸ್ಪಂದಿಸುತ್ತೇವೆ?

ಇದು ಆಯಾ ವ್ಯಕ್ತಿಯ ಮನಸ್ತತ್ವವನ್ನು ಅವಲಂಬಿಸಿರುತ್ತದೆ. ದೃಢಮನಸ್ಸಿನವರು ಸಮಸ್ಯೆ ಎದುರಾದಾಗ ಕುಗ್ಗುವುದಿಲ್ಲ, ಕೈ ಚೆಲ್ಲಿ ಕುಳಿತುಕೊಳ್ಳುವುದಿಲ್ಲ. ಅದರೊಂದಿಗೆ ಕುಸ್ತಿಗೆ ಇಳಿಯುತ್ತಾರೆ. ಇನ್ನು ಕೆಲವರಿರುತ್ತಾರೆ- ಅವರ ಮನಸ್ಸಿನಲ್ಲಿ ಸಮಸ್ಯೆಯನ್ನು ಎದುರಿಸಬೇಕೋ ಅಥವಾ ಅದರಿಂದ ಪಲಾಯನ ಮಾಡಬೇಕೋ ಎನ್ನುವ ಪ್ರಶ್ನೆ ಉದ್ಭವಿಸಿ, ಮಾನಸಿಕ ಸಂಘರ್ಷಕ್ಕೆಡೆ ಮಾಡಿಕೊಡುತ್ತದೆ. ಇಂಥವರಲ್ಲಿ ಬಹಳಷ್ಟು ಜನ ಪಲಾಯನವಾದಿಗಳು. ಈ ಮಾನಸಿಕ ಸಂಘರ್ಷವನ್ನು ತಾಳಲಾಗದೆ ಇವರಲ್ಲಿ ಕೆಲವರು ಕುಡಿತದ ಮೊರೆ ಹೊಕ್ಕರೆ, ಇನ್ನು ಕೆಲವರು ವಿರಕ್ತಿ ವೈರಾಗ್ಯವನ್ನು ಆಶ್ರಯಿಸುತ್ತಾರೆ.

ಇಲ್ಲೊಂದು ವಿಷಯ- ಮನುಷ್ಯನಾದವನಿಗೆ ಸಮಸ್ಯೆಗಳು ಸದಾಕಾಲಕ್ಕೂ ಇರುತ್ತವೆ. ಹಸಿವು ಒಂದು ಸಮಸ್ಯೆ, ನಿದ್ದೆ ಒಂದು ಸಮಸ್ಯೆ..... ಇವೆಲ್ಲ ಮೂಲಭೂತ ಅವಶ್ಯಕತೆಗಳು. ಇವು ಪೂರೈಕೆಯಾದ ಮೇಲೆ ಮನುಷ್ಯನಾದವನನ್ನು ಬೇರೆ ಬೇರೆ ಮಾನಸಿಕ ಸಮಸ್ಯೆಗಳು ಹಿಡಿದುಕೊಳ್ಳುತ್ತವೆ. ಇದೊಂದು ವಲಯ. ಸಮಸ್ಯೆಗಳು ಒಂದರ ಹಿಂದೊಂದರಂತೆ ಸುತ್ತಿ

ಸುತ್ತಿ ಬರುತ್ತಲೇ ಇರುತ್ತವೆ. ಒಂದು ಸಮಸ್ಯೆಯನ್ನು ಪರಿಹರಿಸಿದರೆ ಅದರ ಹಿಂದೆ ಹೊಸದೊಂದು ಸಮಸ್ಯೆ ಸಿದ್ಧ! ಮತ್ತೆ ಅದಕ್ಕೆ ಪರಿಹಾರ ಹುಡುಕುವುದು, ಹಿಂದೆಯೇ ಮತ್ತೊಂದು ಸಮಸ್ಯೆ... ಇದು ನಿರಂತರವಾದುದು.

## ಸಮಸ್ಯೆಗಳನ್ನು ಹೇಗೆ ಎದುರಿಸಬೇಕು?

ಲಕ್ಷ ಬೆಲೆಯ ಪ್ರಶ್ನೆ.

ಸಮಸ್ಯೆ ಎನ್ನುವುದೊಂದು ಇದ್ದ ಮೇಲೆ ಅದನ್ನು ಎದುರಿಸುವ ಮಾರ್ಗಗಳೂ ಇರುತ್ತವೆ. ಸಮಸ್ಯೆಯ ಹಿಡಿತದಿಂದ ಹೇಗೆ ಬಿಡಿಸಿಕೊಳ್ಳಬೇಕೆಂದು ಯೋಚನೆ ಮಾಡುವುದನ್ನೇ 'ವಿಶ್ಲೇಷಣೆ' ಎನ್ನಬಹುದು.

ಸಮಸ್ಯೆಯೊಂದು ಎದುರಾದಾಗ, ಅದರ ಸ್ವರೂಪವೇನು? ಅದು ನಿಜವಾಗಿಯೂ ಸಮಸ್ಯೆಯೆ? ಅಥವಾ ಸಮಸ್ಯೆಯಂತೆ ಕಾಣುವ ಸಮಸ್ಯೆಯೆ? ಅದು ಸ್ವಾಭಾವಿಕವಾದುದೆ? ನಾವಾಗಿ ತಂದುಕೊಂಡಂತಹುದೆ? ಎಂಬುದನ್ನೆಲ್ಲ ವಿಶ್ಲೇಷಿಸಿ ನೋಡಿದಾಗ ಪರಿಹಾರ ಸಿಗುವುದೇನೂ ಕಷ್ಟವಾಗಲಾರದು.

ಈ ರೀತಿ ವಿಶ್ಲೇಷಣೆ ಮಾಡಬೇಕಾದರೆ ಮೊದಲು ನಮ್ಮ ಮನಸ್ಸು ಶಾಂತವಾಗಿರಬೇಕಾದುದು ಮುಖ್ಯ. ದಿಗಿಲು, ಕಳವಳ ನಮ್ಮಲ್ಲಿರಕೂಡದು.

ನಿಮಗೆ ಏನಾದರೂ ನೋವು, ಸಂಕಟ ಉಂಟಾದಾಗ ಕೊರಗುತ್ತೀರಿ. ಆ ಕೊರಗನ್ನು ಮನಸ್ಸಿನಲ್ಲಿ ಉಳಿಯಲು ಬಿಡಬೇಡಿ. ನಿಮ್ಮ ನೋವು, ಕೊರಗನ್ನು ಹೊರಹಾಕಿ. ನಿಮ್ಮ ಭಾವನೆಗಳನ್ನು ಇತರರೊಂದಿಗೆ ಹಂಚಿಕೊಳ್ಳಿ. ಮನಸ್ಸು ಹಗುರವಾಗುತ್ತದೆ. ಅಂತಹ ಆತ್ಮೀಯರು ನಿಮಗಿಲ್ಲವೆಂದರೆ ಡೈರಿಯಲ್ಲಿ ಬರೆದಿಡಿ. ಡೈರಿ ಬರೆಯುವ ರೂಢಿ ಇಲ್ಲವೆಂದರೆ ಸಂಗೀತ, ಚಿತ್ರಲೇಖನ..... ಹೀಗೆ ಯಾವುದಾದರೂ ಒಂದು ಕಲೆ, ಹವ್ಯಾಸದ ಮೂಲಕ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಿ.

> **ನಮ್ಮ ವೇದನೆಯನ್ನೂ ಆಕ್ರೋಶವನ್ನೂ ಮನೋನಿಗ್ರಹದಿಂದ ಎದುರಿಸುವುದು ಸಾಧ್ಯವಾದರೆ, ಎಂತಹ ವಿಷಾದವನ್ನೇ ಆಗಲಿ ಸಹಿಸುವುದು ಅಷ್ಟು ಕಷ್ಟವೇನಲ್ಲ.**

ನಿಮಗೆ ಅಂತಹವುದ್ಯಾವುದೂ ಗೊತ್ತಿಲ್ಲವೆ? ಪರವಾಗಿಲ್ಲ. ಬೇರೊಂದು ಮಾರ್ಗವೂ ಇದೆ. ಅದು 'ದೈಹಿಕ ಶ್ರಮ.' ದೈಹಿಕ ಶ್ರಮದಲ್ಲಿ ನಿಮ್ಮನ್ನು ನೀವು ತೊಡಗಿಸಿಕೊಳ್ಳುವುದರ ಮೂಲಕ ಮನಸ್ಸಿನ ಉದ್ವಿಗ್ನತೆಯನ್ನು ಕಳೆದುಕೊಳ್ಳಬಹುದು. ಯೋಗಾಭ್ಯಾಸ, ವ್ಯಾಯಾಮ, ತಿರುಗಾಟ, ಓಟ, ಆಟ– ಇವೆಲ್ಲವೂ ದೈಹಿಕ ಶ್ರಮವನ್ನುಂಟು ಮಾಡುವ ಕ್ರಿಯೆಗಳು. ದೈಹಿಕ ಶ್ರಮದಿಂದ ಶರೀರ ಬಳಲುತ್ತದೆ. ಅದರಿಂದಾಗಿ ಒಳ್ಳೆಯ ನಿದ್ದೆ ಬರುತ್ತದೆ. ಒಳ್ಳೆಯ ನಿದ್ದೆ ಮನಸ್ಸಿನ ಒತ್ತಡಕ್ಕೆ ರಾಮಬಾಣ.

ಸಾಮಾನ್ಯವಾಗಿ ಗಂಡಸರಿಗಿಂತಲೂ ಹೆಂಗಸರಿಗೇ ಮಾನಸಿಕ ಸಮಸ್ಯೆಗಳು ಹೆಚ್ಚು. ಗಂಡಸರು ಆಫೀಸ್ ಕೆಲಸ, ಬೇರೆ ಇತರ ಹವ್ಯಾಸಗಳಲ್ಲಿರುವಾಗ ಮನಸ್ಸು ಅವುಗಳ ಮೇಲೇ ಕೇಂದ್ರೀಕೃತವಾಗಿರುತ್ತದಾದ್ದರಿಂದ ಇತರ ಯೋಚನೆಗಳು ಅವರನ್ನು ಪೀಡಿಸುವುದಿಲ್ಲ. ಆದರೆ ಹೆಂಗಸರ ವಿಷಯದಲ್ಲಿ ಹಾಗಲ್ಲ. (ಕೆಲವು ಅಪವಾದಗಳಿರಬಹುದಾದರೂ) ಅವರ ಮನಸ್ಸು ತಾವು ಮಾಡುವ ಕೆಲಸದಲ್ಲಿ ಮಗ್ನವಾಗುವುದಿಲ್ಲ. ಮನೆಗೆಲಸಗಳಲ್ಲಿ, ಅಂದರೆ ಅಕ್ಕಿ ಹಸನುಮಾಡುವಾಗ, ಬಟ್ಟೆ ಒಗೆಯುವಾಗ, ಪಾತ್ರೆ ತಿಕ್ಕುವಾಗ, ಕೊನೆಗೆ ಶೃಂಗಾರದಲ್ಲಿರುವಾಗ ಕೂಡ– ಶರೀರ ಯಾಂತ್ರಿಕವಾಗಿ ಕೆಲಸ ಮಾಡುತ್ತಿದ್ದರೆ ಮನಸ್ಸು ಸಮಸ್ಯೆಗಳ ಬಗ್ಗೆ ಯೋಚಿಸುತ್ತಿರುತ್ತದೆ. ಇದರಿಂದ ಹೊರಬರಬೇಕೆಂದರೆ ಮಾಡುವ ಕೆಲಸದ ಮೇಲೆಯೇ ಗಮನವನ್ನು ಕೇಂದ್ರೀಕರಿಸುವುದು ಮುಖ್ಯ. ಅದರಿಂದಾಗಿ ಮನಸ್ಸಿನಲ್ಲಿನ ದಿಗಿಲು ಕಡಿಮೆಯಾಗುತ್ತದೆ.

'ಖಾಲಿ ಮನಸ್ಸು ದೆವ್ವಗಳ ಕಾರಖಾನೆ' ಎನ್ನುತ್ತಾರೆ. ಮನಸ್ಸಿಗೆ ಪುರಸೊತ್ತು ಕೊಡಬೇಡಿ. ಒಳ್ಳೆಯ ಪುಸ್ತಕಗಳನ್ನು ಓದಿ. ಸಂಗೀತ ಕೇಳಿ ಆನಂದಿಸಿ. ನಿಮಗೆ ಆಸಕ್ತಿ ಇರುವ ಹವ್ಯಾಸವನ್ನು ಅಭಿವೃದ್ಧಿಪಡಿಸಿಕೊಳ್ಳಿ. ಮನೆಯ ಮುಂದೆ ಖಾಲಿ ಸ್ಥಳ ಇದ್ದರೆ ತೋಟಗಾರಿಕೆ, ನಿಮ್ಮ ಮಕ್ಕಳ ಓದಿನ ಬಗ್ಗೆ ಕಾಳಜಿ ವಹಿಸುವುದು– ಇವುಗಳು ಕೂಡ ಮನಸ್ಸನ್ನು ಬೇರೆಡೆಗೆ ತಿರುಗಿಸಿ ದಿಗಿಲನ್ನು ಕುಗ್ಗಿಸುತ್ತವೆ.

ನಿಮಗೆ ಓದಿನ ಬಗ್ಗೆ ಆಸಕ್ತಿ ಇರುವುದಾದರೆ, ನಿಮಗೆ ಆಸಕ್ತಿ ಇರುವ ವಿಷಯ ಆರಿಸಿಕೊಂಡು, ಖಾಸಗಿಯಾಗಿಯಾದರೂ ಪರೀಕ್ಷೆಕಟ್ಟಿ. ಓದಿಗೂ ವಯಸ್ಸಿಗೂ ಸಂಬಂಧವಿಲ್ಲ. ಯಾವ ವಯಸ್ಸಿನಲ್ಲಿಯಾದರೂ ವಿದ್ಯಾರ್ಜನೆ ಮಾಡಬಹುದು. ಜನ ನಗುತ್ತಾರೆಯೆ? ನಗಲಿ ಬಿಡಿ. ಅದರಿಂದ ನಿಮಗೇನಂತೆ?

ನಿಮಗೆ ಹಿಡಿಸಿದ ಕೆಲಸವನ್ನು ನೀವು ಮನಃಪೂರ್ವಕವಾಗಿ, ಪ್ರಾಮಾಣಿಕವಾಗಿ ಮಾಡಿ. ಇತರರು ಏನೆಂದುಕೊಳ್ಳುತ್ತಾರೋ ಎಂದುಕೊಳ್ಳತೊಡಗಿದರೆ ನಿಮ್ಮ ಅಭಿವೃದ್ಧಿಗೆ ಅಡಿಗಡಿಗೂ ಆತಂಕ ಬಂದೊದಗುತ್ತದೆನ್ನುವುದನ್ನು ನೆನಪಿಟ್ಟುಕೊಳ್ಳಿ.

ಒಳ್ಳೆಯ ಅಭಿರುಚಿ, ನಡತೆ ಇರುವವರ ಸ್ನೇಹ ಬೆಳೆಸುವುದು ಒಳ್ಳೆಯದು. ಅವರ ಪ್ರಭಾವ ನಿಮ್ಮನ್ನು ನೀವು ತಿದ್ದಿಕೊಳ್ಳುವಲ್ಲಿ ನೆರವಾಗಬಲ್ಲದು.

ನಮಗೆ ಸ್ನೇಹಿತರು, ಆತ್ಮೀಯರೆನ್ನುವವರು ಕೆಲವರಾದರೂ ಬೇಕು. ನಮ್ಮ ತಪ್ಪು-ಒಪ್ಪುಗಳೊಂದಿಗೆ ನಮ್ಮನ್ನು ಸ್ವೀಕರಿಸುವವರು, ನಮ್ಮ ದುಃಖಕ್ಕೆ ಸ್ಪಂದಿಸುವವರು, ನಮ್ಮ ಮೇಲೆ ನಂಬಿಕೆ ಇಡುವವರು, ನಮ್ಮ ತಪ್ಪು ತಿದ್ದಬಲ್ಲವರು. ನಮ್ಮನ್ನು ಗೌರವಿಸುವವರು- ಇಂತಹ ಆತ್ಮೀಯರು, ಸ್ನೇಹಿತರಿದ್ದರೆ ನಮಗೆ ಬಹಳ ಒಳಿತಾಗುತ್ತದೆ.

ಸ್ನೇಹಿತರಿಗಿಂತಲೂ ಮಿಗಿಲಾದ ಸ್ನೇಹಿತರು- ಪುಸ್ತಕಗಳು. ಅವು ನಿಮಗೆ ಜ್ಞಾನ ವಿನೋದ, ಮನೋರಂಜನೆ ನೀಡುತ್ತವೆ. ಬದಲಿಗೆ ನಿಮ್ಮಿಂದ ಏನನ್ನೂ ಬಯಸುವುದಿಲ್ಲ. ಒಂದು ಸಲ ಪುಸ್ತಕಗಳೊಂದಿಗೆ ಸಖ್ಯ ಬೆಳೆಸಿದ ನಂತರ ಜೀವನದಲ್ಲಿ ನಿಜವಾದ ಆನಂದವೆಂದರೇನೆಂಬುದು ಗೊತ್ತಾಗುತ್ತದೆ. ಕಾಡು ಹರಟೆಯಲ್ಲಿ ಕಾಲ ಕಳೆಯುವುದಕ್ಕಿಂತಲೂ ಪುಸ್ತಕವೊಂದನ್ನು ಓದುವುದು ಉತ್ತಮ.

## ಮಕ್ಕಳ ಸಮಸ್ಯೆಗಳು

ಮಕ್ಕಳಿಗೂ ಹುಟ್ಟದಾಗಿನಿಂದ ಯಾವುದಾದರೂ ಒಂದು ಸಮಸ್ಯೆ ಇರುತ್ತದೆ. ತಾಯಿಯ ಗರ್ಭದಿಂದ ಈ ಜಗತ್ತಿಗೆ ಬಂದೊಡನೆಯೇ ಹಾಲು ಕುಡಿಯಲಾರಂಭಿಸುವುದರಿಂದ ಮಗುವಿನ 'ಹೋರಾಟ' ಶುರುವಾಗುತ್ತದೆ. ಅಲುಗಾಡದೆ ಮಲಗಿರುವ ಹಂತದಿಂದ ಹಿಡಿದು ಬೋರಲು ಮಲಗುವುದು, ಅಂಬೆಗಾಲಿಡುವುದು, ಕುಳಿತುಕೊಳ್ಳುವುದು, ಎದ್ದು ನಿಲ್ಲುವುದು, ನಡೆಯುವುದು, ಓಡುವುದು- ಇವೆಲ್ಲ ಹಂತ ಹಂತವಾಗಿ ಮಗು ಎದುರಿಸುವ ಸಮಸ್ಯೆಗಳಲ್ಲಿನ ಭಾಗಗಳು. ಇವು ಶಾರೀರಿಕ ಬೆಳವಣಿಗೆಯಲ್ಲಿನ ಸಮಸ್ಯೆಗಳು ಕೂಡ.

ಮಕ್ಕಳಲ್ಲಿ ಮಾನಸಿಕ ಸಮಸ್ಯೆಗಳೂ ಇರುತ್ತವೆ. ಮನುಷ್ಯರನ್ನು ಗುರುತು ಹಿಡಿಯತೊಡಗಿದಾಗಿನಿಂದ ಮಕ್ಕಳಿಗೆ ಮಾನಸಿಕ ಸಮಸ್ಯೆಗಳು ಶುರುವಾಗುತ್ತವೆ.

ಮಗು ತನ್ನ ತಂದೆ-ತಾಯಿಯನ್ನು ಗುರುತಿಸಿದೊಡನೆಯೇ ನಗುವುದೋ ಕೇಕೆ ಹಾಕುವುದೋ ಮಾಡುತ್ತದೆ. ಮಾತಿನಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯವನ್ನು ಪಡೆದುಕೊಂಡಿರದ ಮಗು ನಗು, ಕೇಕೆಗಳ ಮೂಲಕ ತನ್ನ ಭಾವನೆಯನ್ನು ವ್ಯಕ್ತಪಡಿಸಲು ಪ್ರಯತ್ನಿಸುತ್ತದೆ. ನಿಮ್ಮನ್ನು ಗುರುತಿಸಿ ತನ್ಮೂಲಕ ತಾನೂ ಮನ್ನಣೆ ಪಡೆಯಬಯಸುತ್ತದೆ. ಹೊಸಬರನ್ನು ಕಂಡಾಗ ಹೆದರುತ್ತದೆ. ಅವರು ತನ್ನನ್ನು ಎತ್ತಿಕೊಳ್ಳಲು ಬಂದರೆ ಕಿಟಾರನೆ ಕಿರುಚಿ ಅಳತೊಡಗುತ್ತದೆ. ಹೊಸಬರಿಂದ ತನಗುಂಟಾದ ಭಯವನ್ನು ಅಳುವಿನ ಮೂಲಕ ವ್ಯಕ್ತಪಡಿಸಿ ತನ್ನ ತಂದೆ ತಾಯಿಗಳತ್ತ ಕೈ ಚಾಚುತ್ತದೆ. ಇದು ಆ ಮಗುವಿನ ದೃಷ್ಟಿಯಲ್ಲಿ ಒಂದು ಸಮಸ್ಯೆಯೆ.

ಚಿಕ್ಕಮಕ್ಕಳಲ್ಲಿ ಬಹಳಷ್ಟು ಜನರಿಗೆ ಮಣ್ಣು ತಿನ್ನುವ ಚಟವಿರುತ್ತದೆ. ಅವರ ತಂದೆ ತಾಯಿಗಳು ಅದಕ್ಕೋಸ್ಕರ ಆ ಮಕ್ಕಳನ್ನು ಗದರಿಸುತ್ತಿರುತ್ತಾರೆ. ಮಣ್ಣು ತಿನ್ನುವ ಕೋರಿಕೆ ಒಂದೆಡೆ ಬಲವಾಗಿ ಸೆಳೆಯುತ್ತಿದ್ದರೆ, ಮತ್ತೊಂದೆಡೆ ದೊಡ್ಡವರು ಬೈಯುತ್ತಾರೆನ್ನುವ ಭಯ. ಮಕ್ಕಳಿಗೆ ಇದೂ ಒಂದು ಸಮಸ್ಯೆ.

ಚಿಕ್ಕ ಮಕ್ಕಳಲ್ಲೂ ಖಿನ್ನತೆ ಇರುತ್ತದೆ. ಹಾಯಾಗಿ ಉಂಡು, ತಿಂದು, ಚೆನ್ನಾಟವಾಡಿ ತಾಯಿಯ ಸೆರಗು ಹಿಡಿದು ಸುತ್ತಾಡುವ ಎಳೆಯ ವಯಸ್ಸಿನಲ್ಲಿ ಮಕ್ಕಳನ್ನು ನರ್ಸರಿ ಶಾಲೆಗೆ ದಬ್ಬಲಾಗುತ್ತದೆ. ಅಲ್ಲಿಯವರೆಗೂ ಮನೆಯಲ್ಲಿ ಹಾಯಾಗಿರುವ ಮಕ್ಕಳು, ಇದ್ದಕ್ಕಿದ್ದಂತೆ ಹೊಸ ವಾತಾವರಣದಲ್ಲಿ ಬಿದ್ದಾಗ ಭಯದಿಂದ ದಿಗಿಲುಗೊಳ್ಳುತ್ತಾರೆ. ನೀರಿನಿಂದ

ಹೊರಬಿದ್ದ ಮೀನಿನಂತೆ ಚಡಪಡಿಸುತ್ತಾರೆ. ಯಾವಾಗ ಅಮ್ಮನ ಮಡಿಲು ಸೇರುತ್ತೇನೋ ಎಂದು ಅಳು ಮೋರೆ ಮಾಡಿಕೊಂಡು ಕಾಯುತ್ತಿರುತ್ತಾರೆ. ಇದೂ ಒಂದು ಸಮಸ್ಯೆ.

ತಮ್ಮ ನೋವನ್ನು ಸರಿಯಾಗಿ ವಿವರಿಸಿ ಹೇಳುವ ಸಾಮರ್ಥ್ಯ ಮಕ್ಕಳಿಗಿರುವುದಿಲ್ಲ. ತಮಗೆ ಬೇಕಾದುದನ್ನು ತಂದೆ-ತಾಯಿ ಕೊಡದಿದ್ದರೆ, ಅದನ್ನು ಅತ್ತು, ಹಟಮಾಡಿ ಪಡೆಯಬೇಕೆಂದುಕೊಳ್ಳುತ್ತಾರೆ. ತಾವು ಕೇಳಿದುದನ್ನು ದೊಡ್ಡವರು ಯಾಕೆ ಕೊಡುವುದಿಲ್ಲವೆನ್ನುವುದೂ ಅವರ ಪಾಲಿಗೆ ದೊಡ್ಡ ಸಮಸ್ಯೆ. ಇಂತಹ ಸಂದರ್ಭಗಳಲ್ಲಿ ಮಕ್ಕಳನ್ನು ದಂಡಿಸುವು ದರಿಂದ ಪ್ರಯೋಜನವಿಲ್ಲ. ಮೆಲ್ಲಗೆ ರಮಿಸಿ, ಅವರ ಗಮನವನ್ನು ಬೇರೆ ಕಡೆ ಸೆಳೆಯುವ ಪ್ರಯತ್ನ ಮಾಡಬೇಕು. ತಂದೆ ತಾಯಿಗಳಾದವರು ಆ ನೈಪುಣ್ಯವನ್ನು ಸಾಧಿಸಿಕೊಳ್ಳಬೇಕು.

ಶಾಲೆಯಲ್ಲಿ ಮಕ್ಕಳಿಗೆ ಯಾರಾದರೂ ಶಿಕ್ಷಕ ಅಥವಾ ಶಿಕ್ಷಕಿಯ ಮೇಲೆ ವಿಶೇಷ ಅಭಿಮಾನವುಂಟಾಗಬಹುದು. ಆ ಶಿಕ್ಷಕ ಅಥವಾ ಶಿಕ್ಷಕಿ 'ಐಡಿಯಲ್-ಹಿ' ಅಥವಾ 'ಐಡಿಯಲ್-ಷಿ' ಆಗಿರಬಹುದು. ಅಂತಹವರು ಬೇರೆಡೆ ವರ್ಗವಾಗಿಯೋ ಇನ್ನಾವುದಾದರೂ ಕಾರಣದಿಂದಲೋ ಹೊರಟು ಹೋದರೆಂದರೆ ಅದೂ ಮಕ್ಕಳಲ್ಲಿ ಮಾನಸಿಕ ಖಿನ್ನತೆಯನ್ನುಂಟುಮಾಡ ಬಲ್ಲದು.

ಇಂದಿನ ಸಮಾಜದಲ್ಲಿ ಬದುಕು ಮತ್ತಷ್ಟು ಕ್ಲಿಷ್ಟಮಯವಾಗಿದೆ. ವಿಧವಿಧವಾದ ವಿದ್ಯೆ, ನೌಕರಿಗಳು ಬಂದಿವೆ. ವಿದ್ಯಾವಂತರ ಸಂಖ್ಯೆ ಹೆಚ್ಚುತ್ತಿದೆ. ನೀವು ಚಿಕ್ಕವರಿರುವಾಗ ನಿಮ್ಮ ತಂದೆ ತಾಯಿಗಳಿಗೆ ತಮ್ಮ ಮಕ್ಕಳನ್ನು ಹೇಗೆ ಬೆಳೆಸಬೇಕು? ಎಂದು ಚಿಂತಿಸಬೇಕಾದ ಅಗತ್ಯ ಉಂಟಾಗಿರಲಿಕ್ಕಿಲ್ಲ. ಆದರೆ ಈಗಿನ ಪರಿಸ್ಥಿತಿ ಹಾಗಿಲ್ಲ. ಮಕ್ಕಳನ್ನು ಬೆಳೆಸುವ ವಿಷಯದ ಬಗ್ಗೆ ಹಲವಾರು ಸಿದ್ಧಾಂತಗಳು, ವ್ಯಾಖ್ಯಾನಗಳು ಇವೆ. ಯಾರಿಗೆ ಯಾವುದು ಸೂಕ್ತ ಎನ್ನುವುದನ್ನು ನಾವೇ ತಿಳಿದುಕೊಳ್ಳಬೇಕಿರುತ್ತದೆ.

ಮಕ್ಕಳು ಬೆಳೆದಂತೆಲ್ಲ ಎಲ್ಲವನ್ನೂ ಪರಿಶೀಲಿಸಿ ನೋಡಿ, ಯೋಚಿಸುವುದನ್ನು ಕಲಿತುಕೊಳ್ಳುತ್ತಾರೆ. ಬೆಳೆದಂತೆಲ್ಲ ಮಕ್ಕಳ ಪ್ರಪಂಚ ವಿಸ್ತಾರಗೊಳ್ಳುತ್ತದೆ. ತಂದೆ, ತಾಯಿ, ಶಿಕ್ಷಕರು, ಸಹಪಾಠಿಗಳು, ಇವರೆಲ್ಲರ ಮನ್ನಣೆ, ಮೆಚ್ಚುಗೆ ಪಡೆಯಬೇಕು ಎನ್ನುವ ಕಾತುರ ಮಕ್ಕಳಲ್ಲಿ ಉದ್ವಿಗ್ನತೆಯ ಸಮಸ್ಯೆಯನ್ನು ಉಂಟು ಮಾಡುತ್ತದೆ.

ಮಕ್ಕಳೊಂದಿಗೆ ಉಂಟಾಗುವ ಇನ್ನೊಂದು ಪ್ರಮುಖ ತೊಡಕು 'ತಲೆಮಾರಿನ ಅಂತರ'ದ್ದು. ನಿಮ್ಮ ತಂದೆಯಂತೆ ನೀವಿಲ್ಲ. ನಿಮ್ಮಂತೆ ನಿಮ್ಮ ಮಕ್ಕಳಿರುವುದಿಲ್ಲ. ನೀವು ನಿಮ್ಮ ತಂದೆಗೆ ಹೆದರಿ ಗಡಗಡನಡುಗುತ್ತಿದ್ದರೆ, ನಿಮ್ಮ ಮಕ್ಕಳು ನಿಮ್ಮನ್ನು ಕಂಡರೆ ಒಂದಿಷ್ಟೂ ಹೆದರದಿರಬಹುದು. ಇಷ್ಟಕ್ಕೇ ಮಕ್ಕಳಲ್ಲಿ ಶಿಸ್ತು ಕಡಿಮೆಯಾಗುತ್ತಿದೆಯೆಂದು ನೀವು ಅಂದುಕೊಳ್ಳಬೇಕಾದುದಿಲ್ಲ. ತಲೆಮಾರಿನಲ್ಲಿನ ಅಂತರ ಇದೆಂಬುದನ್ನು ನೀವು ಗ್ರಹಿಸಿದರೆ ಸಾಕು.

ನಿಮಗೂ ನಿಮ್ಮ ಮಕ್ಕಳಿಗೂ ಅನೇಕ ವಿಷಯಗಳಲ್ಲಿ ತಿಕ್ಕಾಟವುಂಟಾಗಬಹುದು. ಆ ತಿಕ್ಕಾಟಗಳನ್ನು ನವಿರಾಗಿ ಬಗೆಹರಿಸಿ ಮಕ್ಕಳ ಮಾನಸಿಕ, ದೈಹಿಕ ವಿಕಾಸಕ್ಕೆ ಸಹಾಯ ಮಾಡುವುದು ತಂದೆ ತಾಯಿಗಳ ಕರ್ತವ್ಯ.

ಇವುಗಳಲ್ಲದೆ ಅಭಿರುಚಿಗಳಲ್ಲೂ ಹಲವಾರು ವ್ಯತ್ಯಾಸ ಇರಬಹುದು. ನಿಮಗೆ ಡಾ. ರಾಜಕುಮಾರ್ ಹಿಡಿಸಿದ್ದರೆ, ನಿಮ್ಮ ಮಕ್ಕಳಿಗೆ ರವಿಚಂದ್ರನ್ ಇಷ್ಟವಾಗಬಹುದು. ಭರತನಾಟ್ಯ ನಿಮಗೆ ಪ್ರಿಯವಾಗಿದ್ದರೆ, ನಿಮ್ಮ ಮಗನಿಗೆ ಬ್ರೇಕ್ ಡ್ಯಾನ್ಸ್ ಆಕರ್ಷಿಸಿರಬಹುದು. ನಿಮ್ಮ ಅಭಿರುಚಿಯೇ ನಿಮ್ಮ ಮಕ್ಕಳಲ್ಲಿಯೂ ಇರಬೇಕೆಂದುಕೊಳ್ಳಬೇಡಿ. ಇವೆಲ್ಲ ತಲೆಮಾರಿನ ಅಂತರದಲ್ಲಿನ ಭಾಗಗಳು.

ಮಕ್ಕಳನ್ನು ಬೆಳೆಸುವುದು ಒಂದು ಅದ್ಭುತ ಕಲೆ. ಪ್ರತಿಯೊಬ್ಬ ತಂದೆ ತಾಯಿಯೂ ಅದನ್ನು ರೂಢಿಸಿಕೊಳ್ಳಬೇಕು. ಮಕ್ಕಳನ್ನು ಶಿಸ್ತಿನಿಂದ ಬೆಳೆಸಬೇಕು. ನಿಜ. ಆದರೆ ಶಿಸ್ತೆಂದರೆ ದಂಡಿಸುವುದು ಎಂದರ್ಥವಲ್ಲ. ಮಕ್ಕಳನ್ನು ಪ್ರೇಮಿಸಿ. ಮನಸ್ಸು ಚುಚ್ಚುವ ಮಾತಾಡಬೇಡಿ. ಅವರಿಗೂ ಆತ್ಮಗೌರವವಿರುತ್ತದೆ. ಒಳ್ಳೆಯ ಮಾತಿನಿಂದ ಅವರನ್ನು ತಿದ್ದುವುದು ಸಾಧ್ಯವಿದೆ ಎನ್ನುವುದನ್ನು ನೆನಪಿಟ್ಟುಕೊಳ್ಳಿ. ಮನೆ ಎನ್ನುವುದು ಮಕ್ಕಳ ಪಾಲಿಗೆ ಸೆಂಟ್ರಲ್ ಜೈಲಿನಂತಿರಬಾರದು. ಮಕ್ಕಳ ಮಾನಸಿಕ ವಿಕಾಸವಾಗಬೇಕೆಂದರೆ, ಮನೆಯಲ್ಲಿನ ವಾತಾವರಣ ಆಹ್ಲಾದಕರವಾಗಿರಬೇಕಾದುದು ಮುಖ್ಯ. ತಂದೆ-ತಾಯಂ ದಿರಲ್ಲಿ ಪರಸ್ಪರ ಅನ್ಯೋನ್ಯತೆ ಇರಬೇಕು. ಒಬ್ಬರ ಬಗ್ಗೆ ಇನ್ನೊಬ್ಬರಿಗೆ ಗೌರವವಿರಬೇಕು. ಅಂತಹ ವಾತಾವರಣವಿರುವಾಗ

ಮಕ್ಕಳು ಮೊದಲು ಹಟ ಮಾಡಿದರೂ, ನಂತರ ಅರ್ಥ ಮಾಡಿಕೊಂಡು ಶಿಸ್ತಿನಿಂದ ಇರುವುದನ್ನು ಕಲಿಯುತ್ತಾರೆ.

ನಿಮಗೆ ಯಾರ ಮೇಲೋ ಕೋಪ ಉಂಟಾಗಿರುತ್ತದೆ. ಅದನ್ನು ಅವರ ಮೇಲೆ ವ್ಯಕ್ತಪಡಿಸಲಾಗದ ಅಸಹಾಯಕತೆ ನಿಮ್ಮದಾಗಿರುತ್ತದೆ. ಅದನ್ನು ನೀವು ಮನೆಗೆ ಬಂದು ನಿಮ್ಮ ಹೆಂಡತಿಯ ಮೇಲೆ ತೋರಿಸುತ್ತೀರಿ. ನಿಮ್ಮ ಹೆಂಡತಿ ನಿಮಗೆ ಎದುರಾಡಲಾರಳು. ತನ್ನ ಸಿಟ್ಟನ್ನು ಮಕ್ಕಳ ಮೇಲೆ ತೋರಿಸುತ್ತಾಳೆ. ಮಕ್ಕಳು ಇಲ್ಲಿ ಬಲಿಪಶುಗಳಾಗುತ್ತಾರೆ. ಇಂತಹ ಪ್ರವೃತ್ತಿ ಒಳ್ಳೆಯದಲ್ಲವೆನ್ನುವುದು ನೀವು ಬೇಗ ಗ್ರಹಿಸಿದಷ್ಟೂ ಒಳ್ಳೆಯದು.

### ಮನುಷ್ಯ-ಮನಸ್ಸು

'ಮನುಷ್ಯ' ಎನ್ನುವ ಪದದ ವ್ಯಾಖ್ಯೆ ಏನು? ಮನುಷ್ಯನೆಂದರೆ ಹೊರನೋಟಕ್ಕೆ ಕಂಡುಬರುವ ಆಕಾರವಷ್ಟೇ ಅಲ್ಲ. ಮನಸ್ಸು, ಆಲೋಚನೆ, ವ್ಯಕ್ತಿತ್ವ, ವರ್ತನೆ ಇವೆಲ್ಲವುಗಳ ಒಟ್ಟು ರೂಪವೇ ಮನುಷ್ಯ.

'ಮನಸ್ಸು' ಎಂದರೇನು? ಅದು ನಮ್ಮ ಶರೀರದಲ್ಲಿ ಎಲ್ಲಿ ಯಾವ ಭಾಗದಲ್ಲಿ ಇದೆ? ಮಿದುಳಿನಲ್ಲಿದೆಯೆ? ಎದೆಯಲ್ಲಿದೆಯೆ? ಹೊಟ್ಟೆಯಲ್ಲಿದೆಯೆ? ಇದು ಉತ್ತರ ಸಿಗದ ಪ್ರಶ್ನೆ. ಶರೀರದಂತೆ ಇದಕ್ಕೊಂದು ಆಕಾರವಿಲ್ಲ. ಆದರೆ ಇಡೀ ಶರೀರದ ಮೇಲೆ ಇದು ನಿಯಂತ್ರಣವಿರಿಸಿಕೊಂಡಿರುತ್ತದೆ, ಶರೀರವನ್ನೆಲ್ಲ ವ್ಯಾಪಿಸಿರುತ್ತದೆ.

ಈ ಮನಸ್ಸೆಂಬುದು ಅದೆಷ್ಟು ಭಯಂಕರವಾದುದೆಂದರೆ, ಮನುಷ್ಯನೊಬ್ಬನ ಮನಸ್ಸನ್ನು ಭೂತಗನ್ನಡಿಯೊಳಗಿಟ್ಟು, ಆ ಮನಸ್ಸಿನಲ್ಲಿ ಎಂತೆಂತಹ ಯೋಚನೆಗಳು ಸುಳಿದಾಡುತ್ತಿರುತ್ತವೆ ಎಂಬುದನ್ನು ನೋಡಬಲ್ಲ ಶಕ್ತಿ ಮಾನವನಿಗಿದ್ದಿದ್ದರೆ, ಅವನ್ನೆಲ್ಲ ನೋಡಿ ಸಹಿಸಲಾಗದೆ ಆತ್ಮಹತ್ಯೆ ಮಾಡಿಕೊಳ್ಳುವುದೇ ಅವನಿಗೆ ಕೊನೆಯ ಗತಿಯಾಗಿರುತ್ತಿತ್ತು.

ಬಹಳಷ್ಟು ಜನರಲ್ಲಿ ಸ್ವಾರ್ಥ, ಅಸೂಯೆ, ದ್ವೇಷ, ಹಗೆ ತುಂಬಾ ತೀವ್ರಮಟ್ಟದಲ್ಲಿದ್ದು ಅವರು ನಡೆದಾಡುವ ಅವನಿಗೆ 'ನರರೂಪಿ ರಾಕ್ಷಸ'ರಂತಿರುತ್ತಾರೆ. ಇಂತಹವರು ತಾವು ಸುಖವಾಗಿದ್ದು, ಇತರರ ಜೀವನವನ್ನು ನರಕಪ್ರಾಯವನ್ನಾಗಿ ಮಾಡುತ್ತಿರುತ್ತಾರೆ. ತೋರಿಕೆಗೆ ಪ್ರಶಾಂತವಾಗಿ ನಿರ್ಮಲವಾಗಿ ಆನಂದವಾಗಿರುವಂತೆ ಕಂಡು ಬರುವವರೂ ಒಳಗೊಳಗೇ ಮನಸ್ಸಿನಲ್ಲಿ ಏಳುವ ಭಯಂಕರ ಯೋಚನೆಗಳ ಚಿಂತೆಯಲ್ಲಿ ಬೇಯುತ್ತಿರುತ್ತಾರೆ. ಮನಸ್ಸು ಕೆಟ್ಟರೆ ಅದರ ಪ್ರಭಾವ ಶರೀರದ ಮೇಲೂ ಆಗುತ್ತದೆ. ಮನಸ್ಸನ್ನು ನಿರ್ಮಲವಾಗಿಟ್ಟುಕೊಂಡರೆ ಬದುಕೂ ನಿರ್ಮಲವಾಗಿರುತ್ತದೆ.

### ಆಲೋಚನೆ

ನಾವು ಈ ಪ್ರಪಂಚವನ್ನು, ಜನರನ್ನು, ಬದುಕನ್ನು ನೋಡುತ್ತೇವೆ. ನಮ್ಮ ಮನಸ್ಸಿನಲ್ಲಿ ಅವುಗಳ ಬಗ್ಗೆ ಪೃಥಃಕರಣ ನಡೆಯುತ್ತದೆ. ಮನಸ್ಸಿಗೆ ಆಲೋಚನೆ ಎನ್ನುವುದು ಕನ್ನಡಕವಿದ್ದಂತೆ. ನಾವು ಯಾವ ರೀತಿ ಬದುಕನ್ನು ನೋಡಿ ಗ್ರಹಿಸುತ್ತೇವೆಯೋ ಜೀವನವೂ ಅದೇ ರೀತಿ ನಮಗೆ ಕಂಡು ಬರುತ್ತದೆ.

ಕೆಲವರಿಗೆ ಜೀವನವೆನ್ನುವುದು ಒಂದು ಸುಂದರ ಸ್ವಪ್ನವಾಗಿದ್ದರೆ, ಇನ್ನು ಕೆಲವರ ಪಾಲಿಗೆ ಅದು ಶಾಪ. ಇದು ಅವರವರ ದೃಷ್ಟಿಕೋನಕ್ಕನುಗುಣವಾದುದು. ನಮ್ಮ ಆಲೋಚನೆಯಲ್ಲಿ ಆನಂದ, ಆಹ್ಲಾದ ತುಂಬಿದ್ದರೆ ಜೀವನ ಸುಂದರವೆನಿಸುತ್ತದೆ. ವಿಷಾದವಿದ್ದರೆ ಕಷ್ಟಕರವೆನಿಸುತ್ತದೆ.

ಮನುಷ್ಯ ಆನಂದದಿಂದಿರಲು ವಯಸ್ಸಿನದೇನೂ ಸಂಬಂಧವಿಲ್ಲ.

ಮನುಷ್ಯನಾದವನು ತನ್ನ ಜೀವನವನ್ನು ಆನಂದದಿಂದ ಸಂತೃಪ್ತಿಯಿಂದ ಕಳೆಯಬೇಕು. ಏನೊಂದೂ ಸ್ಪಂದನ, ಸಂತೋಷ ಇಲ್ಲದೆ ಬಾಳುವುದೆಂದರೆ ಅದು ಯಾಂತ್ರಿಕ, ನಿಸ್ಸಾರ ಬದುಕು. ಸಂತೃಪ್ತಿಯಿಂದ ಬದುಕಬೇಕೆಂದಿದ್ದರೆ ಆನಂದವೆಂದರೇನು, ಅದು ಹೇಗೆ ಉಂಟಾಗುತ್ತದೆ ಎನ್ನುವುದನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕು.

ನಮ್ಮ ಮನಸ್ಸು, ಮನಸ್ಸಿನಲ್ಲಿನ ಉತ್ಸಾಹ ನಿರಾಸೆಯಿಂದಾಗಿ ಖಿನ್ನಗೊಳ್ಳುವುದು ಸಹಜ. ಆದರೆ ಖಿನ್ನತೆಯನ್ನು ತೊಡೆದು ಹಾಕಿ, ಮತ್ತೆ ಸಂತೋಷ ತುಂಬಿಕೊಳ್ಳುವುದನ್ನು ಕಲಿಯಬೇಕು.

### ಅನುಭೂತಿ ಅನುಭವ

ಜೀವನದಲ್ಲಿ ನಮಗೆ ಹಲವಾರು ಘಟನೆಗಳು ಎದುರಾಗುತ್ತಲೇ ಇರುತ್ತವೆ. ಒಂದು ಘಟನೆ ನಗು ತರಿಸುವುದಾಗಿದ್ದರೆ, ಇನ್ನೊಂದು ಕ್ಲೇಶಕಾರಿಯಾಗಿರುತ್ತದೆ. ಒಂದು ಸನ್ನಿವೇಶವನ್ನು ನಾವು ಎದುರಿಸಿದಾಗ ಆ ಕ್ಷಣದಲ್ಲಿ ನಮಗುಂಟಾದ

ಸಂತೋಷ, ನೋವು, ಪ್ರೇಮ..... ಇವುಗಳನ್ನು ಸ್ಥಾಯೀಭಾವಗಳೆನ್ನುತ್ತೇವೆ. ಈ ಅನುಭವಗಳು ಕೆಲವು ದಿನಗಳ ನಂತರ ಅನುಭೂತಿಗಳಾಗಿ ಉಳಿದುಕೊಳ್ಳುತ್ತವೆ. ಬದುಕು ನಿತ್ಯವೂ ಹಲವು ಸನ್ನಿವೇಶಗಳನ್ನು ಎದುರಿಸುತ್ತಿರುತ್ತದೆ. ಪ್ರತಿಯೊಂದು ಹೊಸ ಸನ್ನಿವೇಶಕ್ಕೆ ಹೊಸದೊಂದು ಅನುಭವ. ಅದು ಹಳೆಯ ಅಭಿಪ್ರಾಯಕ್ಕೆ ಹೊಸ ರೂಪ ತೊಡಿಸುತ್ತದೆ. ಹೊಸ ಅನುಭವ ನಮ್ಮಲ್ಲಿ ನೆಲೆಸಿದ ಭಾವನೆಗಳನ್ನು ಮತ್ತೆ ಬದಲಾಯಿಸಲೂಬಹುದು. ಅಂತಹ ಸಂದರ್ಭದಲ್ಲಿ ಮನಸ್ಸು ತಾಕಲಾಟಕ್ಕೀಡಾಗುತ್ತದೆ. ಖಿನ್ನತೆಯನ್ನನುಭವಿಸುತ್ತದೆ.

## ಮನೆಯೇ ಸ್ವರ್ಗ

ಮನೆಯೆಂದರೇನು?

ನಾಲ್ಕಾರು ಗೋಡೆಗಳ ಕಟ್ಟಡವೆ? ಹಲವಾರು ಕೋಣೆಗಳ ಭವನಕ್ಕೆ ಮನೆ ಎನ್ನಬಹುದೆ? ಅಲ್ಲ.... ಮನೆ ಎನ್ನುವುದಕ್ಕೆ ಅದು ಸರಿಯಾದ ವ್ಯಾಖ್ಯಾನವಾಗಲಾರದು. ಅದು ನಾವು ಬಾಳಬೇಕಿರುವ, ನಮ್ಮ ಪ್ರೇಮದಿಂದ ತುಂಬಿಕೊಂಡಿರುವ ಒಂದು ಸಾಮ್ರಾಜ್ಯ. ನಾವು, ನಮ್ಮವರು.... ಇವರೆಲ್ಲರೊಂದಿಗೆ ಆನಂದದಿಂದ ವಾಸಿಸುವ ನಿಲಯ.

ಹೋಮ್.... ಹ್ಯಾಪಿ ಹೋಮ್! ಇದು ಕೋಟ್ಯಂತರ ಜನರು ಕನಸು.

ನಾಲ್ಕಾರು ಕೋಣೆಗಳ ಒಂದು ಕಟ್ಟಡ ಅದರಲ್ಲಿ ಗಂಡ-ಹೆಂಡತಿ, ತಾಯಿ-ತಂದೆ ಹೀಗೆ ಕುಟುಂಬವೊಂದು ಅನ್ಯೋನ್ಯವಾಗಿ, ಸುಖ ಸಂತೋಷಗಳಿಂದ ವಾಸಿಸುತ್ತಿದ್ದಲ್ಲಿ ಅದು ಪರಿಪೂರ್ಣ ಮನೆ ಎನಿಸಿಕೊಳ್ಳುತ್ತದೆ.

ಸಂಪೂರ್ಣ ಶಾಂತಿ ಮನೆಗೆ ತುಂಬಾ ಅಗತ್ಯ. ಒಂದು ಕುಟುಂಬದಲ್ಲಿ ವಾಸಿಸುವ ಜನರಿಗೆ ತಿಳುವಳಿಕೆ ಅವಗಾಹನೆ ಇರಬೇಕಾದುದು ಮುಖ್ಯ. ಮನೆಯಲ್ಲಿ ಅತ್ತೆ-ಸೊಸೆಯರ ಕಿತ್ತಾಟವೋ ಹೆಂಡತಿಯ ಕಾಟವೋ ಹೀಗೆ ಏನಾದರೊಂದು

> **ತೊಡಕುಗಳೇ ಮನಸ್ಸಿಗೆ ಒಳ್ಳೆಯ ಟಾನಿಕ್ಕುಗಳೆನ್ನುವ ಮಾತನ್ನು ನಾವು ಮನನ ಮಾಡಿಕೊಳ್ಳಬೇಕು. ಹೀಗೆಂದುಕೊಳ್ಳುವುದರಿಂದ ಮನಸ್ಸಿಗೆ ಒಂದು ರೀತಿ 'ನಿರ್ಲಿಪ್ತತೆ'ಯುಂಟಾಗಿ ಪ್ರೌಢತ್ವ ಬರುತ್ತದೆ.**

ಕಿರಿಕಿರಿ ಇದ್ದಲ್ಲಿ ಅದು ಮನೆಯಾಗದೆ, ಜೈಲು ಎನಿಸತೊಡಗುತ್ತದೆ. ಬಹಳಷ್ಟು ಗಂಡಸರಿಗೆ ಮನೆಯಿಂದ ಹೊರಬಂದ ನಂತರ ತಿರುಗಿ ಮನೆಗೆ ಹೋಗಬೇಕೆಂದರೇನೇ ಭಯವೆನಿಸುವ ಪರಿಸ್ಥಿತಿ ಉಂಟಾಗುತ್ತದೆ. ಮನೆಗೆ ತಡವಾಗಿ ಹೋದಷ್ಟೂ ಕ್ಷೇಮ ಎನ್ನುವ ಭಾವನೆ ಬೆಳೆಯುತ್ತದೆ. ಕೆಲವರಂತೂ ಆ ಸಮಸ್ಯೆಯನ್ನು ಮರೆಯಲು 'ಗುಂಡಿನ ಮತ್ತೇ ಗಮ್ಮತ್ತು' ಎನ್ನುತ್ತ ಬಾರಿನತ್ತ ಹೆಜ್ಜೆ ಹಾಕತೊಡಗುತ್ತಾರೆ.

ಗಂಡ-ಹೆಂಡತಿ, ಕುಟುಂಬದ ಜನರಲ್ಲಿ ಸಾಮರಸ್ಯ ಬೆಳೆಯಬೇಕೆಂದರೆ ಕುಟುಂಬದ ಸದಸ್ಯರಲ್ಲಿ, ಗಂಡ-ಹೆಂಡತಿಯ ನಡುವೆ ಪರಸ್ಪರ ತಿಳುವಳಿಕೆ, ಹೊಂದಾಣಿಕೆ ಮುಖ್ಯ. ಪರಸ್ಪರರ ಅಭಿರುಚಿಗೆ ಮನ್ನಣೆ ನೀಡಬೇಕಾದುದು ಅಗತ್ಯ. ಈ ಕೊನೆಯ ಅಂಶ ಗಂಡ-ಹೆಂಡತಿಯಾದವರು ಹೆಚ್ಚು ಅರಿತಿರಬೇಕು.

ಚಿಕ್ಕ-ಪುಟ್ಟ ವ್ಯತ್ಯಾಸಗಳೇ ಗಂಡ-ಹೆಂಡಿರ ನಡುವೆ ಅಡ್ಡಿಯಾಗಬಲ್ಲವು. ಮಾನಸಿಕ ಖಿನ್ನತೆಗೆ ಕಾರಣವಾಗಬಲ್ಲವು. ಕಲ್ಪನೆಗೂ, ವಾಸ್ತವಕ್ಕೂ ನಡುವೆ ನಡೆಯುವ ಹೋರಾಟ ಮನಸ್ಸನ್ನು ಬಹಳಷ್ಟು ನಿರ್ವಿಣ್ಣಗೊಳಿಸಿಬಿಡುತ್ತದೆ. ಇಂತಹ ಸಂದರ್ಭದಲ್ಲಿ ಪುರುಷನಾದವನು ತನಗೆ ಉಲ್ಲಾಸ ಉಂಟು ಮಾಡುವ ಪರಿಸರದಲ್ಲಿರಲು ಪ್ರಯತ್ನಿಸುತ್ತಾನೆ. ಬಾರ್, ಇಸ್ಪೀಟು, ಸ್ನೇಹಿತರು... ಇತ್ಯಾದಿ. ಇದೇ ಪರಿಸ್ಥಿತಿ ಸ್ತ್ರೀಗೆ ಉಂಟಾದರೆ ತೀವ್ರವಾದ ಮಾನಸಿಕ ದೌರ್ಬಲ್ಯಕ್ಕೀಡಾಗುತ್ತಾಳೆ. ಗಂಡ-ಹೆಂಡತಿ ತಮ್ಮ ತಮ್ಮಲ್ಲೇ ಕೊರಗುತ್ತಿದ್ದರೆ ಅವರ ನಡುವೆ ಕಂದರವೊಂದು ಬಹಳಷ್ಟು ಬೆಳೆದುಬಿಡುತ್ತದೆ. ಅದನ್ನು ನಿವಾರಿಸಲು ಇಬ್ಬರೂ ಪ್ರಯತ್ನಿಸಬೇಕು.

ದಂಪತಿಗಳಾದವರು ಒಬ್ಬರ ಅಭಿರುಚಿಯನ್ನು ಇನ್ನೊಬ್ಬರು ಮೆಚ್ಚಿಕೊಳ್ಳುವ ಪ್ರಯತ್ನ ಮಾಡಬೇಕು. ಸಮಾನಾಸಕ್ತಿಯ ಅಭಿರುಚಿಗಳ ಮೂಲಕ ತಮ್ಮ ಕೊರತೆ ತುಂಬಿಕೊಳ್ಳಲು ಪ್ರಯತ್ನಿಸಬಹುದು. ಹೀಗೂ ಇರದಿದ್ದಲ್ಲಿ ಪರಸ್ಪರರು ತಮ್ಮ ತಮ್ಮ ಅಭಿರುಚಿಗಳನ್ನು ತಮ್ಮ ಮಟ್ಟಿಗೆ ಸೀಮಿತಗೊಳಿಸಿಕೊಳ್ಳುವುದು ಒಳ್ಳೆಯದು. ಒತ್ತಾಯದಿಂದ ಇನ್ನೊಬ್ಬರ ಮೇಲೆ

ತಮ್ಮ ಅಭಿರುಚಿ ಹೇರುವುದು ಒಳ್ಳೆಯದಲ್ಲ. ಇನ್ನೊಂದು ಮುಖ್ಯ ವಿಷಯ. ಅಭಿರುಚಿಗಳ ವಿಷಯವಂತೂ ಸರಿ. ಅದು ವೈಯಕ್ತಿಕವಾದುದು. ಇನ್ನೊಂದಿದೆ. ಅದು ಲೌಕಿಕ ಜೀವನ. ನಿಮ್ಮ ಬಗ್ಗೆಯಷ್ಟೇ ನೀವು ವಿಚಾರ ಮಾಡದೆ ನಿಮ್ಮ ಜೀವನ ಸಂಗಾತಿಯ ಬಗೆಗೂ ಕಾಳಜಿ ಇರುವಂತೆ ನೋಡಿಕೊಳ್ಳಬೇಕು.

ಇನ್ನು ಕುಟುಂಬದ ವಿಷಯಕ್ಕೆ ಬಂದರೆ– ಕುಟುಂಬದಲ್ಲಿ ಒಮ್ಮತ, ಏಕತೆ ಇರಬೇಕು. ಹಾಗಿರಬೇಕೆಂದರೆ ಕುಟುಂಬದ ಸದಸ್ಯರಲ್ಲಿ ಮುಚ್ಚುಮರೆ, ಕಹಿಭಾವನೆಗಳಿರಕೂಡದು. ಕುಟುಂಬದ ಸದಸ್ಯರೆಲ್ಲ ತಮ್ಮ ಭಾವನೆಗಳನ್ನು ನಿಸ್ಸಂಕೋಚವಾಗಿ ಹೊರಹಾಕಬೇಕು. ಎಲ್ಲರೂ ಸೇರಿ ತಮ್ಮ ತಮ್ಮ ಸಮಸ್ಯೆಗಳ ಕುರಿತು ಚರ್ಚೆ ಮಾಡಬೇಕು. ಪ್ರತಿಯೊಬ್ಬರೂ ತಾವು ಜವಾಬ್ದಾರಿಯುಳ್ಳ ಸದಸ್ಯರೆಂಬ ವಿಷಯವನ್ನು ಗ್ರಹಿಸಬೇಕು. 'ನಿನ್ನ ಸಮಸ್ಯೆ' 'ನನ್ನ ಸಮಸ್ಯೆ' ಎಂದಲ್ಲದೆ 'ನಮ್ಮ ಸಮಸ್ಯೆ' ಎನ್ನುವ ಸ್ಥಿತಿಯಲ್ಲಿ ಚರ್ಚೆ ನಡೆಯುವುದು ತುಂಬಾ ಅಗತ್ಯ. ದಾಕ್ಷಿಣ್ಯವನ್ನು ಕೈ ಬಿಟ್ಟು, ಎಲ್ಲವನ್ನೂ ಬಿಚ್ಚುಮನಸ್ಸಿನಿಂದ ಮಾತಾಡಿದರೆ, ಅಪಾರ್ಥಗಳೆಲ್ಲ ಬಹುಮಟ್ಟಿಗೆ ತೊಲಗಿ ಹೋಗುತ್ತವೆ. ಮನಸ್ಸಿನಲ್ಲಿ ಕಹಿ ಇಟ್ಟುಕೊಳ್ಳುವುದರಿಂದಲೇ ನೋವು, ಸಮಸ್ಯೆಗಳುಂಟಾಗುತ್ತವೆ. ಈ ರೀತಿಯ ಸಮಸ್ಯೆಗಳು ಮಧ್ಯಮ ವರ್ಗದವರಲ್ಲೇ ಹೆಚ್ಚು. ದಾಕ್ಷಿಣ್ಯವನ್ನು ಜಯಿಸಿ, ಇಲ್ಲಸಲ್ಲದ ದೊಡ್ಡಸ್ತಿಕೆಗೆ ಹೋಗದೆ, ಧಿಮಾಕು ತೋರಿಸದೆ, ಬಿಚ್ಚು ಮನಸ್ಸಿನ ವರ್ತನೆಗೆ ಪ್ರಾಮುಖ್ಯ ಕೊಡುವುದರಿಂದಾಗಿ, ಮಧ್ಯಮ ವರ್ಗದವರ ಸಮಸ್ಯೆಗಳು ಬಹುಮಟ್ಟಿಗೆ ಹಾಗೆಯೇ ಕರಗಿ ಹೋಗುತ್ತವೆ.

## ದಿಗಿಲು ಎಂದರೇನು?

ದಿಗಿಲು ಎಂದರೇನು ಎನ್ನುವಿರಾ? ಅಂದರೆ ನೀವು ತುಂಬಾ ಸುಖಿಗಳೆಂದಾಯ್ತಪ್ಪ! ಸಾಮಾನ್ಯವಾಗಿ ದಿಗಿಲಿಲ್ಲದಿರುವವರು ಇರಲಿಕ್ಕಿಲ್ಲ. ಚಿಕ್ಕಂದಿನಿಂದಲೂ ಮನುಷ್ಯರು ದಿಗಿಲಿಗೀಡಾಗುತ್ತಲೇ ಇರುತ್ತಾರೆ. ಚಿಕ್ಕವರಿರಲಿ, ದೊಡ್ಡವರಿರಲಿ ದಿಗಿಲಿನ ಪ್ರಮಾಣ ಒಂದೇ. ನಮಗೆ ಇಷ್ಟವಿರುವುದು ನಡೆಯದಿರುವಾಗ ದಿಗಿಲುಂಟಾಗುತ್ತದೆ. ಇಷ್ಟವಿಲ್ಲದಿರುವುದು ನಡೆದಾಗಲೂ ದಿಗಿಲುಂಟಾಗುತ್ತದೆ.

ಕೆಲವರಂತೂ ಹಿಂದೆಂದೋ ತಾವು ಮಾಡಿರುವ ತಪ್ಪಿಗೆ ಈಗ ದಿಗಿಲುಗೊಳ್ಳುತ್ತಿರುತ್ತಾರೆ. ಇಂತಹುದು ಅರ್ಥಹೀನ. ಭೂತಕಾಲದಲ್ಲಿ ಮಾಡಿದ ತಪ್ಪಿಗೆ, ಭವಿಷ್ಯದಲ್ಲಿ ಏನಾಗುತ್ತದೋ ಎಂದು ದಿಗಿಲು ಗೊಳ್ಳುವುದು ಅವಿವೇಕ. ಇದರಿಂದಾಗಿ ಸುಂದರವಾದ ವರ್ತಮಾನವನ್ನು ಕೈಯಾರೆ ಹಾಳು ಮಾಡಿಕೊಂಡಂತೆಯೇ ಅಲ್ಲವೆ? ಈ ವಿಷಯ ಅಂತಹವರಿಗೆ ಅರ್ಥವಾಗುವುದಿಲ್ಲ.

ದಿಗಿಲಿನಿಂದ ಸುಮ್ಮನೇ ಕುಳಿತು ಯೋಚನೆ ಮಾಡುವುದು ಏಕೆ? ಅದರಿಂದೇನು ಪ್ರಯೋಜನ? ಅದರ ಬದಲು ಓದುವುದೋ, ಬೇರೆ ಯಾವುದಾದರು ಕೆಲಸವನ್ನೋ ಮಾಡಬಹುದಲ್ಲ?!

ಅನಿವಾರ್ಯ ಪರಿಸ್ಥಿತಿಗಳಲ್ಲಿ ಮನುಷ್ಯನಿಗೆ ದಿಗಿಲು ಉಂಟಾಗಬಹುದು. ಅದು ಸಹಜ. ಆದರೆ ಕೆಲವರಿಗೆ ದಿಗಿಲು ಹಣೆಯ ಮೇಲಿನ ಬೊಟ್ಟಿನಂತೆ. ಅವರು ಸದಾ ದಿಗಿಲಿನಲ್ಲೇ ಮುಳುಗಿರುತ್ತಾರೆ. ದಿಗಿಲು ಇವರನ್ನು ಹಿಡಿದುಕೊಂಡಿರುವುದಿಲ್ಲ. ಇವರೇ ದಿಗಿಲನ್ನು ಹಿಡಿದುಕೊಂಡಿರುತ್ತಾರೆ. ಇಂತಹವರೊಂದಿಗೆ ಐದು ನಿಮಿಷ ಮಾತಾಡಿದರೆ, ನಮಗೆ ಈ ಪ್ರಪಂಚದ ಬಗ್ಗೆಯೇ ವೈರಾಗ್ಯ ಮೂಡಬಹುದು.

ಈ ರೀತಿಯ ವಿಪರೀತದ ದಿಗಿಲಿನ ಮನಸ್ತತ್ವ ಒಳ್ಳೆಯದಲ್ಲ. ಪ್ರತಿಯೊಂದು ವಿಷಯದಲ್ಲೂ ಮೂಗು ತೂರಿಸಿ, ವಿಪರೀತ ಜವಾಬ್ದಾರಿಯನ್ನು ಮೈಮೇಲೆಳೆದುಕೊಳ್ಳುವುದರಿಂದ ದಿಗಿಲಿನ ಖಾಯಿಲೆ ಆವರಿಸಿಕೊಳ್ಳುತ್ತದೆ. ಇದರಿಂದಾಗಿ ಜೀವನದಲ್ಲಿನ ಆನಂದವನ್ನು ಸವಿಯುವುದು ಸಾಧ್ಯವಾಗದೇ ಹೋಗಬಹುದು.

## ನಿಮಗೆ ಬೇಸರವೆ?

ಹೌದು ಎನ್ನುತ್ತಿದ್ದೀರಾ? ಹಾಗಾದರೆ ನೀವು ಮಾನಸಿಕ ಸಮಸ್ಯೆಗಳಿಂದ ಒದ್ದಾಡುತ್ತಿರುವಿರೆಂದಾಯ್ತು.

ಬೇಸರ ಏಕೆ ಉಂಟಾಗುತ್ತದೆ? ಪ್ರತಿಯೊಬ್ಬ ವ್ಯಕ್ತಿಗೂ ಹಲವಾರು ಕೋರಿಕೆಗಳು ಇರುತ್ತವೆ. ಅವೆಲ್ಲ ಪೂರ್ತಿಯಾಗಿ ನೆರವೇರುವುದಿಲ್ಲ. ಪೂರ್ತಿ ಸಂತೃಪ್ತಿ ಎನ್ನುವುದು ಲಭಿಸುವುದಿಲ್ಲ. ಬಯಸಿದುದು ಸಿಗದಿರುವಾಗ, ಪ್ರತಿಯೊಂದು ವಿಷಯದಲ್ಲಿ ನಿರಾಶೆ ಎದುರಾದಾಗ ಉಂಟಾಗುವ ಭಾವನೆಯೇ 'ಬೇಸರ.'

ನಾವು ಒಂದು ಗುರಿ ಸಾಧಿಸಬೇಕಿರುತ್ತದೆ. ಪರಿಸ್ಥಿತಿಯ ಬಗ್ಗೆ ಸರಿಯಾಗಿ ಅಂದಾಜು ಹಾಕದಿರುವುದು, ನಮ್ಮ ಶಕ್ತಿ, ಸಾಮರ್ಥ್ಯಗಳೆಷ್ಟು ಎಂಬುದರ ಕಲ್ಪನೆ ಇಲ್ಲದಿರುವುದು, ತಕ್ಕಷ್ಟು ಶ್ರಮ, ಪ್ರಯತ್ನ ಮಾಡದಿರುವುದು, ನಮ್ಮ ಸಾಮರ್ಥ್ಯಕ್ಕೆ ಮೀರಿದ ಗುರಿ ಸಾಧಿಸಬೇಕೆಂದುಕೊಳ್ಳುವುದು- ಇವೆಲ್ಲವೂ ನಮ್ಮ ಗುರಿ ಸಾಧನೆಯ ದಾರಿಯಲ್ಲಿ ಆತಂಕಗಳು. ನಾವು ಅಂದುಕೊಂಡಿದ್ದರ ಸಾಧನೆಯಾಗದಿರುವಾಗ, ಆ ಕೆಲಸ ವಿಫಲಗೊಂಡಾಗ ವಿರಕ್ತಿಯ ಭಾವನೆಯುಂಟಾಗುತ್ತದೆ. ಜೊತೆಗೇ ಬೇಸರ ಕೂಡ.

ಬೇಸರವೆನ್ನುವುದು ಇನ್ನೊಬ್ಬರ ಮೇಲೆ ಹಾನಿಕಾರಕ ಪರಿಣಾಮವನ್ನುಂಟು ಮಾಡಬಹುದು. ಬೇಸರದಿಂದಾಗಿ ಮಾನವ ಸಂಬಂಧಗಳಿಗೆ ಧಕ್ಕೆಯಾಗುವ ಸಂಭವವೂ ಉಂಟು. ಗಂಡ ಹೆಂಡತಿಯ ಮೇಲೆ, ಗಂಡ-ಹೆಂಡತಿ ಮಕ್ಕಳ ಮೇಲೆ, ಅತ್ತೆ ಸೊಸೆ ಪರಸ್ಪರ ಬೇಸರಿಸಿಕೊಳ್ಳುವುದು.... ಈ ಬೇಸರದಿಂದಾಗಿ ಮನಸ್ಸು ಮುರಿದು ಹೋಗುತ್ತದೆ.

ಒಬ್ಬ ವ್ಯಕ್ತಿಯು ಬೇಸರದಿಂದಿರುವನೆಂದಾದರೆ, ಅದು ಅವನು ತನ್ನ ಅಸಾಮರ್ಥ್ಯದ ಮೇಲೆ ಹಾಕಿಕೊಂಡಿರುವ ಮುಸುಕು ಎನ್ನಬಹುದು.

ನಮಗೆ ಬೇಸರವಾಗಿರುವಾಗ ಮೌನವಾಗಿರುವುದು ಬಹಳ ಉತ್ತಮ. ಒಳ್ಳೆಯ ಹಾಡು ಕೇಳುವುದು, ರಂಜನೀಯ ಪುಸ್ತಕಗಳನ್ನು ಓದು ಇತ್ಯಾದಿಗಳೆಲ್ಲ ಬೇಸರವನ್ನು ಬಹುಮಟ್ಟಿಗೆ ನೀಗಿಸುತ್ತವೆ. ಐದು ನಿಮಿಷಗಳ ಬೇಸರದಿಂದ ಐದು ದಿನಗಳ ಆನಂದ, ಅಂದವಾದ ಅನುಭವ ನಾಶವಾಗುವುದೆಂಬ ವಿಷಯ ಸದಾ ನೆನಪಿನಲ್ಲಿಟ್ಟುಕೊಂಡು ಯಾರ ಮೇಲೂ ಬೇಸರಿಸಿಕೊಳ್ಳದಂತಿರಲು ಪ್ರಯತ್ನಿಸಬೇಕು.

## ಕೋಪ ಎಂದಿಗೂ ನಿಮ್ಮ ಮಿತ್ರನಲ್ಲ

ಮನಸ್ಸಿನ ಶಾಂತಿಯನ್ನು ಹಾಳುಮಾಡಿ, ಅದನ್ನು ಛಿದ್ರವಿಚ್ಛಿದ್ರಗೊಳಿಸುವ ಪ್ರಬಲವಾದ ಆಯುಧವೊಂದು ಮಾನವನ ಬಳಿ ಇದೆ. ಅದುವೆ ಕೋಪ. 'ಸಿಟ್ಟು ತನ್ನ ವೈರಿ, ಶಾಂತಿ ಪರರ ವೈರಿ' ಎಂದು ಕೇಳಿದ್ದಿರಲ್ಲವೆ.... ಕೋಪ ನಿಮ್ಮ ಶತ್ರುವಷ್ಟೇ ಅಲ್ಲ, ಆ ಕೋಪದಿಂದಾಗಿ ನೀವು ಇತರರಿಗೆ ಶತ್ರುಗಳಾಗಿ ಕಂಡುಬರಬಹುದು.

ನೀವು ತುಂಬಾ ಒಳ್ಳೆಯವರಿರಬಹುದು. ನಿಮಗೆ ಯಾವೊಂದು ದುರಭ್ಯಾಸಗಳೂ ಇಲ್ಲದಿರಬಹುದು. ಆದರೆ ನಿಮ್ಮಲ್ಲಿರಬಹುದಾದ ಕೋಪ ನಿಮ್ಮಲ್ಲಿ ಒಳ್ಳೆಯ ಲಕ್ಷಣಗಳಿಗೆ ಮಸಿ ಬಳಿದು ಬಿಡುತ್ತದೆ. "ಅಯ್ಯೋ, ನನ್ನ ಕೋಪ ಕ್ಷಣಿಕವಾದುದು. ಏನೋ ಒಂದೆರಡು ಕ್ಷಣ ಮಾತ್ರ ಇರುತ್ತೆ. ಆಮೇಲೆ ಪುಸಕ್ಕನೆ ಇಳಿದು ತಣ್ಣಗಾಗಿ ಬಿಡುತ್ತೆ" ಎಂದು ಸಮರ್ಥಿಸಿಕೊಳ್ಳುತ್ತೀರಾ? ಒಂದು ವಿಷಯ ನೆನಪಿರಲಿ- ಆ ನಿಮ್ಮ ಕ್ಷಣಿಕ ಕೋಪದ ಪ್ರಭಾವ ಸಣ್ಣದೇನಲ್ಲ. ಅದು ತಾನು ತಣ್ಣಗಾಗುವುದರೊಳಗೆ ಇತರರ ಮನಸ್ಸಿಗೆ ಚುರುಕುಮುಟ್ಟಿಸಿ, ಅವರಲ್ಲಿ ಉರಿ ಎಬ್ಬಿಸಿರುತ್ತದೆ.

ಕೆಲವರು 'ನಮಗೆ ಒಳಗೊಂದು ಹೊರಗೊಂದು ಎನ್ನುವುದು ಆಗುವುದಿಲ್ಲ. ಕೋಪ ಬಂದಾಗ ಮನಸ್ಸಿನಲ್ಲಿರೋ ದನ್ನೆಲ್ಲ ಕಕ್ಕಿಬಿಡ್ತೀವಿ. ಮನಸ್ಸು ನಿರ್ಮಲವಾಗಿರುತ್ತೆ. ಕೊಳೆ, ಕಶ್ಮಲ ಯಾವುದೂ ಇಟ್ಕೊಳ್ಳೋದಿಲ್ಲ' ಎನ್ನುವುದುಂಟು. ಇದು ಆತ್ಮವಂಚನೆ. ಅರಿವಿಲ್ಲದೆ ಮಾಡಿಕೊಳ್ಳುವ ಆತ್ಮವಂಚನೆ. ಅಂತಹವರು ತಮ್ಮ ದೃಷ್ಟಿಕೋನದಿಂದ ವಿಚಾರ ಮಾಡುತ್ತಿರುತ್ತಾರೆ. ತಮ್ಮ ಮನಸ್ಸಿನಲ್ಲಿದ್ದ ಕಹಿಯನ್ನೆಲ್ಲ ಉಗುಳಿದ ಮಾತ್ರಕ್ಕೆ ಮುಗಿಯಿತೆ? ಆ ಕಹಿ ಇತರರ ಮನಸ್ಸಿನಲ್ಲಿ ಸೇರಿಕೊಳ್ಳಬಹುದೆಂಬುದರ ಬಗ್ಗೆ ಯೋಚಿಸುವುದು ಬೇಡವೆ?

ಕೋಪದಿಂದ ಕೂಗಾಡುವುದು, ಅಂತಹ ವ್ಯಕ್ತಿಗಳ ಗೌರವವನ್ನು ಹೊರಗಿನವರ ದೃಷ್ಟಿಯಲ್ಲಿ ಹಗುರಗೊಳಿಸಿಬಿಡುತ್ತದೆ. ಮನೆಯಲ್ಲಿನ ಶಾಂತಿಯನ್ನೂ ಕದಡಿ ಬಿಡುತ್ತದೆ. ಇಂತಹ ಕೋಪ ಒಳ್ಳೆಯದೋ, ಅಲ್ಲವೋ ಎಂಬುದರ ಬಗ್ಗೆ ಯೋಚಿಸಿನೋಡಿ.

"ಏನೋಪ್ಪ, ನಾನು ಉಳಿದೆಲ್ಲ ವಿಷಯಗಳಲ್ಲಿ ಚೆನ್ನಾಗೇ ಇರ್ತೀನಿ. ಆದರೆ ಕೋಪ ಬಂದಾಗ ಮಾತ್ರ, ಅದೇನಾಗುತ್ತೋ ಏನೋ, ನಾನು ಮನುಷ್ಯನೇ ಆಗಿರೋದಿಲ್ಲ" ಎನ್ನುವುದು ಕೆಲವರ ಅಂಬೋಣ. ಎಲ್ಲ ವಿಷಯಗಳಲ್ಲಿ ಚೆನ್ನಾಗಿರುವವರು ಕೋಪದ ಹಿಡಿತಕ್ಕೆ ಸಿಲುಕಿ ಕೆಟ್ಟವರಾಗುವುದೇಕೆ? ಆ ಕೋಪದಿಂದ ಹೇಗೆ ಹೊರಬರಬೇಕೆಂಬುದನ್ನು ಆಲೋಚಿಸಬೇಕು. ಎಷ್ಟೆಲ್ಲ ಒಳ್ಳೆಯ ಗುಣವಿರುವವರು ಕೇವಲ 'ಕೋಪ' ಎನ್ನುವ ಕೆಟ್ಟ ಗುಣದ ಕಾರಣದಿಂದ ತಮ್ಮಲ್ಲಿ ಒಳ್ಳೆಯತನವನ್ನು

ಬೂದಿಯಲ್ಲಿ ಸುರಿದ ಪನ್ನೀರು ಮಾಡಿಕೊಳ್ಳುವುದು ಸಮಂಜಸವೇ? ಯೋಚನೆ ಮಾಡಬೇಕಾದ ವಿಷಯ. ಆ ಒಂದು 'ಗುಣ'ವನ್ನೂ ಸಂಸ್ಕರಿಸಿಕೊಂಡುಬಿಟ್ಟರೆ, ಅಂತಹವರು ಮತ್ತಷ್ಟು ಒಳ್ಳೆಯವರಾಗಿ ಕಂಗೊಳಿಸಬಹುದಲ್ಲವೆ?!

ತುಂಬಾ ಗಂಭೀರವಾದ ವಿಷಯಗಳ ಬಗ್ಗೆ ಕೋಪ ಬಂದಿದೆ ಎಂದರೆ ಅದಕ್ಕೊಂದು ಅರ್ಥವಿದೆ. ಅಂತಹ ವಿಷಯಗಳಲ್ಲೂ ಕೋಪ, ಆವೇಶ ತಂದುಕೊಳ್ಳದೆ ಮರ್ಣಿಸುವುದಾದಲ್ಲಿ ಮತ್ತೂ ಒಳ್ಳೆಯದು. ಆದರೆ ಪ್ರತಿಯೊಂದು ಅಲ್ಪ ವಿಷಯಕ್ಕೂ ಕೋಪ ತಂದುಕೊಂಡು ಸಿಡಿಮಿಡಿ ಗುಟ್ಟುತ್ತಿದ್ದರೆ ಅಂತಹ ವ್ಯಕ್ತಿಯನ್ನು ಯಾರೂ ಇಷ್ಟಪಡುವುದಿಲ್ಲ. ಅವರಿಂದ ಸಾಧ್ಯವಾದಷ್ಟು ದೂರವಿರಬೇಕೆಂದು ಇತರರು ಅಂದುಕೊಳ್ಳುತ್ತಾರೆ.

ಕೋಪಕ್ಕೆ ಗಂಡು, ಹೆಣ್ಣು ಎನ್ನುವ ವ್ಯತ್ಯಾಸವಿರುವುದಿಲ್ಲ. ಕೋಪದ ಕೈಗೆ ಬುದ್ಧಿ ಕೊಟ್ಟ ಗಂಡಸಿನಂತೆ ಹೆಣ್ಣೂ ಮನೆಯನ್ನು ನರಕಕೂಪವನ್ನಾಗಿ ಮಾಡಬಲ್ಲಳು.

ನಿಮಗೆ ಬಹಳ ಸಿಟ್ಟು ಬಂದಿದೆಯೆ? ಹಾಗಾದರೆ, ನಿಮ್ಮ ಸಿಟ್ಟು ಇಳಿಯಲು ಹಳೆಯದಾದರೂ ಪರಿಣಾಮಕಾರಿಯಾದ ಉಪಾಯ ಒಂದಿದೆ. ಅದೆಂದರೆ- ಒಂದರಿಂದ ನೂರರವರೆಗೆ ಅಂಕಿ ಎಣಿಸುವುದು. ಮನಸ್ಸಿನಲ್ಲಿ ಉದ್ಭವಿಸಿದ ಸಿಟ್ಟು ಹೊರಗೆ ಸ್ಫೋಟಗೊಳ್ಳಲು ಕೇವಲ ಕ್ಷಣಮಾತ್ರದ ಅವಧಿ ಸಾಕು. ಆ ಕ್ಷಣದಲ್ಲಿ ನಿಮ್ಮ ಮನಸ್ಸು ಅಂಕಿ ಎಣಿಸುವ ಕ್ರಿಯೆಯನ್ನು ಪ್ರಾರಂಭಿಸಿದರೆ, ಅದು ನಿಮ್ಮ ಆವೇಶಕ್ಕೆ ಸ್ಪೀಡ್ ಬ್ರೇಕರ್‌ನಂತೆ ಕೆಲಸ ಮಾಡುತ್ತದೆ. ಒಂದು ಸಲ ನಿಮ್ಮ ಸಿಟ್ಟು, ಆವೇಶದ ವಾಹನ ಆ ಸ್ಪೀಡ್ ಬ್ರೇಕರ್‌ನ ಬಳಿ ನಿಂತಿತೆಂದರೆ, ಆ ನಂತರ ನಿಮ್ಮ ಮನಸ್ಸನ್ನು ಮುನ್ನಡೆಸುವುದು ಆವೇಶವಲ್ಲ... ವಿವೇಕಯುಕ್ತ ಆಲೋಚನೆ.

### ಪ್ರೇಮ

ಪ್ರೇಮಕ್ಕೆ ನೂರೆಂಟು ವ್ಯಾಖ್ಯಾನಗಳಿವೆ. ಎಲ್ಲವೂ ಸರಿ. ಪ್ರೇಮ ಪಾಶಕ್ಕೆ ಸಿಲುಕಿದವರು ನರಳುತ್ತಾರೆ, ನಲಿಯುತ್ತಾರೆ. ನರಳಿಸುತ್ತಾರೆ, ನಲಿಸುತ್ತಾರೆ. ಕವಿಗಳಾಗುತ್ತಾರೆ. ಸಾಹಸಿಗಳಾಗುತ್ತಾರೆ- ಏನೇನಲ್ಲ ಆಗುತ್ತಾರೆ. ಪ್ರೇಮದ ಮಹತ್ತರ ಶಕ್ತಿ ಏನೇನನ್ನೆಲ್ಲ ಮೂಡಿಸುತ್ತದೆ.

ಪ್ರೇಮವೆಂದರೇನು? ಈ ಪ್ರಶ್ನೆಗೆ ಹತ್ತು ವರ್ಷದ ಹುಡುಗನೂ ಇಂದಿನ ದಿನಗಳಲ್ಲಿ ಉತ್ತರ ಹೇಳಬಲ್ಲ. ಪ್ರೇಮ ಕಥೆಯ ಸಿನಿಮಾಗಳನ್ನು ನೋಡಿ, ಯುಗಳಗೀತೆ ಕೇಳಿ, ಅದೇ ಪ್ರೇಮ ಎಂದು ನಿರ್ಧರಿಸಿಕೊಂಡಿರುತ್ತಾರೆ. ಲೈಲಾ-ಮಜ್ನು, ರೋಮಿಯೋ-ಜ್ಯುಲಿಯೆಟ್, ಹೀರ್-ರಾಂಜಾ, ಸೋಹ್ನಿ-ಮಹಿವಾಲ್, ಶಿರೀನ್-ಫರ್ಹಾದ್ ಇವರೆಲ್ಲರ ಪ್ರೇಮ ಕಥೆ ಓದಿದವರು 'ಆಹಾ ಪ್ರೇಮವೆಂದರೆ ಇದು' ಎಂದುಕೊಂಡಿರಬಹುದು. ಮೊದಲನೆಯದು ಸಿನಿಮಾ ಪ್ರೇಮ, ಎರಡನೆಯದು ಸಾಹಿತ್ಯದಲ್ಲಿನ ಪ್ರೇಮ.

ವಾಸ್ತವದಲ್ಲಿ ಪ್ರೇಮವೆಂದರೆ ಏನು? ಎಂದು ಯೋಚಿಸುವ ಅಗತ್ಯವಿದೆ.

ಪ್ರೇಮವೆಂದರೆ ಎಲ್ಲರಿಗೂ ತುಂಬ ಇಷ್ಟ. ಪ್ರೇಮವೆಂದರೆ ಒಬ್ಬ ವ್ಯಕ್ತಿಯನ್ನು ನೋಡಿದೊಡನೆಯೇ ಅಕಸ್ಮಾತ್ತಾಗಿ ಉಂಟಾದ ಆಹ್ಲಾದಕರ ಸ್ಪಂದನ ಎನ್ನುವುದು ಬಹುತೇಕರ ಭಾವನೆ. ಇದು ಕೊಂಚ ಮಟ್ಟಿಗೆ ನಿಜ. ವಾಸ್ತವಕ್ಕೆ ಪ್ರೇಮಿಸುವುದು ಒಂದು ಕಲೆ. ಆ ಕಲೆಯನ್ನು ಅಭ್ಯಾಸ ಮಾಡುವುದಕ್ಕೆ ಪ್ರೇಮದ ಬಗ್ಗೆ ಜ್ಞಾನ, ಪರಿಶ್ರಮ ಅಗತ್ಯ.

ಈ ಪ್ರೇಮದಲ್ಲೂ ವ್ಯಕ್ತಿತ್ವವಿರುವ ಪ್ರೇಮ, ವ್ಯಕ್ತಿತ್ವ ರಹಿತ ಪ್ರೇಮ ಎನ್ನುವ ಎರಡು ವಿಧಗಳಿವೆ.

ಸಾಮಾನ್ಯವಾಗಿ ಸಿನಿಮಾ, ಕಾದಂಬರಿಗಳಲ್ಲಿ ಕಂಡುಬರುವ ಪ್ರೇಮ ಹೀಗಿರುತ್ತದೆ: ಸುಂದರ ಯುವಕನೊಬ್ಬ ಸುಂದರ ಯುವತಿಯನ್ನು ನೋಡುತ್ತಾನೆ. ಅವರಿಬ್ಬರಲ್ಲಿ ಮೊದಲ ನೋಟದಲ್ಲೇ ಪ್ರೇಮ ಅಂಕುರಿಸುತ್ತದೆ. ಅವರ ಹಿರಿಯರ ಕಡೆಯಿಂದ ಅನೇಕ ಅಡ್ಡಿ ಆತಂಕಗಳೆದುರಾದರೂ ಅವೆಲ್ಲವನ್ನೂ ಸಹಿಸಿ, ಎದುರಿಸಿ 'ಮೈನೆ ಪ್ಯಾರ್ ಕಿಯಾ' ಎನ್ನುತ್ತ ಕೊನೆಗೆ ಮದುವೆ ಮಾಡಿಕೊಂಡು ಹಾಯಾಗಿರುತ್ತಾರೆ. (ದುಃಖಾಂತ ಚಿತ್ರಗಳಲ್ಲಾದರೆ ಪ್ರೇಮಿಗಳು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ.)

### ವಾಸ್ತವ ಜೀವನದಲ್ಲಿನ ಪ್ರೇಮ ಹೇಗಿರುತ್ತದೆ?

ಇಲ್ಲೂ ಯುವಕನೊಬ್ಬ ಯುವತಿಯೊಬ್ಬಳನ್ನು ಮೊದಲ ನೋಟದಲ್ಲೇ ಪ್ರೇಮಿಸುತ್ತಾನೆ. ವಾಸ್ತವಕ್ಕೆ ಅದು ಆಕರ್ಷಣೆ.

ಅದಕ್ಕೇ ಪ್ರೇಮವೆನ್ನುವುದಾದರೆ ಅಭ್ಯಂತರವೇನಿಲ್ಲ. ಈ ರೀತಿ ಪ್ರೇಮದ ಸೆಳೆತಕ್ಕೆ ಸಿಲುಕಿದ ಯುವಕ-ಯುವತಿ ಪರಸ್ಪರರ ಮೆಚ್ಚುಗೆ, ಅಭಿಮಾನ ಪಡೆಯಲು ಸದಾ ಪ್ರಯತ್ನಿಸುತ್ತಿರುತ್ತಾರೆ. ಇಬ್ಬರೂ ತಮ್ಮಲ್ಲಿರುವ ಒಳ್ಳೆಯಗುಣಗಳನ್ನು 'ಹೈಲೈಟ್' ಮಾಡಿ ಇನ್ನೊಬ್ಬರಿಗೆ ಗೊತ್ತಾಗುವಂತೆ ಮಾಡಲು ಪ್ರಯತ್ನಿಸುತ್ತಾರೆ. ಹಾಗೆಯೇ ಪ್ರೇಮದ ತೀವ್ರತೆಯಲ್ಲಿ ಪರಸ್ಪರರಲ್ಲಿರುವ ಲೋಪ, ದೋಷಗಳು ಕಾಣುವುದೇ ಇಲ್ಲ. ಕಂಡರೂ ಅವು ಲೋಪಗಳೆಂದು ಅನಿಸುವುದೇ ಇಲ್ಲ. ಈ ಪ್ರೇಮ ಪರಾಕಾಷ್ಠೆ ತಲುಪಿ ಮದುವೆಯತ್ತ ಕರೆದೊಯ್ಯುತ್ತದೆ.

ಇಲ್ಲಿಯವರೆಗೂ ಜೀವನ ಈಸ್ಟ್‌ಮನ್ ಕಲರ್ ಸಿನಿಮಾದಂತಿರುತ್ತದೆ.

ಮದುವೆಯ ನಂತರ ಪ್ರೇಮಿಗಳು ದಂಪತಿಗಳಾಗುತ್ತಾರೆ. ಕ್ರಮೇಣ ಹೊಸತನ ಕರಗಿ ಹೋಗುತ್ತದೆ. ನಿಧಾನವಾಗಿ ಅವರಲ್ಲಿನ ಲೋಪದೋಷಗಳು ಪರಸ್ಪರರಿಗೆ ಕಂಡು ಬರತೊಡಗುತ್ತವೆ. 'ಅರೆ, ನಾನು ಪ್ರೇಮಿಸಿದಾಗ ಇವೆಲ್ಲ ಇರಲಿಲ್ಲವಲ್ಲ' ಎಂದು ಆಶ್ಚರ್ಯವೆನಿಸುತ್ತದೆ. (ವಾಸ್ತವಕ್ಕೆ ಆ ಲೋಪಗಳನ್ನು ಪ್ರೇಮದ ತೆರೆ ಮುಚ್ಚಿ ಹಾಕಿರುತ್ತದೆ.) ಬರಬರುತ್ತ ಆ ಹುಳುಕುಗಳು ಢಾಳಾಗಿ ಕಣ್ಣಿಗೆ ಹೊಡೆಯತೊಡಗುತ್ತವೆ. ಒಬ್ಬರನ್ನೊಬ್ಬರು ಟೀಕಿಸುವುದು, ವಿಮರ್ಶಿಸುವುದರಿಂದ ಪ್ರಾರಂಭವಾದ ಬಿರುಕು ಕ್ರಮೇಣ ಕಂದರವಾಗುತ್ತದೆ. ಮಾನಸಿಕ ಅಂತರ ಬೆಳೆಯತೊಡಗುತ್ತದೆ. ತಮ್ಮ ಕನಸೆಲ್ಲ ಮಣ್ಣುಗೂಡಿತೆಂದು ಒಬ್ಬರನ್ನೊಬ್ಬರು ನಿಂದಿಸತೊಡಗುತ್ತಾರೆ. ಜೀವನ ನಿಸ್ಸಾರವೆನಿಸುತ್ತದೆ. (ಅಪರೂಪಕ್ಕೊಂದು ಅಪವಾದವಿರಬಹುದು) ಬಹುಪಾಲು ಜನ 'ಪಾಲಿಗೆ ಬಂದದ್ದು ಪಂಚಾಮೃತ'ವೆನ್ನುವ. ಭಾವನೆಯಿಂದ ಜೀವನ ಸಾಗಿಸುತ್ತಾರೆ. ಕೆಲವರು ಹೊಸ ಅನುಭವ ಪಡೆಯುವುದಕ್ಕಾಗಿ ತಮ್ಮ ಸಂಗಾತಿಗಳಿಗೆ ವಿಚ್ಛೇದನೆ ನೀಡಲು ಪ್ರಯತ್ನಿಸಬ

## ನೆನಪಿಡಲೇಬೇಕಾದ
## ಹದಿಮೂರು ಅಂಶಗಳು

೧. ನೀವು ಸುಂದರರಲ್ಲವೆ? ಆದರೇನಾಯ್ತು- ನಿಮ್ಮ ವ್ಯಕ್ತಿತ್ವವನ್ನು ಸುಂದರವಾಗಿ ರೂಪಿಸಿಕೊಳ್ಳಿ.
೨. ನಿಮ್ಮ ಸೋಲು, ಹತಾಶೆಯನ್ನು 'ಛಲ'ವಾಗಿ ಪರಿವರ್ತಿಸಿಕೊಳ್ಳಿ.
೩. ನೀವು ಸಾಧಿಸಿ, ಜಗತ್ತಿಗೆ ನಿಮ್ಮ ಕಾಣಿಕೆಯನ್ನು ನೀಡಿ.
೪. ನಿಮ್ಮನ್ನು ಆವರಿಸಿರುವ ವಿಷಾದದ ಕವಚ ಸೀಳಿ, ಹೊರಬನ್ನಿ. ವಿಷಾದ ನಿಮಗೆ ಸಲ್ಲ.
೫. ನೋವು, ಸಂಕಟಗಳಿಗೆ ಕುಗ್ಗುತ್ತೀರಾ? ಬೇಡಿ. ಸ್ವಾನುಕಂಪ ನಿಮಗಲ್ಲ.
೬. ಪ್ರೀತಿಯನ್ನು ನಾಲ್ವರಿಗೆ ಹಂಚಿ. ಅದಕ್ಕೋಸ್ಕರ ಪ್ರಾಣತ್ಯಾಗ ಅನಗತ್ಯ.
೭. ಇತರರಿಗೆ ನಿಮ್ಮನ್ನು ಕಂಡರಾಗದಿದ್ದರೆ ಯೋಚಿಸಬೇಡಿ. ಅದು ಅವರ ಸಮಸ್ಯೆ, ನಿಮ್ಮದಲ್ಲ.
೮. ನಿಮ್ಮ ಸಹವಾಸ ನಿಮಗೆ ಹಿತಕರವಾಗಿರುವುದು ಮುಖ್ಯ. ಇತರರು ಒಂದೆರಡು ಗಂಟೆ ಜೊತೆಗಿರಬಹುದು. ನಿಮಗೆ ನೀವು ಸದಾ ಜೊತೆಗಿರಬೇಕಾದವರು.
೯. ಸಲಹೆ ಇತರರದು, ನಿರ್ಣಯ ನಿಮ್ಮದು.
೧೦. ಸಮಂಜಸ ಎನಿಸಿದ ಕೆಲಸವನ್ನು ಹಿಂಜರಿಯದೆ ಮಾಡಿ. ಹೊಗಳಿಕೆ, ತೆಗಳಿಕೆಗಳಿಗೆ ನಿರ್ವಿಕಾರವಾಗಿ ಪ್ರತಿಕ್ರಿಯೆ ತೋರಿಸಿ.
೧೧. ಇನ್ನೊಬ್ಬರ ವಿಷಾದವನ್ನು ನೀವೇಕೆ ಹೊರಬೇಕು?
೧೨. ಚಟ- ಅದು ಯಾವುದೇ ಇರಲಿ- ನಿಮ್ಮ ಆಳಾಗಿರಬೇಕು. ನಿಮ್ಮನ್ನು ಆಳಕೂಡದು.
೧೩. ಮೂಢನಂಬಿಕೆಗಳನ್ನು- ಬೆಕ್ಕು ಅಡ್ಡ ಬಂತು, ಒಂಟಿ ಸೀನು ಬಂತು ಇತ್ಯಾದಿ- ದೂರ ತಳ್ಳಿ. ಬೆಕ್ಕು ಒಂದು ಪ್ರಾಣಿ. ಸೀನು ಸ್ವಾಭಾವಿಕ ಶರೀರ ಕ್ರಿಯೆ ಅಷ್ಟೇ.

ಹುದು.

ಪ್ರೇಮದ ಸ್ಥಾನದಲ್ಲಿ ದ್ವೇಷ, ವಿಶ್ವಾಸದ ಸ್ಥಾನದಲ್ಲಿ ಅಪರಾಧ ಮನೋಭಾವ ಮೂಡಿ ಮನಶ್ಶಾಂತಿ, ಆನಂದಗಳನ್ನು ಹಾಳು ಮಾಡಿಡುತ್ತವೆ. 'ಜೀವನದಲ್ಲಿ ಮೋಸ ಹೋದೆ'ವೆನ್ನುವ ಭಾವನೆ ಮನಸ್ಸನ್ನು ಕೊರೆಯತೊಡಗುತ್ತದೆ.

ಜನರು ತಮಗೆ ವ್ಯಾಪಾರದಲ್ಲಿ ನಷ್ಟವಾಯಿತೆಂದರೆ, ಆ ನಷ್ಟವನ್ನು ಹೇಗೆ ತುಂಬಿಕೊಳ್ಳಬೇಕೆಂದು ಯೋಚಿಸುತ್ತಾರೆ. ವಿದ್ಯಾರ್ಥಿಗಳು ತಮಗೆ ಯಾವುದಾದರೊಂದು ವಿಷಯದಲ್ಲಿ ಕಡಿಮೆ ಅಂಕಗಳು ಬಂದರೆ, ಇನ್ನು ಹೆಚ್ಚಿನ ಅಂಕ ಪಡೆಯಬೇಕೆಂದು ಟ್ಯೂಶನ್ನಿಗೆ ಹೋಗುತ್ತಾರೆ. ಕಷ್ಟಪಡುತ್ತಾರೆ. ಮೈಯಲ್ಲಿ ಚೆನ್ನಾಗಿರದಿದ್ದರೆ ವೈದ್ಯರ ಬಳಿಗೆ ಹೋಗಿ ಔಷಧಿ ತೆಗೆದುಕೊಳ್ಳುತ್ತಾರೆ. ಆದರೆ, ಜೀವನಕ್ಕೆ ಉಸಿರು ನೀಡುವ ಪ್ರೇಮ ಉಸಿರುಗಟ್ಟಿ ಒಳಗೇ ಸಾಯುತ್ತಿದ್ದರೆ ನಿರ್ದಯೆಯಿಂದ ನಿರಾಸಕ್ತಿಯಿಂದ ನೋಡುತ್ತಿರುತ್ತಾರೆ. ಆ ಪ್ರೇಮವನ್ನು ಬದುಕಿಸಿಕೊಳ್ಳಲು ಕೊಂಚವೂ ಪ್ರಯತ್ನ ಪಡುವುದಿಲ್ಲ.

ಜನ ಲೌಕಿಕ ವಿಷಯಗಳಿಗೆ ಎಷ್ಟು ಪ್ರಾಮುಖ್ಯ ಕೊಡುತ್ತಾರೋ, ತಮ್ಮ ಮಾನಸಿಕ ಪ್ರಪಂಚಕ್ಕೂ ಅಷ್ಟೇ ಪ್ರಾಮುಖ್ಯ ನೀಡಿದಾಗ ಅವರ ಜೀವನದಲ್ಲಿ ಆಹ್ಲಾದಕರವಾಗಿ ಪ್ರವೇಶಿಸಿದ ಪ್ರೇಮ ಜೀವನವಿಡೀ ಅವರೊಂದಿಗೆ ಆನಂದದಿಂದ ಇದ್ದುಬಿಡುತ್ತದೆ.

ಪ್ರೇಮಕ್ಕೆ ಸರಿಯಾದ ಅರ್ಥ ಗೊತ್ತಾದ ದಿನ, ಅದು ಜೀವನಕ್ಕೆ ಬೆಳಕು ನೀಡುತ್ತದೆ.

ಒಂದೇ ಮಾತಿನಲ್ಲಿ ಹೇಳಬೇಕೆಂದರೆ, 'ಕೊಡುವುದು.' ನಮ್ಮ ಮನಸ್ಸು, ಹೃದಯಗಳನ್ನು ನಾವು ಪ್ರೇಮಿಸಿರುವ ವ್ಯಕ್ತಿಗೆ ಕೊಡುವುದು. ಯಾರೊಂದಿಗೆ ನಮಗೆ ಪ್ರೇಮ ಉಂಟಾಗುತ್ತದೋ ಆ ವ್ಯಕ್ತಿಯ ನೆನಪುಗಳೇ ನಮ್ಮ ತಲೆಯಲ್ಲಿ ತುಂಬಿಕೊಂಡಿರುವುದು. ಆ ವ್ಯಕ್ತಿಗೆ ಆನಂದವನ್ನು ಒದಗಿಸುವುದು, ಆ ವ್ಯಕ್ತಿಯ ಬಗ್ಗೆ ವಿಶ್ವಾಸವನ್ನು ತುಂಬಿಕೊಂಡಿರುವುದು. ಆ ವ್ಯಕ್ತಿಯ ಜೊತೆಗೇ ಬಾಳಬೇಕೆನ್ನುವ ಕೋರಿಕೆ ಹೊಂದಿರುವುದು ಇವೆಲ್ಲ ಪ್ರೇಮದ ಸಂಕೇತಗಳೇ....

ಪ್ರೇಮದಲ್ಲಿ ಎರಡು ವಿಧಗಳಿವೆ:

ವೈಯಕ್ತಿಕ ಪ್ರೇಮ– ಒಬ್ಬ ಯುವಕ ಯುವತಿಯರ ನಡುವೆ. ಇಬ್ಬರು ವ್ಯಕ್ತಿಗಳ ನಡುವೆ ಉಂಟಾಗುವ ಪ್ರೇಮ ವೈಯಕ್ತಿಕವಾದುದು. ಇದು ಅನುರಾಗ. ಈ ರೀತಿಯ ಪ್ರೇಮವನ್ನು ನಾವು ಹಲವೆಡೆ ಕಾಣಬಹುದಾಗಿದೆ.

ವಿಶ್ವ ಪ್ರೇಮ– ಒಬ್ಬರೋ ಇಬ್ಬರೋ ವ್ಯಕ್ತಿಗಳನ್ನಷ್ಟೇ ಅಲ್ಲದೆ ನಮ್ಮ ಸುತ್ತ ಇರುವ ವ್ಯಕ್ತಿಗಳ ಬಗ್ಗೆ, ದೀನರ ಬಗ್ಗೆ ಅಭಿಮಾನ, ವಿಶ್ವಾಸ, ಪ್ರೇಮ ತೋರ್ಪಡಿಸುವುದು ವಿಶ್ವ ಪ್ರೇಮ. ವಿಶಾಲವಾದ ಪ್ರೇಮ. ಈ ಬಗೆಯ ಪ್ರೇಮದಲ್ಲಿ ಸ್ವಾರ್ಥ ಇರುವುದಿಲ್ಲ. ಫಲಾಪೇಕ್ಷೆ ಇರುವುದಿಲ್ಲ. ಮದರ್ ಥೆರೆಸಾ, ಮಹಾತ್ಮಾ ಗಾಂಧಿ ಮುಂತಾದವರು ಇಂತಹ ಪ್ರೇಮವನ್ನು ತುಂಬಿಕೊಂಡವರು. ಎಲ್ಲರೂ ಅವರಂತಾಗಲಾರರು. ಆದರೂ ಹಾಗಾಗಲು ಪ್ರಯತ್ನಿಸುವುದರಲ್ಲಿ ನಷ್ಟವೇನಿಲ್ಲ.

ಬಹಳಷ್ಟು ಜನರಿಗೆ ಪ್ರೇಮದ ಸರಿಯಾದ ಅರ್ಥ ತಿಳಿದಿರುವುದಿಲ್ಲ. ಆಕರ್ಷಣೆಯನ್ನೇ ಪ್ರೇಮವೆಂದು ತಪ್ಪಾಗಿ ಭಾವಿಸಿರುತ್ತಾರೆ. ಈ ಆಕರ್ಷಣೆಯ ಮುಸುಗು ಹೊದ್ದ ಪ್ರೇಮ ಕಾಮನ ಬಿಲ್ಲಿನಂತಹುದು. ಬೇಗನೇ ಕರಗಿ ಹೋಗುತ್ತದೆ. ನಿಜವಾದ ಪ್ರೇಮ ಸೂರ್ಯನಂತೆ ಪ್ರಜ್ವಲಿಸುತ್ತ ಬಾಳಿನಲ್ಲಿ ಕಾಂತಿಯನ್ನು ತುಂಬುತ್ತಿರುತ್ತದೆ.

## ನಾವು ಏಕೆ ಪ್ರೇಮಿಸಬೇಕು?

ಇದು ಎಂತಹ ಪ್ರಶ್ನೆ? ಪ್ರೇಮಿಸದಿದ್ದರೆ ಏನಾಗುತ್ತದೆ?

ಈ ಮೊದಲೇ ಹೇಳಿರುವಂತೆ ಕೇವಲ ಕಾಲೇಜು ಯುವಕ-ಯುವತಿಯರ ನಡುವೆ ಉಂಟಾಗುವ ಸೆಳೆತವಷ್ಟೇ ಪ್ರೇಮವಾಗಲಾರದು. ಇಂತಹ ಪ್ರೇಮಕ್ಕೆ ಹೊರತಾದ ಪ್ರೇಮವೂ ಇದೆ.

ಈ ಪ್ರೇಮಿಸುವ ಗುಣ ಮೂಲತಃ ಮನುಷ್ಯನ ರಕ್ತದಲ್ಲಿದೆ. ಒಂಟಿಯಾಗಿರುವುದನ್ನು ಮನುಷ್ಯ ವಿರೋಧಿಸುತ್ತಾನೆ (ಅಪವಾದವಿಲ್ಲವೆಂದಲ್ಲ. ಆದರೆ ಅದು ತೀರಾ ವಿರಳ.) ಅದು ಅವನ ಸ್ವಭಾವ. ಪ್ರತಿಯೊಬ್ಬ ವ್ಯಕ್ತಿ ಮೊದಲು ತನ್ನನ್ನು ತಾನು ಪ್ರೇಮಿಸುತ್ತಾನೆ. ತನ್ನ ಅಭಿರುಚಿಗಳಿಗೆ, ಸ್ವಭಾವಕ್ಕೆ ಹೊಂದಿಕೊಳ್ಳುವ, ತನ್ನಂತೆಯೆ ಆಲೋಚಿಸುವ ಇತರರನ್ನು ಸ್ನೇಹಿತರನ್ನಾಗಿ ಮಾಡಿಕೊಳ್ಳುತ್ತಾನೆ. ಅವರನ್ನು ಪ್ರೇಮಿಸುತ್ತಾನೆ. ಅದೇ ರೀತಿ ತನ್ನ ಕುಟುಂಬದ ಸದಸ್ಯರನ್ನು ಪ್ರೇಮಿಸುತ್ತಾನೆ.

ಒಂಟಿತನವೆನ್ನುವುದು ಮನುಷ್ಯನ ಬದುಕಿಗೆ ದುರ್ಭರವಾದುದು. ಅಸಹನೀಯವಾದುದು. ಇಂತಹ ಪರಿಸ್ಥಿತಿಯಿಂದ

ಮನುಷ್ಯನನ್ನು ಪಾರು ಮಾಡುವ ಶಕ್ತಿಯೆಂದರೆ 'ಪ್ರೇಮ.'

ನಾವು ಏಕೆ ಪ್ರೇಮಿಸಬೇಕು? ಮನುಷ್ಯರಾದ ನಾವು ಮನುಷ್ಯರಾಗಿರಲೆಂದೇ ಪ್ರೇಮಿಸಬೇಕು.

ಪ್ರೇಮದಲ್ಲಿ ಸ್ವಾರ್ಥವಿರಬೇಕೇ? ಬೇಡವೇ? ಎಂಬುದು ಹಲವರನ್ನು ಪದೇ ಪದೇ ಕಾಡಿಸುವ ಪ್ರಶ್ನೆ.

ಪ್ರೇಮವಿದ್ದಲ್ಲಿ ಈರ್ಷ್ಯೆಯೂ ಇರುತ್ತದೆನ್ನಬಹುದು. ನಾವು ಪ್ರೇಮಿಸಿದ ವ್ಯಕ್ತಿ ಕೇವಲ ನಮ್ಮನ್ನು ಮಾತ್ರವೇ ಪ್ರೇಮಿಸುತ್ತಿರಬೇಕೆಂಬ ಭಾವನೆ ಈರ್ಷ್ಯೆಗೆಡೆಮಾಡಿಕೊಡುತ್ತದೆ.

ತಾಯಿಯಾದವಳು ಮಗನನ್ನು ತುಂಬಾ ಪ್ರೀತಿಸುತ್ತಿರುತ್ತಾಳೆ. ಮಗನೂ ತಾಯಿಯನ್ನು ಪ್ರೀತಿ, ಅಭಿಮಾನದಿಂದ ಕಾಣುತ್ತಿರುತ್ತಾನೆ. ಆ ಪ್ರೀತಿಯಲ್ಲಿ ಪಾಲು ಪಡೆಯಲು ಇನ್ನೊಬ್ಬಳು ಹೆಂಡತಿಯಾಗಿ ಬಂದಾಗ, ಸಹಜವಾಗಿ ತಾಯಿಯಾದವಳಲ್ಲಿ ಈರ್ಷ್ಯೆ ಉಂಟಾಗುತ್ತದೆ. ಈ ಈರ್ಷ್ಯೆಯಿಂದಲೇ ಅತ್ತೆ-ಸೊಸೆಯರ ನಡುವೆ ಕಿತ್ತಾಟ ಶುರುವಾಗಿ, ಸಂಸಾರದಲ್ಲಿ ಕಲಹ ಉಂಟಾಗುತ್ತದೆ. ಇದೊಂದು ಉದಾಹರಣೆ.

ಪ್ರತಿಯೊಬ್ಬರನ್ನು ನಾವು ನಿಷ್ಕಾಮದಿಂದ ಪ್ರೇಮಿಸುವುದನ್ನು ರೂಢಿ ಮಾಡಿಕೊಳ್ಳಬೇಕು. ನಾವು ಇತರರಿಂದ ಏನನ್ನೂ ಆಶಿಸದೆ ಪ್ರೇಮಿಸುವುದನ್ನು ಕಲಿಯಬೇಕು. ಇದು ಮಾತಿನಲ್ಲಿ ಹೇಳುವಷ್ಟು ಸುಲಭವಲ್ಲ, ನಿಜ. ಆದರೆ ಆ ರೀತಿ ಪ್ರೇಮವನ್ನು ಸಾಧನೆ ಮಾಡಿದರೆ, ಅದು ನಮಗೆ ಎಣೆಯಿಲ್ಲದ ಹಿತವನ್ನು ನೀಡಬಲ್ಲದು.

## ಆದರ್ಶ ಪ್ರೇಮ

ಪ್ರೇಮದ ಬಗೆಗಿನ ಕಲ್ಪನೆ ಯಾವತ್ತೂ ಆದರ್ಶವಾದುದೇ. ಪ್ರೇಮದ ಬಲೆಗೆ ಸಿಲುಕಿದವರು, ತಾವು ಪ್ರೇಮಿಸಿದ ವ್ಯಕ್ತಿಗಳನ್ನು ಆದರ್ಶವಾಗಿಯೇ ಚಿತ್ರಿಸಿಕೊಳ್ಳುತ್ತಾರೆ. ವಾಸ್ತವ ಜೀವನದಲ್ಲಿ ಅನುಕ್ಷಣವೂ ಆದರ್ಶವಾಗಿರಲು ಸಾಧ್ಯವಾಗದು.

> **"ಈ ಪ್ರಪಂಚದಲ್ಲಿ ಹುಟ್ಟಿದ ಪ್ರತಿಯೊಂದೂ ಮಣ್ಣಾಗುತ್ತದೆ" ಎಂಬ ಮಾತನ್ನು ನಾವು ಕೇಳುತ್ತಲೇ ಇರುತ್ತೇವೆ. ಈ ನಿಯಮ 'ಸಮಸ್ಯೆ'ಗೆ ಕೂಡ ಬಹಳಷ್ಟು ಅನ್ವಯವಾಗುತ್ತದೆ.**

ಪ್ರೇಮದ ತೀವ್ರತೆ ಇಳಿದ ನಂತರ ಆದರ್ಶದ ಪೊರೆ ಕಳಚಿ ಹೋಗಿ ಇತರರ ಲೋಪದೋಷಗಳು ಎದ್ದು ಕಾಣತೊಡಗುತ್ತವೆ. ಪ್ರೇಮ ಕ್ರಮೇಣ ಕ್ಷೀಣಿಸುತ್ತ ಬರುತ್ತದೆ. ಆದರ್ಶ ಪ್ರೇಮವೆನ್ನುವುದು ಪುಸ್ತಕಗಳಲ್ಲಿ, ಸಿನಿಮಾಗಳಲ್ಲಿ, ಕಲ್ಪನೆಗಳಲ್ಲಿ ಮಾತ್ರ ಇರಬಹುದೇನೋ?!

ನಾವು ಮಾರುಕಟ್ಟೆಯಲ್ಲಿ ಹೊಸದಾಗಿ ಯಾವುದಾದರೂ ವಸ್ತು ಖರೀದಿಸಿದಾಗ ಅದರ ಬಗೆಗೆ ಕುತೂಹಲ, ಕಾಳಜಿ ಇರುವುದರಿಂದ ಆ ವಸ್ತುವನ್ನು ಚೆನ್ನಾಗಿ ನೋಡಿಕೊಳ್ಳುತ್ತೇವೆ. ಕ್ರಮೇಣ ಆ ವಸ್ತು ಹಳತಾದಂತೆಲ್ಲ ಅದರ ಬಗೆಗಿನ ಉತ್ಸಾಹ ಕಡಿಮೆಯಾಗುತ್ತದೆ. ಪ್ರೇಮವೂ ಹೊಸದರಲ್ಲಿ ಬಹಳಷ್ಟು ಉಲ್ಲಾಸ ನೀಡುತ್ತದೆ. ಆದರೆ ಪ್ರೇಮದ ಬಗೆಗಿನ ಉತ್ಸಾಹ ಕುಗ್ಗಿತೆಂದರೆ ಬದುಕು ನಿಸ್ಸಾರವೆನಿಸುತ್ತದೆ. ಜೀವನ ಯಾಂತ್ರಿಕವಾಗತೊಡಗುತ್ತದೆ. ಹಾಗಾಗಲು ಬಿಡಬಾರದು. ಪ್ರೇಮವೆನ್ನುವುದು ನಿರಂತರ ಪ್ರವಾಹದಂತೆ ಬಾಳಿನಲ್ಲಿ ಪ್ರವಹಿಸುತ್ತಿರಬೇಕು. ಆ ರೀತಿ ಪ್ರೇಮಕ್ಕೆ ನಾವು ಪೋಷಣೆ ಒದಗಿಸಬೇಕು. ಆ ಪೋಷಣೆ ಹೇಗೆ ಎನ್ನುವುದು ಆಯಾ ವ್ಯಕ್ತಿಗಳ ಮನಸ್ತತ್ವವನ್ನವಲಂಬಿಸಿರುತ್ತದೆ.

## ವೈವಾಹಿಕ ಜೀವನದಲ್ಲಿ ಪ್ರೇಮ

ಗಂಡು-ಹೆಣ್ಣು ಮದುವೆಯಾದ ಹೊಸದರಲ್ಲಿ ಪರಸ್ಪರರ ಬಗ್ಗೆ ಆಕರ್ಷಣೆ, ಮೋಜು ಇರುವುದು ಸಹಜ. ಆಗ ಜಗತ್ತು ರಂಗು ರಂಗಿನದಾಗಿ ಕಂಡು ಬರುತ್ತದೆ. ಕ್ರಮೇಣ ಮೋಜು ಕರಗತೊಡಗಿ ಜೀವನದ ಬಗ್ಗೆ ನಿರಾಸಕ್ತಿ ಉಂಟಾಗತೊಡಗುತ್ತದೆ. ಜೀವಿಸುವುದು ರೂಟೀನ್ ಆಗುತ್ತದೆ. ಪ್ರೇಮ ಕೂಡ. (ಪ್ರೇಮಿಸಿ ಮದುವೆಯಾದವರಲ್ಲೂ ಇದೇ ರೀತಿ ಇರುತ್ತದೆ.)

ಹೀಗಾಗದಂತಿರಬೇಕೆಂದರೆ ಪ್ರೇಮವನ್ನು ಕಲೆಯಂತೆ ಸಾಧನೆ ಮಾಡಬೇಕು. ಇದಕ್ಕೆ ಏಕಾಗ್ರತೆ, ತಾಳ್ಮೆ ಮುಖ್ಯ.

ನಿರ್ಲಕ್ಷ್ಯ ಪ್ರೇಮದ ಪರಮ ಶತ್ರುವೆನ್ನುವುದನ್ನು ಇಬ್ಬರೂ ನೆನಪಿಟ್ಟುಕೊಳ್ಳಬೇಕು. ಒಬ್ಬರ ಬಗ್ಗೆ ಮತ್ತೊಬ್ಬರು

ನಿರ್ಲಕ್ಷ್ಯದಿಂದಿರುವುದು ಸಲ್ಲ. ಪ್ರೇಮವನ್ನು ಪರಸ್ಪರರು ನೀಡಿ, ಪಡೆದುಕೊಳ್ಳಬೇಕು.

ಪ್ರೇಮವೆಂದರೆ ಇಬ್ಬರ ನಡುವೆ ತಿಕ್ಕಾಟವಿಲ್ಲದಂತೆ ಇರುವುದೆಂಬುದು ಬಹಳಷ್ಟು ಜನ ದಂಪತಿಗಳ ಅಭಿಪ್ರಾಯ. ಇದು ತಪ್ಪು ಕಲ್ಪನೆ. ಬೇರೆ ಬೇರೆ ಪರಿಸರಗಳಲ್ಲಿ ಬೆಳೆದು, ವ್ಯಕ್ತಿತ್ವವನ್ನು ರೂಪಿಸಿಕೊಂಡ ವ್ಯಕ್ತಿಗಳಿಬ್ಬರು ಒಂದೆಡೆ ಸೇರಿ, ಬಾಳತೊಡಗಿದಾಗ ಕೆಲವೊಂದು ತಿಕ್ಕಾಟ, ಘರ್ಷಣೆಗಳುಂಟಾಗಬಹುದು. ಅಭಿರುಚಿ, ನಡುವಳಿಕೆ, ಹವ್ಯಾಸಗಳಲ್ಲಿ ಭಿನ್ನತೆ ಇರುವುದು ಸಹಜ. ಪರಸ್ಪರ ಹೊಂದಾಣಿಕೆಯಿಂದ ಈ ಭಿನ್ನತೆಯನ್ನು ಹಗುರಗೊಳಿಸುವುದೇನೂ ದೊಡ್ಡ ಮಾತಲ್ಲ.

ಒಂದು ವಿಷಯ ನೆನಪಿಟ್ಟುಕೊಳ್ಳಿ. ನಾವು ಪ್ರೇಮಿಸಿದ ವ್ಯಕ್ತಿ ಥೇಟ್ ನಮ್ಮಂತೆಯೇ ಯೋಚಿಸಬೇಕು; ವರ್ತಿಸಬೇಕು ಎಂದುಕೊಳ್ಳುವುದು ತಪ್ಪು– ಇದು ವೈವಾಹಿಕ ಜೀವನದಲ್ಲಿಯಾಗಿರಲಿ, ಅಥವಾ ಬೇರೆ ಕಡೆಯಾಗಿರಲಿ– ನಾವು ಇದನ್ನು ಎಂದೂ ಮರೆಯಕೂಡದು.

ಒಬ್ಬರು ಮತ್ತೊಬ್ಬರ ಅಭಿರುಚಿ, ಹವ್ಯಾಸಗಳಿಗೆ ಮನ್ನಣೆ ನೀಡುವುದರಿಂದ ಪ್ರೇಮಕ್ಕೆ ಪುಷ್ಟಿ ದೊರೆತು ವೃದ್ಧಿಗೊಳ್ಳುತ್ತದೆ.

ಮದುವೆಯಾದ ಹೊಸದರಲ್ಲಿ ಸ್ತ್ರೀ–ಪುರುಷರಿಗೆ ಒಬ್ಬರ ಮಾತುಗಳು ಇನ್ನೊಬ್ಬರಿಗೆ ಹಿತಕರವಾಗಿರುತ್ತವೆ. ಗಂಟೆಗಟ್ಟಲೆ ಮಾತಾಡಿದರೂ ಬೇಸರವೆನಿಸುವುದಿಲ್ಲ. ಯಾವ ಮಾತೂ 'ಸಿಲ್ಲಿ' ಎನಿಸುವುದಿಲ್ಲ. ಗಂಡನಾದವನು ಹೊರಗಡೆ ಏನೇ ಅನುಭವವಾಗಿದ್ದರೂ ಅದನ್ನೆಲ್ಲ ಹೆಂಡತಿಯ ಮುಂದೆ ಹೇಳುತ್ತಾನೆ. ಹೆಂಡತಿಯೂ ಅಷ್ಟೇ. ಕ್ರಮೇಣ ಬದುಕಿನ ಏಕತಾನತೆಗೆ ಸಿಲುಕಿ ಮಾತು ಕಡಿಮೆಯಾಗುತ್ತದೆ. 'ಹಾಂ, ಹೂಂ, ಸಾಕು, ಬೇಕು, ಇಲ್ಲ, ಹೌದು...' ಇತ್ಯಾದಿ ಮೊಟಕು ಪದಗಳಿಗಷ್ಟೆ ಮಾತುಕತೆ ಸೀಮಿತವಾದರೂ ಅಚ್ಚರಿ ಪಡಬೇಕಾದುದಿಲ್ಲ. (ಪ್ರೇಮಿಸಿ ಮದುವೆಯಾದ ಯುವಕ–ಯುವತಿಯರಿಗ್ಗೂ ಇದು ಅನ್ವಯವಾಗುತ್ತದೆ. ಮದುವೆಗೆ ಮುನ್ನ ಹಲವು ಕೋಟಿ ಮಾತಾಡಿದ ಬಾಯಿಗಳೂ ಮೊಟಕು ಪದಗಳನ್ನು ನುಡಿಯತೊಡಗುತ್ತವೆ.)

ಏಕೆ ಹೀಗಾಗುತ್ತದೆ? ಅವರ ಪ್ರೇಮದಲ್ಲಿನ ಲೋಪದಿಂದಾಗಿಯೆ? ಅಲ್ಲ– ಇಬ್ಬರ ನಡುವೆ ಒಂದು ರೀತಿಯ 'ಗೋಡೆ' ನಿರ್ಮಾಣವಾಗುವುದರಿಂದ ಹೀಗಾಗುತ್ತದೆನ್ನಬಹುದು. ಇದನ್ನು ನಿವಾರಿಸಲು ಇಬ್ಬರೂ ಸ್ನೇಹಿತರಂತಿರುವುದೇ ಪರಮೋಪಾಯ. ಪರಸ್ಪರರಲ್ಲಿ ತನ್ನ ಜೀವನದ ಸಂಗಾತಿಯ ಮಾತಿನ ಬಗ್ಗೆ ತನಗೆ ಆಸಕ್ತಿ ಇದೆ ಎನ್ನುವುದು ಆ ವ್ಯಕ್ತಿಗೆ ಗೊತ್ತಾಗುವಂತೆ ಇಬ್ಬರೂ ವರ್ತಿಸಬೇಕು.

ಈ ಜಗತ್ತಿನಲ್ಲಿ ತಪ್ಪು ಮಾಡದಿರುವವರೆನ್ನುವವರು ಯಾರೂ ಇಲ್ಲ. ಎಲ್ಲರೂ ತಪ್ಪುಮಾಡುವವರೇ. ತಪ್ಪು ಮಾಡಿದವರನ್ನು ಬೈಯುವುದು, ಟೀಕಿಸುವುದು ಸಹಜವೇ ಆಗಿದೆ. ಆದರೆ ಗಂಡ–ಹೆಂಡತಿಯರು ಪರಸ್ಪರರನ್ನು ಪದೇ ಪದೇ ಟೀಕಿಸುತ್ತಿದ್ದರೆ ಬೇರೊಂದು ನರಕದ ಅಗತ್ಯವೇ ಇಲ್ಲ. ಮನೆಯೇ ನರಕವೆನಿಸತೊಡಗುತ್ತದೆ. ಈ ಬೈಯುವ ಗುಣ, ಟೀಕಿಸುವ ಗುಣ ಅಳತೆ ಮೀರಿತೆಂದರೆ ದಂಪತಿಗಳಲ್ಲಿ ಮಾನಸಿಕ ಕಂದರ ಏರ್ಪಡುತ್ತದೆ. ಒಳ್ಳೆಯ ಗುಣಗಳಿದ್ದರೂ ಮೆಚ್ಚಬೇಕೆನಿಸುವುದಿಲ್ಲ.

ಆದರೆ, ಒಬ್ಬರು ಗುಣೈಕ ದೃಷ್ಟಿ ದೃಷ್ಟಿಯಿಂದ ಮೆಚ್ಚಿಕೊಳ್ಳುವುದರಿಂದ ದಾಂಪತ್ಯ ಬಂಧನ, ಅನುಬಂಧ ಮತ್ತಷ್ಟು ಬಲಗೊಳ್ಳುತ್ತದೆಂಬುದು ಬಹಳಷ್ಟು ಜನರಿಗೆ ಅರ್ಥವಾಗಿರುವುದಿಲ್ಲ.

ದಂಪತಿಗಳಾದವರಲ್ಲಿ ಯಾರೇ ಒಬ್ಬರು, "ಆ ರೀತಿ ಹೊಗಳೋದು ನಾಟಕೀಯತೆ, ನನ್ನಿಂದಾಗದು. ನನಗೆ ಹಿಡಿಸುವುದಿಲ್ಲ. ನಾನು ತುಂಬಾ ನಿರ್ದಾಕ್ಷಿಣ್ಯ ವ್ಯಕ್ತಿ" ಎಂದುಕೊಳ್ಳುವವರಿದ್ದರೆ, ಅವರ ಅಭಿಪ್ರಾಯ ತಪ್ಪೆಂದೇ ಹೇಳಬೇಕಾಗುತ್ತದೆ.

ಇನ್ನೊಬ್ಬ ವ್ಯಕ್ತಿಯಲ್ಲಿರುವ ದೊಡ್ಡ ಗುಣವನ್ನೋ ವೈಶಿಷ್ಟ್ಯವನ್ನೋ ಗ್ರಹಿಸಲು, ಮೆಚ್ಚಿಕೊಳ್ಳಲು ಅಡ್ಡಿಯೇನು? ಅದನ್ನು ನಾಟಕೀಯತೆ ಎಂದಾಗಲಿ, ಚಮಚಾಗಿರಿ ಎಂದಾಗಲಿ ಭಾವಿಸಬೇಕಾದುದಿಲ್ಲ. ಮೆಚ್ಚಿಕೊಳ್ಳುವುದರಲ್ಲಿ ತಪ್ಪೂ ಇಲ್ಲ.

ನಾವು ಮಾಡಿದ ಕೆಲಸವನ್ನು ಯಾರಾದರೂ ಮೆಚ್ಚಿ ಹೊಗಳಿದರೆ ಮನಸ್ಸು ಮುದಗೊಳ್ಳುತ್ತದೆ. ಹೊಗಳಿಕೆ ಎಲ್ಲರಿಗೂ

ಪ್ರಿಯ. ಹಾಗೆಂದು ಪ್ರತಿಯೊಂದನ್ನೂ ಹೊಗಳುತ್ತಾ ಹೋದರೆ ಮಾತ್ರ ಅದು ಚಮಚಾಗಿರಿ ಎನಿಸಿಕೊಳ್ಳುತ್ತದೆ.

ದಂಪತಿಗಳಲ್ಲಿ ಗಂಡ ಹೆಂಡತಿಯನ್ನು ಮೆಚ್ಚಿಕೊಳ್ಳುವುದು, ಹೆಂಡತಿ ಗಂಡನನ್ನು ಹೊಗಳುವುದರಲ್ಲಿ ತಪ್ಪೇನಿದೆ? ಪರಸ್ಪರರಿಗೆ ಮೆಚ್ಚುಗೆಯಾದ ಗುಣಗಳನ್ನು ಹೊಗಳಿದರೆ ಇಬ್ಬರೂ ಸಂತೋಷಗೊಳ್ಳುತ್ತಾರೆ. ಇಂತಹ ಸಂತೋಷ ಬದುಕಿಗೆ ಟಾನಿಕ್ ಇದ್ದಂತೆ.

ಬಾಳಿನಲ್ಲಿ ಹೊಗಳಿಕೆಯಂತೆ ಟೀಕೆಗೂ ಸ್ಥಾನವಿದೆ. ತಪ್ಪು ಮಾಡಿದಾಗ ದಂಪತಿಗಳು ಪರಸ್ಪರರನ್ನು ಟೀಕಿಸುವುದು ಸಹಜ. ಈ ಟೀಕೆ ವಿಮರ್ಶೆ ಔಚಿತ್ಯದ ಎಲ್ಲೆ ಮೀರಬಾರದು. ಗಂಡ ಹೆಂಡತಿಯನ್ನೋ, ಹೆಂಡತಿ ಗಂಡನನ್ನೋ, ಮಾತು ಮಾತಿಗೆ ಹೀಗಳೆಯುತ್ತ, ಟೀಕಿಸುತ್ತ ಇದ್ದರೆ ಅದಕ್ಕೇನೂ ಬೆಲೆ ಇಲ್ಲದಂತಾಗುತ್ತದೆ. ಆ ರೀತಿಯ ಟೀಕೆ 'ಒಣ ಕಿರಿ ಕಿರಿ' ಎನ್ನುವ ಕೆಟ್ಟ ಹೆಸರು ಪಡೆದುಕೊಳ್ಳುತ್ತದೆ.

ಟೀಕೆ, ವಿಮರ್ಶೆ ತೀರಾ ನೇತ್ಯಾತ್ಮಕ ಆಗಿರಕೂಡದು. ನೇತ್ಯಾತ್ಮಕ ವಿಮರ್ಶೆ ಮನಸ್ಸಿನಲ್ಲಿ ಕಹಿಯನ್ನು ತುಂಬುತ್ತ ಹೋಗುತ್ತದೆ. ದಂಪತಿಗಳಾದವರು ತಮ್ಮ ಸಂಗಾತಿಯಲ್ಲಿ ಇರುವ ಒಳ್ಳೆಯ ಲಕ್ಷಣಗಳಿಗೆ ಹೆಚ್ಚು ಪುಟ ಕೊಡಲು ಪ್ರಯತ್ನಿಸಬೇಕು. ಒಬ್ಬರು ತಪ್ಪು ಮಾಡಿದಾಗ ಇನ್ನೊಬ್ಬರು ಅನುನಯದಿಂದ ಹೇಳಿದಲ್ಲಿ ಅವರಿಬ್ಬರ ನಡುವೆ ಒಡಕು ಮೂಡುವ ಅವಕಾಶ ಬಹಳ ಕಡಿಮೆ.

ದಂಪತಿಗಳ ನಡುವೆ ಜಗಳ ಬರುವುದುಂಟು. ಇಬ್ಬರೂ ಬಹಳ ಹೊತ್ತು ವಾದಿಸಿ ಸುಸ್ತಾಗುತ್ತಾರೆ. ಆ ಪರಿಸ್ಥಿತಿಗೆ ಕಾರಣರು ಮಾತ್ರ ಆ ಇಬ್ಬರಲ್ಲಿ ಒಬ್ಬರಾಗಿರುತ್ತಾರೆನ್ನುವುದು ನಿಸ್ಸಂದೇಹ! ತಪ್ಪು ಯಾರದಾಗಿರುತ್ತದೋ, ಅವರು ಅದನ್ನು ತಕ್ಷಣವೇ ಒಪ್ಪಿಕೊಳ್ಳದಿರುವುದರಿಂದ ಜಗಳ ಶುರುವಾಗುತ್ತದೆ. ತಪ್ಪು ಒಪ್ಪಿಕೊಳ್ಳಲು ಅಹಂ ಅಡ್ಡ ಬರುತ್ತಿರುತ್ತದೆ. ಅಹಂ ಅಪಾರ್ಥವನ್ನು ಹೆಚ್ಚಿಸುತ್ತದೆ. ಅದು ತೊಲಗಿ ಹೋದರೆ ದಂಪತಿಗಳಲ್ಲಿ ಸಾಮರಸ್ಯ ಹೆಚ್ಚುತ್ತದೆ.

## ಉಪಸಂಹಾರ

ಇತರರಲ್ಲಿನ ಲೋಪಗಳನ್ನು ಎತ್ತಿ ತೋರಿಸುವ ಮುನ್ನ, ನಾವು ನಮ್ಮಲ್ಲಿರುವ ಲೋಪವನ್ನು ವಿಶ್ಲೇಷಿಸಿಕೊಂಡು, ಅದನ್ನು ಸರಿಪಡಿಸಿಕೊಳ್ಳಲು ಪ್ರಯತ್ನಿಸಿದರೆ ವಿಜಯದತ್ತ ಪಯಣ ಖಾತ್ರಿ.

ಇಲ್ಲಿಯವರೆಗೂ ನಾವು ಸಮಸ್ಯೆಯ ಬಗ್ಗೆ, ಅದರಿಂದಾಗಿ ಮನಸ್ಸು ನೊಂದುಕೊಳ್ಳುವ ಬಗ್ಗೆ, ಪ್ರೇಮದ ಬಗ್ಗೆ ವಿಶ್ಲೇಷಿಸಿದ್ದಾಯ್ತು.

ಸಮಸ್ಯೆಯೊಂದಿಗೆ ಹೋರಾಡಬೇಕೆಂದರೆ ನಾವು ನಮ್ಮ ಮನಸ್ಸಿನೊಂದಿಗೇ ಯುದ್ಧ ಮಾಡಬೇಕು. ಆ ಯುದ್ಧ ಸುಲಭವಾದುದೇನಲ್ಲ. ಒಮ್ಮೆ ನಾವು ಆ ಯುದ್ಧ ಗೆದ್ದು ಮನಸ್ಸಿನ ಮೇಲೆ ಹಿಡಿತ ಸಾಧಿಸಿದೆವೆಂದರೆ ನಂತರ ಯಶಸ್ಸು ನಮಗೆ ಅಂಗೈನ ನೆಲ್ಲಿಕಾಯಿ.

## ಭಾಗ ಎರಡು

## ನೀವು – ನಿಮ್ಮ ವ್ಯಕ್ತಿತ್ವ

ಪ್ರತಿಯೊಬ್ಬರಿಗೂ ಅವರದೇ ಆದ ಸ್ವಂತ ವ್ಯಕ್ತಿತ್ವ, ಒಂದಿಷ್ಟು 'ಅಹಂ' ಎನ್ನುವವು ಇರುತ್ತವೆ. ಇವು ಮನುಷ್ಯನ ಸ್ವಭಾವವನ್ನು ಸೂಚಿಸುತ್ತವೆ.

ಮನುಷ್ಯನಾದವನು 'ನಾನು ಬದುಕುವುದು ನನಗೋಸ್ಕರ, ಇತರರಿಗಾಗಿ ಅಲ್ಲ' ಎನ್ನುವುದನ್ನು ಗ್ರಹಿಸಬೇಕು. ಆದರೆ ಇಂದಿನ ಸಂಕೀರ್ಣಮಯ ಜಗತ್ತಿನಲ್ಲಿ ನಾವು ನಮ್ಮ ಸ್ವಭಾವಕ್ಕೆ ತಕ್ಕಂತೆ, ನಮ್ಮ ಮೂಗಿನ ನೇರಕ್ಕೆ ವರ್ತಿಸುವುದು ಸಾಧ್ಯವಾಗದು. ಇತರರಿಗೋಸ್ಕರ ನಟನೆಯನ್ನು ಪ್ರದರ್ಶಿಸಬೇಕಿರುತ್ತದೆ. ಆದರೆ ಈ ನಟನೆ ಕಡಿಮೆ ಪ್ರಮಾಣದಲ್ಲಿದ್ದಷ್ಟೂ ಒಳ್ಳೆಯದು.

ನಮ್ಮನ್ನು ನಾವು ಅರ್ಥ ಮಾಡಿಕೊಳ್ಳುವುದನ್ನು ಚಿಕ್ಕವರಿರುವಾಗಿನಿಂದಲೇ ಪ್ರಾರಂಭಿಸಬೇಕು. ನಮ್ಮ ಬಗ್ಗೆ ನಾವು ದೃಢ ನಂಬಿಕೆ ಬೆಳೆಸಿಕೊಳ್ಳಬೇಕು. 'ಸಲಹೆ ನಿಮ್ಮದಾಗಿರಲಿ, ನಿರ್ಣಯ ನಾನು ತೆಗೆದುಕೊಳ್ಳುತ್ತೇನೆ' ಎನ್ನುವ ವ್ಯಕ್ತಿತ್ವ ಎಲ್ಲಕ್ಕಿಂತಲೂ ಮಹತ್ತರವಾದುದು. ನಿಮ್ಮ ಮೇಲೆ ನಿಮಗೆ ನಂಬಿಕೆ, ಆತ್ಮವಿಶ್ವಾಸ ಇರುವಾಗ ಇತರರು ನಿಮ್ಮ

ಅಭಿಪ್ರಾಯಗಳ ಮೇಲೆ, ಸ್ವಭಾವದ ಮೇಲೆ ಸವಾರಿ ಮಾಡಲು ಬಿಡಬೇಡಿ. ನಿಮ್ಮನ್ನು ನೀವು ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಎಲ್ಲಿಯೂ ರಾಜಿಯಾಗಬೇಡಿ. ಆತ್ಮವಂಚನೆ ಮಾಡಿಕೊಳ್ಳಬೇಕಾದ ಅಗತ್ಯವಿಲ್ಲ.

ಪ್ರತಿಯೊಬ್ಬರಿಗೂ ಅವರದೇ ಆದ ವ್ಯಕ್ತಿತ್ವದ ಛಾಪು ಇರುತ್ತದೆ. ನಾವು ಎಂತಹವರು? ಹೆಚ್ಚು ಯೋಚನೆ ಮಾಡುವವರೆ? ಬುದ್ಧಿವಂತರೆ? ಕಠಿಣ ಪರಿಶ್ರಮಿಗಳೆ? ಭಾವುಕರೆ? ಕೋಪಿಷ್ಠರೆ? ಇಂತಹವುಗಳನ್ನೆಲ್ಲಾ ವಿಶ್ಲೇಷಿಸಿಕೊಂಡು ನೋಡಿದಾಗ ನಮ್ಮ ವ್ಯಕ್ತಿತ್ವದ ಛಾಪು ಎಂತಹುದೆಂಬುದು ಸ್ವಲ್ಪ ಮಟ್ಟಿಗಾದರೂ ಅರ್ಥವಾಗುತ್ತದೆ.

ನಮ್ಮ ಬಗ್ಗೆ ಇತರರು ಏನೆಂದುಕೊಳ್ಳುತ್ತಿದ್ದಾರೆ? ನಮ್ಮ ಬಗ್ಗೆ ನಮ್ಮ ತಂದೆ-ತಾಯಿ, ಸಹಪಾಠಿಗಳು, ಶಿಕ್ಷಕರು ಏನು ಹೇಳುತ್ತಿರುತ್ತಾರೆ ಎನ್ನುವುದರ ಬಗ್ಗೆ ವಿಶ್ಲೇಷಣೆ ಮಾಡಿ ನೋಡಿಕೊಂಡಾಗ ನಮಗೆ ನಮ್ಮ ವ್ಯಕ್ತಿತ್ವದ ಕಲ್ಪನೆ ಒಂದಷ್ಟು ಸ್ಪಷ್ಟಗೊಳ್ಳುತ್ತದೆ. ನಮ್ಮ ಜೊತೆಯವರು, ಸುತ್ತ-ಮುತ್ತ ಇರುವವರು ಹೇಳುವುದರಲ್ಲಿ ಸ್ವಲ್ಪವಾದರೂ ಸತ್ಯವಿರುತ್ತದೆ.

ನಮ್ಮ ಬಗ್ಗೆ ಇತರರ ಅಭಿಪ್ರಾಯ ಏನಿದೆ ಎಂಬುದನ್ನು ತಿಳಿದುಕೊಂಡ ನಂತರ ನಮ್ಮಲ್ಲಿ ಏನಾದರೂ ಲೋಪದೋಷಗಳನ್ನು ಅವರು ಎತ್ತಿ ತೋರಿಸಿದ್ದರೆ- ಅವುಗಳನ್ನು ತಿದ್ದಿ, ಸರಿಪಡಿಸಿಕೊಳ್ಳುವ ಪ್ರಯತ್ನ ಮಾಡಬೇಕು. ಇದರಿಂದ ನಮ್ಮ ವ್ಯಕ್ತಿತ್ವಕ್ಕೆ ಮತ್ತಷ್ಟು ಮೆರುಗು ಬರುತ್ತದೆ.

ನಮ್ಮ ಬಗ್ಗೆ ನಾವು ತಿಳಿದುಕೊಳ್ಳಲು ಇನ್ನೊಂದು ವಿಧಾನವಿದೆ. ನಮಗೆ ಇಷ್ಟವಾದ ಹತ್ತು-ಹನ್ನೆರಡು ಜನ ಪ್ರಸಿದ್ಧ ವ್ಯಕ್ತಿಗಳ ಹೆಸರುಗಳನ್ನು ಒಂದು ಹಾಳೆಯ ಮೇಲೆ ಬರೆಯಬೇಕು. ಆಯಾ ವ್ಯಕ್ತಿಗಳ ಹೆಸರುಗಳ ಮುಂದೆ ಅವರು ನಿಮಗೆ ಯಾಕೆ ಇಷ್ಟವಾಗಿದ್ದಾರೆ? ಅವರ ಗುಣಗಳೇನೆಂಬುದನ್ನು ಬರೆದುಕೊಳ್ಳಬೇಕು.

ಉದಾಹರಣೆಗೆ ನಮಗೆ ಕಪಿಲ್ ದೇವ್ ಇಷ್ಟವಾಗಿರುತ್ತಾನೆಂದುಕೊಳ್ಳೋಣ. ಆತ ಛಲಕ್ಕೆ ಇನ್ನೊಂದು ಹೆಸರು. ಆ ಛಲದ ಕಾರಣದಿಂದ ನಾವು ಕಪಿಲ್ ದೇವ್‌ನನ್ನು ಇಷ್ಟಪಡುತ್ತಿದ್ದರೆ ನಮ್ಮಲ್ಲಿಯೂ ಅಷ್ಟೋ ಇಷ್ಟೋ ಛಲದ ಗುಣ ಇರುತ್ತದೆಂದರ್ಥ. ಅದೇ ರೀತಿ ಗಾಂಧೀಜಿಯನ್ನು ಇಷ್ಟಪಡುವವರಲ್ಲಿ ನಿರಾಡಂಬರ, ಸತ್ಯದ ಭಾವನೆ ಸ್ವಲ್ಪ ಮಟ್ಟಿಗಾದರೂ ಕಂಡು ಬರುತ್ತಿರುತ್ತವೆ.

ನಾವು ಇಷ್ಟಪಡುವ ವ್ಯಕ್ತಿಗಳಲ್ಲಿರುವ ಗುಣ-ದೋಷಗಳಲ್ಲಿ ಒಂದಿಷ್ಟು ಅಂಶ ನಮ್ಮಲ್ಲೂ ಇರುತ್ತದೆ. (ನಮ್ಮಲ್ಲಿಲ್ಲದ ಗುಣಗಳಿಗಾಗಿಯೂ ನಾವು ಇತರರನ್ನು ಇಷ್ಟಪಡಬಹುದು. ಅದು ಬೇರೆ ವಿಷಯ.) ಹಾಗೆಯೇ ನಮ್ಮನ್ನು ಇಷ್ಟಪಡುವವರಲ್ಲಿ ನಮ್ಮ ಗುಣ-ದೋಷಗಳು ಒಂದಿಷ್ಟು ಪ್ರಮಾಣದಲ್ಲಿರುತ್ತವೆಂಬುದೂ ಸತ್ಯ.

ಮೇಲೆ ಹೇಳಿದ ಎಲ್ಲ ರೀತಿಯ ವಿಶ್ಲೇಷಣೆಗಳಿಂದ ನಮ್ಮನ್ನು ನಾವು ಹೆಚ್ಚು ಅರಿತುಕೊಳ್ಳಬಹುದು. ನಮ್ಮ ವ್ಯಕ್ತಿತ್ವದಲ್ಲಿರುವ ಓರೆ ಕೋರೆಗಳನ್ನು ಸರಿಪಡಿಸಿಕೊಳ್ಳಬಹುದು.

## ಅವಮಾನವನ್ನು ಎದುರಿಸುವುದು ಹೇಗೆ?

ಇತರರು ನಮ್ಮನ್ನು ಹೀಯಾಳಿಸಬಹುದು. ನಮಗೆ ಅವಮಾನ ಮಾಡಬಹುದು. ಹೊಗಳುವವರಿರುವಂತೆ ತೆಗಳುವವರೂ ಇರುತ್ತಾರೆ.

ಮನುಷ್ಯನಾದವನಲ್ಲಿ ಯಾರೂ ಪರಿಪೂರ್ಣರಾಗಿರುವುದಿಲ್ಲ. ಅಷ್ಟೋ ಇಷ್ಟೋ ಲೋಪದೋಷಗಳಿದ್ದೇ ಇರುತ್ತವೆ. ಇತರರು ಅವುಗಳನ್ನು ಎತ್ತಿ ತೋರಿಸಿ ಹೀಗಳೆಯಬಹುದು. ಆ ರೀತಿ ಯಾರಾದರೂ ಹೀಗಳೆದು, ಅವಮಾನಿಸಿದಾಗ ನಾವು ಖಿನ್ನತೆಯಿಂದ ಮುದುಡಿಕೊಳ್ಳಬೇಕಾದ ಅಗತ್ಯವಿಲ್ಲ.

ನಮ್ಮನ್ನು ಹೀಗಳೆಯುವವರಾಗಲಿ ಅಥವಾ ವಿಮರ್ಶಿಸುವವರಾಗಲಿ (ಸದ್ವಿಮರ್ಶೆ ಮಾಡುವವರ ವಿಷಯ ಬೇರೆ. ಅವರ ವಿಮರ್ಶೆ ನಮ್ಮ ಅಭಿವೃದ್ಧಿ, ಉನ್ನತಿಗೆ ಸಹಾಯವಾಗುತ್ತದೆ.) ನಮ್ಮಿಂದ ಎದುರುತ್ತರ, ಖಂಡನೆ ಬಯಸುತ್ತಾರೆ. ನಾವು ಖಂಡಿಸಿದಂತೆಲ್ಲ ಅವರ ಟೀಕಾಸ್ತ್ರ ಮತ್ತಷ್ಟು ಮೊನಚುಗೊಳ್ಳುತ್ತದೆ. ಆದ್ದರಿಂದ ನಮ್ಮನ್ನು ಯಾರಾದರೂ ವಿನಾಕಾರಣ ಟೀಕಿಸಿದಾಗ ಅತ್ತಕಡೆ ಗಮನಕೊಡದಂತಿದ್ದು ಬಿಡಬೇಕು. ನಮ್ಮ ಟೀಕಾಕಾರನ ಬಾಯಿ ಮುಚ್ಚಿಸಬೇಕೆಂದಿದ್ದರೆ ನಾವು, 'ಹೌದಪ್ಪ ನೀನು ಹೇಳೋದು ನಿಜ. ನನ್ನಲ್ಲಿ ಲೋಪವಿದೆ' ಎಂದು ಬಿಟ್ಟರೆ ಸಾಕು, ಆ ವಿಮರ್ಶಕ ತಿರುಗಿ ಬಾಯಿ ತೆರೆಯಲಾರ.

## ಪರಿಸ್ಥಿತಿಗನುಗುಣವಾಗಿ ನಾವು

ಈ ಜಗತ್ತು, ಜಗತ್ತಿನ ಜನ ನಮಗೆ ಹೊಂದಿಕೊಳ್ಳುವುದಿಲ್ಲ. ಬದಲಾಗಿ ನಾವೇ ಜಗತ್ತಿಗೆ ಹೊಂದಿಕೊಳ್ಳಬೇಕು. ಅದಾಗದು ಎಂದುಕೊಂಡರೆ ಜಗತ್ತು ನಮ್ಮನ್ನು ತಿರಸ್ಕರಿಸುತ್ತದೆ. ಆ ತಿರಸ್ಕಾರದಿಂದ ನಾವು ಸಂಕಟಪಟ್ಟರೆ ಮತ್ತಷ್ಟು ಕೀಟಲೆಗೊಳಪಡಿಸುತ್ತದೆ.

ನಮ್ಮ ನೋವು, ಸಂಕಟದಿಂದ ಇತರರಿಗೇನಾಗಬೇಕಿದೆ? ಅವುಗಳನ್ನು ನಾವುಗಳೇ ಅನುಭವಿಸಬೇಕು. 'ಅಯ್ಯೋ, ನನಗೆ ಸಂಕಟವಿದೆ, ನೋವಿದೆ' ಎಂದು ಗೋಳಿಟ್ಟರೂ ಜನ ಕನಿಕರಿಸುವುದಿಲ್ಲ. ನೋವು, ಸಂಕಟದಿಂದ ಎಷ್ಟು ಬೇಗ ಪಾರಾಗಲಾಗುತ್ತದೋ ಅಷ್ಟು ಒಳ್ಳೆಯದು.

ಪರಿಸ್ಥಿತಿಗನುಗುಣವಾಗಿ ನಾವೇ ಬದಲಾಗಬೇಕು. ಪರಿಸ್ಥಿತಿ ನಮಗೋಸ್ಕರ ಬದಲಾಗುತ್ತದೆಂದು ಕಾಯುತ್ತ ಕುಳಿತುಕೊಳ್ಳುವುದು ಅವಿವೇಕ.

## ನಮ್ಮ ಇಷ್ಟದಂತೆ ನಮ್ಮನ್ನು ರೂಪಿಸಿಕೊಳ್ಳುವುದು

ನಾವು ಕಲ್ಪನೆಯಲ್ಲಿ ನಮ್ಮನ್ನು ಯಾವ ರೀತಿ ಚಿತ್ರಿಸಿಕೊಳ್ಳುತ್ತೇವೆಯೋ ಅದೇ ರೀತಿ ರೂಪುಗೊಳ್ಳುತ್ತೇವೆ. ನಮ್ಮ ಮನಸ್ಸಿನಲ್ಲಿ ನಮ್ಮ ಬಗ್ಗೆ ಮಾನಸಿಕ ಚಿತ್ರವೊಂದು ರೂಪುಗೊಳ್ಳುತ್ತದೆ. ಇದರ ಪ್ರಭಾವ ಗಾಢವಾದದ್ದು. ನಮ್ಮನ್ನು ನಾವು ಕೀಳಾಗಿ ಭಾವಿಸಿಕೊಂಡರೆ, ನಮ್ಮಲ್ಲಿ ಆತ್ಮನ್ಯೂನತೆಯ ಭಾವನೆ ನೆಲೆಸುತ್ತದೆ. ಮಾನಸಿಕವಾಗಿ ನಾವು ಕುಬ್ಜರಾಗಿ ಬಿಡುತ್ತೇವೆ. ಅದಕ್ಕೆ 'ನೇತ್ಯಾತ್ಮಕ ಚಿಂತನೆ' ಸಲ್ಲದು. 'ಇತ್ಯಾತ್ಮಕ ಚಿಂತನೆ' ಮಾನಸಿಕ ವಿಕಾಸಕ್ಕೆ ಬಹಳ ಸಹಾಯ ಮಾಡುತ್ತದೆ. ಈ

> **"ನಿಮ್ಮ ಮನಸ್ಸು ಚೆನ್ನಾಗಿರದಿದ್ದರೆ ಕೊಡಲಿ ಹಿಡಿದು ಕಟ್ಟಿಗೆ ಸೀಳಿರಿ" ಎಂದು ಚೈನಾದಲ್ಲಿ ಒಂದು ಗಾದೆ ಮಾತಿದೆ. ಮಾನಸಿಕ ಒತ್ತಡವನ್ನು ಶಾರೀರಿಕ ಶ್ರಮ ಮರೆಸುತ್ತದೆ ಎಂಬುದೇ ಇದರರ್ಥ.**

ಇತ್ಯಾತ್ಮಕ ಚಿಂತನೆ ಒಂದು ರೀತಿಯ ಸ್ವಸಮ್ಮೋಹನದಂತೆ. ಪರಿಪೂರ್ಣ ಮಾನಸಿಕ ಆರೋಗ್ಯಕ್ಕೆ ಇದು ತುಂಬಾ ಒಳ್ಳೆಯ ಹಾದಿ. ಈ ರೀತಿಯ ಚಿಂತನೆ ಎಂದರೇನು? ಅದು ಹೇಗಿರುತ್ತದೆ?

ಉದಾಹರಣೆ ನೀಡಿ ಹೇಳಬೇಕೆಂದರೆ, ಬ್ರಿಟನ್ನಿನ ಪ್ರಧಾನಿ ಚರ್ಚಿಲ್. ಈತ ಪ್ರಖ್ಯಾತ ವಾಗ್ಮಿ ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವೇ. ಆದರೆ ಈತನಿಗೆ ಮೊದಮೊದಲು ವೇದಿಕೆ ಹತ್ತುತ್ತಲೇ ಕಾಲುಗಳು ನಡುಗತೊಡಗಿ ಮಾತು ತಡವರಿಸುತ್ತಿತ್ತೆಂಬುದು ಬಹಳ ಜನರಿಗೆ ಗೊತ್ತಿರಲಿಕ್ಕಿಲ್ಲ. ಆತನೇನಾದರೂ 'ಅಯ್ಯೋ, ನನಗೆ ಸಭಾಕಂಪವಿದೆ, ಉಗ್ಗು ಇದೆ. ನಾನು ಇನ್ನೆಂದೂ ವೇದಿಕೆ ಹತ್ತಿ ಮಾತಾಡಲಾರೆ' ಎಂದುಕೊಂಡಿದ್ದನೆಂದಿಟ್ಟುಕೊಳ್ಳಿ. ಅದು ನೇತ್ಯಾತ್ಮಕ ಚಿಂತನ. ಆದರೆ ಚರ್ಚಿಲ್ ಮಹಾಶಯ ನೇತ್ಯಾತ್ಮಕ ಚಿಂತನವನ್ನಾಶ್ರಯಿಸದೆ, 'ಇಲ್ಲ ನಾನು ಎಂದಿದ್ದರೂ ಸಭಾಕಂಪನವನ್ನು ಮೆಟ್ಟಿ ನಿಲ್ಲುತ್ತೇನೆ. ಉತ್ತಮ ವಾಗ್ಮಿ ಎನಿಸಿಕೊಳ್ಳದೆ ಬಿಡಲಾರೆ' ಎನ್ನುವ ಶಪಥ ಮಾಡಿ, ದಿನಕ್ಕೆ ಎಂಟು ಗಂಟೆ ಕನ್ನಡಿ ಮುಂದೆ ನಿಂತು ಸತತವಾಗಿ ಮಾತಾಡುವ ಕಲೆಯನ್ನು ರೂಢಿಮಾಡಿಕೊಂಡ. ಪ್ರಪಂಚದ ಅತ್ಯುತ್ತಮ ವಾಗ್ಮಿಗಳಲ್ಲಿ ಒಬ್ಬನೆನಿಸಿಕೊಂಡ. ಇದು 'ವಾಸ್ತವ ಚಿಂತನ'.

'ವಾಸ್ತವ ಚಿಂತನೆ'ಯ ಮುಖ್ಯ ಲಕ್ಷಣ ನಮ್ಮ ಮೇಲೆ ನಾವು ನಂಬಿಕೆ ಬೆಳೆಸಿಕೊಳ್ಳುವುದು. ಈ ನಂಬಿಕೆ ನಮ್ಮ ಇಷ್ಟದಂತೆ ನಾವು ರೂಪುಗೊಳ್ಳುವಲ್ಲಿ ಸಹಾಯ ಮಾಡುತ್ತದೆ.

## ಭದ್ರತೆಯ ಭಾವನೆ

ಬಹಳಷ್ಟು ಜನ ತಮ್ಮ ತಮ್ಮ ಕೆಲಸಗಳಲ್ಲಿ ವಿಫಲಗೊಳ್ಳಲು ಕಾರಣ 'ಅಭದ್ರತೆ'ಯ ಭಾವನೆ. ಆತ್ಮಸ್ಥೈರ್ಯ ಲೋಪಗೊಳ್ಳುವುದರಿಂದ ಈ 'ಅಭದ್ರತೆ'ಯೆಂಬುದು ಉಂಟಾಗುತ್ತದೆ. ಈ ಭಾವನೆಗೀಡಾದವರನ್ನು ಕೀಳರಿಮೆ ಬೆನ್ನಟ್ಟಿ ಕಾಡುತ್ತಿರುತ್ತದೆ. ಇಂತಹವರು ನೈತಿಕವಾಗಿ, ಸಾಮಾಜಿಕವಾಗಿ, ಮಾನಸಿಕವಾಗಿ, ಶಾರೀರಿಕವಾಗಿ ಕುಗ್ಗಿ ಹೋಗುವ ಅವಕಾಶಗಳುಂಟು. ಇಂತಹವರಲ್ಲಿ ಈರ್ಷ್ಯೆ, ಅಸೂಯೆ ಮನೆ ಮಾಡಿಕೊಂಡಿರುತ್ತದೆ.

ಮನುಷ್ಯನಾದವನಲ್ಲಿ ಈ ಅಭದ್ರತೆಯ ಭಾವನೆಯುಂಟಾಗಲು ಕಾರಣಗಳೇನೆಂದರೆ;

೧)ಆತ್ಮ ಸ್ಥೈರ್ಯ ಇಲ್ಲದಿರುವುದು. ೨) ಬೇರೆಯವರಿಂದ ಅವರಿಗೆ ಮನ್ನಣೆ ಲಭಿಸದಿರುವುದು. ೩) ಓದು, ಆಟ, ಕುಶಲಕಲೆ, ಬುದ್ಧಿವಂತಿಕೆ ಇತ್ಯಾದಿಗಳಲ್ಲಿ ಇತರರಿಗಿಂತ ಹಿಂದುಳಿದಿರುವುದು.

ಈ ಭಾವನೆಯ ಹಿಡಿತಕ್ಕೆ ಸಿಲುಕಿದ ವ್ಯಕ್ತಿ ಕೆಲಸವನ್ನು ಯೋಚನೆ ಮಾಡಿ ಮಾಡುವುದಿಲ್ಲ. ದುಡುಕಿ, ಆ ನಂತರ ಪಶ್ಚಾತ್ತಾಪ ಪಡುತ್ತಿರುತ್ತಾನೆ. ಇತರರು ಯಾವಾಗಲೂ ತನ್ನ ಬಗ್ಗೆ ಮುತುವರ್ಜಿ ವಹಿಸಬೇಕು; ತನ್ನನ್ನು ಪ್ರೇಮಿಸಬೇಕು ಎಂದುಕೊಳ್ಳುತ್ತಿರುತ್ತಾನೆ. ಆದರೆ ಅದಕ್ಕೆ ತನ್ನ ಕಡೆಯಿಂದ ಯಾವ ರೀತಿಯ ಪ್ರಯತ್ನವಿರಬೇಕು ಎನ್ನುವುದರ ಬಗ್ಗೆ ಒಂದಿಷ್ಟೂ ಯೋಚಿಸುವುದಿಲ್ಲ.

ಅಭದ್ರತೆಯ ಭಾವನೆಗೀಡಾದ ವ್ಯಕ್ತಿಗೆ ಒಂಟಿಯಾಗಿರಲು ಆಗುವುದೇ ಇಲ್ಲ. ಅಂತಹವರಿಗೆ ತಮ್ಮ ಇಷ್ಟಾನಿಷ್ಟಗಳು, ಅಭಿರುಚಿ, ಹವ್ಯಾಸಗಳು ಏನೇನೆಂಬುದೇ ಗೊತ್ತಿರುವುದಿಲ್ಲ. ಹಿಂಜರಿತದ ಪ್ರವೃತ್ತಿ ಅಂತಹವರನ್ನು ತನ್ನ ಕಪಿಮುಷ್ಠಿಯಲ್ಲಿ ಹಿಡಿದುಕೊಂಡಿರುತ್ತದೆ.

## ಭದ್ರತೆಯ ಭಾವನೆಯನ್ನು ಬೆಳೆಸಿಕೊಳ್ಳುವುದು ಹೇಗೆ?

ಯಶಸ್ಸು ಸಾಧಿಸಬೇಕೆಂದರೆ ನಮಗೆ ನಮ್ಮ ಬಗ್ಗೆ ಸರಿಯಾದ ಕಲ್ಪನೆ, ತಿಳುವಳಿಕೆ ಇರಬೇಕು. ನಮ್ಮಲ್ಲಿರುವ ದೌರ್ಬಲ್ಯಗಳೇನೆಂಬುದನ್ನು ಅರಿತುಕೊಂಡು ಅವುಗಳನ್ನು ಕಳೆದುಕೊಳ್ಳುವ ಪ್ರಯತ್ನ ಮಾಡಬೇಕು. ನಮಗಿರುವ ಒಳ್ಳೆಯ ಅಭಿರುಚಿ, ಹವ್ಯಾಸಗಳನ್ನು ಬೆಳೆಸಿಕೊಳ್ಳುವುದು ಕೂಡ ಭದ್ರತೆಯ ಭಾವನೆ ಮೂಡಿಸುವಲ್ಲಿ ಸಹಾಯ ಮಾಡುತ್ತದೆ. ಒಳ್ಳೆಯ ಹವ್ಯಾಸಗಳಿಗೆ ಪೋಷಣೆ ನೀಡಿ, ಅಭಿವೃದ್ಧಿ ಪಡಿಸುವುದರಿಂದ ತೃಪ್ತಿಉಂಟಾಗುವುದರ ಜೊತೆಗೆ ಆತ್ಮ ಸ್ಥೈರ್ಯವೂ ಬೆಳೆಯುತ್ತದೆ. ನಮ್ಮ ಬಗ್ಗೆ ನಮಗೆ ಗೌರವ ಮೂಡುತ್ತದೆ. ಇತರರು ನಮ್ಮ ಬಗ್ಗೆ ಏನೆಂದುಕೊಳ್ಳುತ್ತಿದ್ದಾರೆ ಎನ್ನುವುದು ಮುಖ್ಯವಲ್ಲ. ನಮ್ಮ ಬಗ್ಗೆ ನಮಗಿರುವ ಭಾವನೆ ಎಂತಹುದು ಎಂಬುದೇ ಮುಖ್ಯ. ನಮ್ಮ ಬಗ್ಗೆ ನಮಗೇ ಹೀನಾಯದ ಭಾವನೆ ಇದ್ದರೆ ಕೀಳರಿಮೆ ಕಾಡತೊಡಗುತ್ತದೆ. ಇತರರೂ ನಮಗೆ ಗೌರವ ನೀಡುವುದಿಲ್ಲ.

ನಮಗೆ ಗೊತ್ತಿಲ್ಲದ ವಿಷಯಗಳ ಬಗೆಗೆ ಪ್ರಸ್ತಾಪ ಬಂದಾಗ ಅವುಗಳ ಬಗ್ಗೆ ವಿವರವಾಗಿ ಕೇಳಿ ತಿಳಿದುಕೊಳ್ಳಬೇಕು. ಇತರರು ಏನೆಂದುಕೊಳ್ಳುತ್ತಾರೋ ಎಂದು ಹಿಂಜರಿಯುವುದು ಸಲ್ಲ. ಆ ರೀತಿ ಕೇಳಿ ತಿಳಿದುಕೊಳ್ಳುವುದರಿಂದ ಜ್ಞಾನದ ಪರಿಧಿ ವಿಸ್ತರಿಸುತ್ತದೆ. ಆತ್ಮವಿಶ್ವಾಸವೂ ಬೆಳೆಯುತ್ತದೆ. ಗಂಭೀರವಾಗಿರುವುದರಲ್ಲಿ ತಪ್ಪೇನೂ ಇಲ್ಲ. ಹಾಗೆಂದು ಅಂತರ್ಮುಖಿ (Introvert) ಆಗಿರಬೇಕೆಂದರ್ಥವಲ್ಲ. ಅಗತ್ಯವಾದಾಗ ಅಗತ್ಯವಾದಷ್ಟು ಮಾತಾಡಬಲ್ಲವರಾಗಿರಬೇಕು. ಅನಾವಶ್ಯಕ ವಾಚಾಳಿತನತ ನಮ್ಮ ಗಾಂಭೀರ್ಯ, ತೂಕವನ್ನು ತಗ್ಗಿಸುತ್ತದೆಂಬುದನ್ನು ನೆನಪಿಟ್ಟುಕೊಂಡರೆ ಸಾಕು. ವಾಚಾಳಿಯಾದವನ ಮಾತುಗಳು ಕ್ರಮೇಣ ಮೌಲ್ಯ ಕಳೆದುಕೊಳ್ಳುತ್ತ ಬರೀ ಶಬ್ದಗಳಾಗಿ ಉಳಿದುಬಿಡುವ ಅಪಾಯವಿದೆ. ಅಂತಹವರಲ್ಲಿ 'ಡೆಪ್ತ್' ಇರುವುದಿಲ್ಲ.

ಕೆಲವೊಂದು ಕೆಲಸಗಳಿಗೆ ಮಿತ್ರರ, ಇತರರ ಸಲಹೆ, ಮಾರ್ಗದರ್ಶನಗಳ ಅಗತ್ಯವಿರುತ್ತದೆ. ಆದರೆ ಪ್ರತಿಯೊಂದು ಕೆಲಸಕ್ಕೂ ಇತರರ ಸಲಹೆ ಬೇಕೇ ಬೇಕು ಎಂದು ಕಾಯದೇ, ನಾವೇ ಸ್ವತಂತ್ರವಾಗಿ ವ್ಯವಹರಿಸಬೇಕು. ಇದು ಕೂಡ ಆತ್ಮ ವಿಶ್ವಾಸವನ್ನು ಮೂಡಿಸಿ, ಭದ್ರತೆಯ ಭಾವನೆಯನ್ನು ಬೆಳೆಸುತ್ತದೆ.

## ಅಪಹಾಸ್ಯ ಮಾಡುವವರಂತೆ ಮೆಚ್ಚಿಕೊಳ್ಳುವವರೂ ಇದ್ದಾರೆ.

ನಾವುಗಳೆಲ್ಲ ಒಂದಲ್ಲ ಒಂದು ಸಂದರ್ಭದಲ್ಲಿ 'ನಮ್ಮನ್ನು ನೋಡಿ ಬೇರೆಯವರು ಏನೆಂದುಕೊಳ್ಳುತ್ತಿದ್ದಾರೋ ಏನೋ' ಎನ್ನುವ ಭಾವನೆಗೊಳಗಾಗಿಯೇ ಇರುತ್ತೇವೆ. ನಮ್ಮಲ್ಲಿ ಆ ಭಾವನೆ ಬೇರೆ ಬೇರೆ ಪ್ರಮಾಣಗಳಲ್ಲಿದ್ದಿರಬಹುದು- ಕೆಲವರಿಗೆ ಹೆಚ್ಚು, ಕೆಲವರಿಗೆ ಕಡಿಮೆ.... ಹೀಗೆ. ಈ ಭಾವನೆಯನ್ನು ಮೆಟ್ಟಿ ನಿಲ್ಲುವವರೇ ಜೀವನದಲ್ಲಿ ಯಶಸ್ಸನ್ನು ಸಾಧಿಸಬಲ್ಲರು.

ಬಹುಪಾಲು ಜನ ತಾವುಗಳು ಇತರರ ದೃಷ್ಟಿಯಲ್ಲಿ ನಗೆ ಪಾಟಲಿಗೀಡಾಗಬಾರದೆಂದು ಅತೀವ ಕಾಳಜಿ ವಹಿಸುತ್ತಾರೆ. ತಮ್ಮನ್ನು ಎಲ್ಲಿ ಪೆದ್ದರೆಂದು ಭಾವಿಸುತ್ತಾರೋ ಎಂಬ ದಾಕ್ಷಿಣ್ಯದಿಂದ ಗೊತ್ತಿರದ ವಿಷಯಗಳನ್ನು ಕೇಳಿ ತಿಳಿದುಕೊಳ್ಳಲು

ಹಿಂಜರಿಯುತ್ತಾರೆ. ಅಜ್ಞಾನದ ಮುಸುಕಿನಲ್ಲೇ ಇರಬಯಸುತ್ತಾರೆ. ಇತರರು ತಮ್ಮನ್ನು ನೋಡಿ ಏನೆಂದುಕೊಳ್ಳುತ್ತಾರೋ ಎನ್ನುವ ಭಾವನೆ ಅಳತೆ ಮೀರಿತೆಂದರೆ ಅದು ಆತ್ಮ ನ್ಯೂನತೆಯ ಭಾವನೆಗೆಡೆ ಮಾಡಿಕೊಡುತ್ತದೆ.

ಇಲ್ಲೊಂದು ವಿಷಯ. ಜಗತ್ತಿನಲ್ಲಿ ಎಲ್ಲರೂ ನಮ್ಮ ಲೋಪದೋಷಗಳನ್ನಷ್ಟೇ ಗಮನಿಸುವುದಿಲ್ಲ, ಸದ್ಗುಣಗಳನ್ನೂ ಗುರುತಿಸುವವರಿದ್ದಾರೆ. ಆ ಸದ್ಗುಣಗಳೇನೆಂಬುದನ್ನು ಅರಿತುಕೊಂಡು, ಅವುಗಳನ್ನೇ ಹೆಚ್ಚು ಹೆಚ್ಚು ಪ್ರೊಜೆಕ್ಟ್ ಮಾಡಲು ಪ್ರಯತ್ನಿಸಬೇಕು. ಲೋಪಗಳನ್ನು, ಹುಳುಕುಗಳನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಬೇಕು.

ನಮ್ಮ ವ್ಯಕ್ತಿತ್ವ ನಮ್ಮ ಭೌತಿಕ ಲೋಪಗಳನ್ನು ತುಂಬಿಕೊಡುತ್ತದೆ. ಮನುಷ್ಯನ ಶಾರೀರಿಕ ಸೌಂದರ್ಯಕ್ಕೂ ವ್ಯಕ್ತಿತ್ವಕ್ಕೂ ಅವಿನಾಭಾವ ಸಂಬಂಧವಿದೆ. ಶಾರೀರಿಕವಾಗಿ ಸುಂದರವಾಗಿದ್ದರೂ, ಒಳ್ಳೆಯ ವ್ಯಕ್ತಿತ್ವವಿರದವರನ್ನು ಯಾರೂ ಇಷ್ಟಪಡುವುದಿಲ್ಲ. ಬಾಹ್ಯ ಸೌಂದರ್ಯವಿರದಿದ್ದರೂ ಒಳ್ಳೆಯ ವ್ಯಕ್ತಿತ್ವ ಉಳ್ಳವರು ಬಹಳಷ್ಟು ಜನರಿಗೆ ಪ್ರಿಯರಾಗುತ್ತಾರೆ.

ಹಾಸ್ಯ ಪ್ರಜ್ಞೆ, ವಿಶಾಲ ಮನೋಭಾವನೆ, ಶಾಂತ ಸ್ವಭಾವ ಇವೆಲ್ಲವೂ ಒಳ್ಳೆಯ ವ್ಯಕ್ತಿತ್ವದ ಲಕ್ಷಣಗಳಲ್ಲಿ ಕೆಲವು.

## ನಮ್ಮ ಬಗ್ಗೆ ನಮಗಿರುವ ಹೀನಾಯ ಭಾವನೆ

ನಮ್ಮಲ್ಲಿ ಬಹಳಷ್ಟು ಜನರಿಗೆ ತಾವು ಇತರರ ಮುಂದೆ ಏನಾದರೂ ಕೆಲಸ ಮಾಡಬೇಕೆಂದರೆ ಸಂಕೋಚ ಉಂಟಾಗುತ್ತಿರುತ್ತದೆ. ಬೇರೆಯವರು ತಮ್ಮನ್ನು ನೋಡಿ ನಗುತ್ತಾರೇನೋ ಎನ್ನುವ ಅಳುಕು ಕಾಡುತ್ತಿರುತ್ತದೆ. ಬೇರೆಯವರು ನಕ್ಕು ತಾವು ಅವಮಾನಕ್ಕೀಡಾದರೆ... ಎನ್ನುವ ಹಿಂಜರಿತದಿಂದಾಗಿ ಯಾವ ಕೆಲಸ ಮಾಡಲೂ ಮುಂದಾಗುವುದಿಲ್ಲ. ಆಕಸ್ಮಾತ್ ಕೆಲಸ ಮಾಡಲು ಕೈ ಹಾಕಿದಾಗ, ಅದೇನಾದರೂ ವಿಫಲವಾಯಿತೆಂದರೆ ಕೇಳಲೇಬೇಡಿ. ತಮ್ಮನ್ನು ತಾವೇ ಬೈದುಕೊಳ್ಳುತ್ತ, ನಿಂದಿಸಿಕೊಳ್ಳುತ್ತ ಮತ್ತಷ್ಟು ಚಿಪ್ಪಿನಲ್ಲಿ ಹುದುಗಿಕೊಳ್ಳುತ್ತಾರೆ.

> **ಶ್ರೇಷ್ಠಾತಿಶ್ರೇಷ್ಠ ಸ್ನೇಹಿತ ಎಂದರೆ ಪುಸ್ತಕಗಳು. ನಿಮಗೆ ವಿನೋದವನ್ನೂ ಜ್ಞಾನವನ್ನೂ ಒದಗಿಸುವ ಅವು ಪ್ರತಿಯಾಗಿ ನಿಮ್ಮಿಂದ ಏನನ್ನೂ ಬಯಸುವುದಿಲ್ಲ. ಜೀವನದಲ್ಲಿ 'ನಿಜವಾದ ಆನಂದ'ವೆಂದರೇನೆಂಬುದು ಪುಸ್ತಕಸ್ನೇಹದಿಂದ ತಿಳಿದು ಬರುತ್ತದೆ.**

ಇದು ಒಳ್ಳೆಯ ಪದ್ಧತಿಯಲ್ಲ. ನಮ್ಮನ್ನು ನಾವು ಬೈದುಕೊಂಡಂತೆಲ್ಲ, ಹೀನಾಯ ಮಾಡಿಕೊಂಡಂತೆಲ್ಲ ನಮ್ಮ ಆತ್ಮವಿಶ್ವಾಸ ಕುಗ್ಗಿ ಬಿಡುತ್ತದೆ. ಇಂತಹ ಹೀನಾಯದಿಂದಾಗಿ ಸುಪ್ತಸ್ಥಿತಿಯಲ್ಲಿರುವ ನಮ್ಮ ಮಿದುಳು ನಿಷ್ಕ್ರಿಯಗೊಳ್ಳುವ ಸಂಭವವುಂಟು.

ಇಲ್ಲಿ ನಾವು ನೆನಪಿಟ್ಟುಕೊಳ್ಳಬೇಕಾದುದೇನೆಂದರೆ, ನಾವು ಭಾವಿಸುವ ರೀತಿ ಬೇರೆಯವರು ನಮ್ಮ ಬಗ್ಗೆಯೇ ಸದಾ ಆಲೋಚನೆ ಮಾಡುತ್ತಿರುವುದಿಲ್ಲ. ಅವರಿಗೆ ಇತರ ಕೆಲಸಗಳು ಸಾಕಷ್ಟಿರುತ್ತವೆ.

ತಪ್ಪು ಮಾಡದಿರುವವರೆನ್ನುವವರು ಯಾರೂ ಇರುವುದಿಲ್ಲ. ಅಜ್ಞಾನದಿಂದಲೋ ಗೊಂದಲದಿಂದಲೋ ತಪ್ಪು ಮಾಡಿದವರನ್ನು ಕಂಡು ಒಬ್ಬಿಬ್ಬರು ನಗಬಹುದು. ಅಣಕಿಸಬಹುದು. ಅಂತಹವರನ್ನು ಲೆಕ್ಕಿಸಬೇಕಾದ ಅಗತ್ಯವಿಲ್ಲ. ನಮ್ಮ ತಪ್ಪು ಸರಿಪಡಿಸಿಕೊಂಡರಾಯ್ತು. ಅಂತಹವರ ಬಾಯಿ ತಾನಾಗಿಯೇ ಮುಚ್ಚಿ ಹೋಗುತ್ತದೆ. ಅದು ಬಿಟ್ಟು, ಏಕೆ ನಕ್ಕಿರೆಂದು ವಾದಕ್ಕಿಳಿದರೆ, ಅಂತಹವರು ಮತ್ತಷ್ಟು ಕೆಣಕುತ್ತಾರೆ, ಕಾಡಿಸುತ್ತಾರೆ.

ಬಹಳಷ್ಟು ಜನ ತಮಗೆ ಯಾವುದಾದರೂ ವಿಷಯ ಗೊತ್ತಿರದಿದ್ದರೆ, ಅದನ್ನು ಒಪ್ಪಿಕೊಳ್ಳಲು ತಯಾರಿರುವುದಿಲ್ಲ. ಪೊಳ್ಳು ಪ್ರತಿಷ್ಠೆ ಅವರನ್ನು ಕಾಡುತ್ತಿರುತ್ತದೆ. ಕೇಳಿ ತಿಳಿದುಕೊಳ್ಳಲೂ ದಾಕ್ಷಿಣ್ಯ, ಸಂಕೋಚ. ಇತರರನ್ನು ಪ್ರಭಾವಗೊಳಿಸಲು ಡಾಂಭಿಕತನವನ್ನು ಆಶ್ರಯಿಸುತ್ತಾರೆ.

## ಸಂಕೋಚವನ್ನು ಮೆಟ್ಟಿ ನಿಲ್ಲುವುದು

ಸಂಕೋಚ ಸ್ವಭಾವದ ವ್ಯಕ್ತಿಗಳು ತಮ್ಮನ್ನು ತಾವು ಎಲ್ಲರಲ್ಲಿ ಕೇಂದ್ರಬಿಂದುವಾಗಿ ಚಿತ್ರಿಸಿಕೊಳ್ಳುತ್ತಾರೆ. ತಾವು ಮಾಡುವ ಪ್ರತಿಯೊಂದು ಕೆಲಸವನ್ನು ತಮ್ಮ ಸುತ್ತಲಿನ ವ್ಯಕ್ತಿಗಳು ಪೂರ್ತಿಯಾಗಿ ಗಮನಿಸುತ್ತಿರುತ್ತಾರೆಂದೂ, ಪ್ರತಿಯೊಂದರಲ್ಲಿ ತಪ್ಪು

ಹುಡುಕಿ ಹೀಯಾಳಿಸುತ್ತಾರೆಂಬುದು ಅವರ ತಪ್ಪು ಗ್ರಹಿಕೆಯಾಗಿರುತ್ತದೆ.

ಈ ಸ್ವಭಾವವನ್ನು ಮೆಟ್ಟಿ ನಿಲ್ಲಬೇಕೆಂದರೆ ನಾಲ್ಕಾರು ಜನರೊಂದಿಗೆ ಬೆರೆಯುವ ಗುಣವನ್ನು ಬೆಳೆಸಿಕೊಳ್ಳಬೇಕು. ಮೇಲೆಯೇ ಹೇಳಿರುವಂತೆ ಜನರಿಗೆ ನಮ್ಮನ್ನು ಗಮನಿಸುವುದೊಂದೇ ಕೆಲಸವಾಗಿರುವುದಿಲ್ಲ. ನಾವು ಕೇಂದ್ರಬಿಂದುವೆಂಬುದಾಗಿ ಕಲ್ಪಿಸಿಕೊಳ್ಳದೆ ಇತರರನ್ನು ಕೇಂದ್ರ ಬಿಂದುವಾಗಿ ವ್ಯವಹರಿಸಲು ಬಿಡಬೇಕು. ಇತರರ ಮಾತುಗಳನ್ನು ಶ್ರದ್ಧೆಯಿಂದ ಕೇಳುವುದನ್ನು ರೂಢಿ ಮಾಡಿಕೊಳ್ಳಬೇಕು. ಇತರರ ಬಗ್ಗೆ ನಾವು ಶ್ರದ್ಧೆ, ಕಾಳಜಿ ವಹಿಸಿದರೆ ಅವರೂ ನಮ್ಮ ಬಗ್ಗೆ ಶ್ರದ್ಧೆ ತೋರಿಸುತ್ತಾರೆ. ಈ ರೀತಿ ಮಾಡುವುದರಿಂದ ಪರಸ್ಪರರಲ್ಲಿ ಸ್ನೇಹ ಪರತೆ ಬೆಳೆಯುತ್ತದೆ.

## ಟೀಕೆ–ಟೀಕಿಸುವವರು

ನಾವೆಲ್ಲರೂ ಒಂದಲ್ಲ ಒಂದು ಸಂದರ್ಭದಲ್ಲಿ ಟೀಕೆಗೊಳಗಾಗಿರುತ್ತೇವೆ. ಆ ಘಟನೆಯಿಂದ ಮಾನಸಿಕ ಕ್ಷೋಭೆಯನ್ನೂ ಅನುಭವಿಸಿರುತ್ತೇವೆ. ಇದು ಸರ್ವೇಸಾಮಾನ್ಯ ಅನುಭವ. ಜನರನ್ನು ಟೀಕಿಸುವವನ ಬಾಯಿಗೆ ಲಂಗು ಲಗಾಮಿರುವುದಿಲ್ಲ. ತನ್ನ ಟೀಕೆಯಿಂದ ಇತರರ ಮನಸ್ಸಿಗೆ ನೋವಾಗಬಹುದೆಂಬ ವಿಚಾರವೂ ಅವನಲ್ಲಿರುವುದಿಲ್ಲ. ಈ ಟೀಕೆಗಳಲ್ಲಿ ಕೆಲವು ಮೃದುವಾದವುಗಳಾಗಿದ್ದರೆ, ಇನ್ನು ಕೆಲವು ತೀರಾ ಕಟುವಾದವುಗಳಾಗಿರುತ್ತವೆ.

ಕೆಲವರಿಗಂತೂ ಸದಾ ಬೇರೆಯವರನ್ನು ಟೀಕಿಸುವುದೇ ಒಂದು ಕೆಲಸವಾಗಿಬಿಟ್ಟಿರುತ್ತದೆ. ಇದೊಂದು ಬಗೆಯ ಮಾನಸಿಕರೋಗ. ಆತ್ಮನ್ಯೂನತೆಯ ಭಾವನೆ ಇಂತಹವರಲ್ಲಿ ಮನೆ ಮಾಡಿಕೊಂಡಿರುತ್ತದೆ. ಇವರು ಎಂತಹ ಕಟುವಾದ ವಿಮರ್ಶೆಯನ್ನಾದರೂ ಮಾಡಬಲ್ಲರು. ಇಂತಹವರು ಯಾರನ್ನಾದರೂ ವ್ಯಂಗ್ಯವಾಗಿ ವಿಮರ್ಶಿಸಿದಾಗ, ಸುತ್ತಮುತ್ತಲಿರುವವರು ನಕ್ಕರಂತೂ ಕೇಳಲೇಬೇಡಿ. ಅಗ್ನಿಗೆ ಆಜ್ಯ ನೀಡಿದಂತಾಗುತ್ತದೆ. ಟೀಕಿಸಲು ಮತ್ತಷ್ಟು ಪ್ರೋತ್ಸಾಹ ಒದಗಿಸುತ್ತದೆ. ಒಂದು ವಿಷಯ ನೆನಪಿರಲಿ, ತನ್ನಲ್ಲಿರುವ ಆತ್ಮನ್ಯೂನತೆಯ ಭಾವನೆಯನ್ನು ಮುಚ್ಚಿಕೊಳ್ಳಲೆಂದೇ ಆತ ಟೀಕಿಸುವುದರ ಮೊರೆ ಹೊಕ್ಕಿರುತ್ತಾನೆ. ಈ ರೀತಿ ಬೇರೆಯವರನ್ನು ಟೀಕಿಸುವುದರಿಂದ ತಮ್ಮ ಲೋಪ–ದೋಷಗಳು ಮುಚ್ಚಿ ಹೋಗುತ್ತವೆಂಬುದು ಅವರ ಗ್ರಹಿಕೆಯಾಗಿರುತ್ತದೆ. ಇಂತಹವರಲ್ಲದೆ ಸುತ್ತಲಿರುವವರ ನಡುವೆ ಕೇಂದ್ರಬಿಂದುವಾಗಿ ಕಂಗೊಳಿಸಬೇಕೆಂದುಕೊಳ್ಳುವ ಸ್ವಾರ್ಥಿಗಳೂ ಅನಗತ್ಯವಾಗಿ ಟೀಕೆ ಮಾಡುತ್ತಾರೆ.

ಮೇಲಿನಂತಹವರಲ್ಲದೆ, ಕೇವಲ ಮೋಜಿಗೆ ಟೀಕಿಸುವವರೂ ಕೆಲವರಿರುತ್ತಾರೆ. ಇತರರಿಗೆ ಹಾನಿಯುಂಟುಮಾಡಬೇಕೆಂಬುದು ಇವರ ಉದ್ದೇಶವಾಗಿರುವುದಿಲ್ಲ. ಇಂತಹವರನ್ನು ಲೆಕ್ಕಿಸಬೇಕಾದ ಅಗತ್ಯವಿಲ್ಲ.

ನಮ್ಮನ್ನು ಟೀಕಿಸುವವರು ಯಾವುದೇ ಉದ್ದೇಶದಿಂದ ಟೀಕೆ ಮಾಡಿರಲಿ ನಾವು ಸಮಯಪ್ರಜ್ಞೆ, ಔಚಿತ್ಯ ಜ್ಞಾನದಿಂದ ಆ ಟೀಕೆಯನ್ನು ಸುನಾಯಾಸವಾಗಿ ಎದುರಿಸಬಹುದು.

ಯಾರಾದರೂ ನಮ್ಮನ್ನು ಟೀಕಿಸಿದರೆಂದಿಟ್ಟುಕೊಳ್ಳಿ. ಆ ಟೀಕೆಯಲ್ಲಿ ಸತ್ಯಾಂಶವಿದ್ದರೆ ತಕ್ಷಣವೇ ಒಪ್ಪಿಬಿಡುವುದು ಒಳ್ಳೆಯದು. ನಂತರ ನಮ್ಮನ್ನು ನಾವು ತಿದ್ದಿ ಸರಿಪಡಿಸಿಕೊಳ್ಳಬಹುದು. ಹಾಗಲ್ಲದೆ ಕೇವಲ ನಮ್ಮನ್ನು ಹೀಯಾಳಿಸುವ ಉದ್ದೇಶದಿಂದ ಮಾಡಿದ ಟೀಕೆಯನ್ನು ಖಂಡಿಸಬೇಕಾದ ಅಗತ್ಯವಿಲ್ಲ. ಖಂಡಿಸಿದಂತೆಲ್ಲ ನಮ್ಮನ್ನು ಟೀಕಿಸುವವರು ಮತ್ತಷ್ಟು ತೀಕ್ಷ್ಣವಾಗಿ ಟೀಕಿಸತೊಡಗುತ್ತಾರೆ. ನಾವು ಅಂತಹ ವಿಮರ್ಶೆಯನ್ನು ಕಿವಿಗೇ ಹಾಕಿಕೊಳ್ಳದಂತಿದ್ದು, ಉದಾಸೀನ ತೋರಿಸಿದರೆ ಟೀಕಿಸುವವರ ಬತ್ತಳಿಕೆ ಬರಿದಾಗಿ ಬಾಯಿ ಮುಚ್ಚಿಹೋಗುತ್ತದೆ.

## ತಂದೆ–ತಾಯಿಗಳು ಅವಮಾನಿಸಿದಾಗ

ಒಂದಲ್ಲ ಒಂದು ಸಂದರ್ಭದಲ್ಲಿ ತಂದೆ–ತಾಯಿಯಾದವರು ಮಕ್ಕಳನ್ನು ಬೈದಿರುತ್ತಾರೆ. ಅವಮಾನಿಸಿರುತ್ತಾರೆ. ಚೆನ್ನಾಗಿ ಓದುತ್ತಿಲ್ಲವೆಂದೋ, ಬೇರೆ ಮಕ್ಕಳೊಂದಿಗೆ ಹೋಲಿಸುತ್ತಲೋ ಬೈದಿರುತ್ತಾರೆ. ತಮ್ಮ ಬೈಗುಳದಿಂದಾಗಿ ಮಕ್ಕಳ ಮನಸ್ಸಿನ ಮೇಲೆ ಯಾವ ರೀತಿಯ ಪರಿಣಾಮವಾಗಬಹುದೆಂಬುದು ಅವರ ಕಲ್ಪನೆಯಲ್ಲಿರುವುದಿಲ್ಲ.

ಮನಃಶಾಸ್ತ್ರಜ್ಞರು ನಡೆಸಿದ ಒಂದು ಸರ್ವೇಕ್ಷಣೆಯ ಪ್ರಕಾರ, ಬಾಲ್ಯದಲ್ಲಿ ತಂದೆ–ತಾಯಿಗಳಿಂದ ಕಿರುಕುಳ, ಬೈಗುಳಕ್ಕೊಳಗಾದವರೇ ತಮ್ಮ ಮಕ್ಕಳನ್ನು ಬೈಯುವುದು, ದಂಡಿಸುವುದು ಮಾಡುತ್ತಾರೆಂಬುದು ವ್ಯಕ್ತವಾಗಿದೆ. ಮಕ್ಕಳನ್ನು ಪದೇ ಪದೇ ಬೈಯುವುದು ಅಷ್ಟು ಒಳ್ಳೆಯದಲ್ಲ. 'ತಲೆಮಾರಿನ ಅಂತರ'ದಿಂದಾಗಿ ಪಾಲಕರು–ಮಕ್ಕಳಲ್ಲಿ ಕೆಲವೊಂದು

ಅಭಿಪ್ರಾಯಭೇದಗಳು ಉಂಟಾಗಬಹುದು. ತಂದೆ-ತಾಯಂದಿರು, ಮಕ್ಕಳು ಮುಕ್ತ ಮನಸ್ಸಿನಿಂದ ಚರ್ಚೆಮಾಡಿ ಈ ಅಂತರವನ್ನು ತುಂಬಿಕೊಂಡರೆ ಸಮಸ್ಯೆ ಹಗುರವಾಗುತ್ತದೆ.

## ಅಪಜಯವನ್ನು ಎದುರಿಸುವುದು

ಸೋಲು ಅನುಭವಿಸುವುದೆಂದರೆ ಯಾರಿಗೂ ಇಷ್ಟವಾಗುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿ ತನ್ನ ಜೀವನ ಕಾಲದಲ್ಲಿ ಹಲವಾರು ಸೋಲು, ಅಪಜಯವನ್ನು ಕಾಣುತ್ತಿರುತ್ತಾನೆ. ಒಮ್ಮೆ ಸೋತ ಕೂಡಲೇ ಕುಗ್ಗಬೇಕಾದುದಿಲ್ಲ. 'ಸೋಲೇ ಗೆಲುವಿಗೆ ಮೆಟ್ಟಲು' ಎಂದು ಹಿರಿಯರು ಹೇಳಿದ್ದಾರಲ್ಲವೆ!

ಅಪಜಯದಲ್ಲಿ ಮೂರು ವಿಧಗಳು:

೧) ನಾವು ಕಷ್ಟಪಟ್ಟಿರುವುದಿಲ್ಲ- ಆ ವಿಷಯ ನಮಗೆ ಗೊತ್ತಿರುತ್ತದೆ.

೨) ನಾವು ಕಷ್ಟಪಟ್ಟಿರುತ್ತೇವೆ- ಆದರೂ ಸೋಲು ಅನುಭವಿಸಿರುತ್ತೇವೆ.

೩) ನಾವು ಅಪಜಯ ಹೊಂದಿರುವುದಿಲ್ಲ. ಆದರೆ ಎಲ್ಲರೂ ಅದನ್ನು ನಮ್ಮ ಸೋಲು ಎಂದುಕೊಳ್ಳುತ್ತಿರುತ್ತಾರೆ. ಆ ಭಾವನೆ ನಮ್ಮನ್ನು ಕಾಡುತ್ತಿರುತ್ತದೆ.

ಮೊದಲನೆ ವಿಧದ ಸೋಲಿನ ವಿಷಯ- ಇಂತಹ ಸೋಲಿನಿಂದ ನಾವು ಕೊರಗಬೇಕಾದ ಅಗತ್ಯವಿಲ್ಲ. ನಾವು ಕಿಂಚಿತ್ತೂ ಕಷ್ಟಪಡದೆ ಕೈ ಹಾಕಿದ ಕೆಲಸ ಯಶಸ್ವಿಯಾಗಬೇಕೆಂದು ನಿರೀಕ್ಷಿಸಿದ್ದರೆ- ತಪ್ಪು ನಮ್ಮದೇ. ಅಂತಹ ಕೆಲಸ ವಿಫಲಗೊಂಡರೆ ಕೊರಗುವ ನೈತಿಕ ಹಕ್ಕೂ ನಮಗಿರುವುದಿಲ್ಲ. ಆದ್ದರಿಂದ ಈ ರೀತಿಯ ಸೋಲನ್ನು ಸೋಲೆಂದು ಭಾವಿಸುವಂತಿಲ್ಲ. ನಮ್ಮ ತಪ್ಪು ಅರಿತುಕೊಂಡು, ಆ ತಪ್ಪನ್ನು ತಿದ್ದಿಕೊಂಡು ಮುಂದೆ ಸಾಗುವುದು ಉತ್ತಮ.

**"ನನ್ನ ಜೀವನದಲ್ಲಿ ಪ್ರತಿಯೊಂದು ಅನುಭವವೂ ಮಹತ್ತರ ಅನುಭೂತಿಯೆ. ಪ್ರತಿಯೊಂದು ಸೋಲೂ ನನ್ನ ವಿಜಯದ ಮೆಟ್ಟಿಲೆ. ನಿದ್ದೆಗೇಡು ರಾತ್ರಿಗಳೆಲ್ಲವೂ ಒಂದು ಯಶಸ್ವಿ ಯೋಜನೆಗೋಸ್ಕರ ಯೋಚಿಸಲು ದೊರೆತ ಅವಕಾಶ..."**

## ಕಷ್ಟಪಟ್ಟರೂ ಅಪಜಯ ಉಂಟಾದರೆ

ಕಷ್ಟಪಟ್ಟರೆ ಯಶಸ್ಸು ಖಂಡಿತವೆಂದು ಯಾರು ತಾನೆ ಹೇಳಬಲ್ಲರು? ನಾವು ಈ ಭೂಮಿಯ ಮೇಲೆ ಜನಿಸಿದಾಗ 'ನೀನು ಕಷ್ಟಪಟ್ಟರೆ ಖಂಡಿತವಾಗಿ ಯಶಸ್ಸು ಸಾಧಿಸುತ್ತೀಯೆ' ಎನ್ನುವ ಗ್ಯಾರಂಟಿ ಕಾರ್ಡನ್ನೇನೂ ಕತ್ತಿಗೆ ನೇತುಹಾಕಿಕೊಂಡು ಬಂದಿಲ್ಲವಲ್ಲ!

ಸೋಲಿನ ಬಗ್ಗೆ ತಲೆ ಕೆಡಿಸಿಕೊಳ್ಳದೆ ಯಶಸ್ಸಿಗೋಸ್ಕರ ಶ್ರಮಪಡುತ್ತ ಸಾಗಿದರೆ ಅದು ನಮಗೆ ವಶವಾಗುವುದರಲ್ಲಿ ಸಂದೇಹವಿಲ್ಲ. ಉದಾಹರಣೆಗೆ ರಾಣಾಪ್ರತಾಪ್, ಥಾಮಸ್ ಆಲ್ವಾ ಎಡಿಸನ್- ಇವರು ತಮ್ಮ ಕೆಲಸಗಳಲ್ಲಿ ಹಲವಾರು ಸಲ ವಿಫಲಗೊಂಡರೂ ಎದೆಗೆಡದೆ, ತಮ್ಮ ಪ್ರಯತ್ನವನ್ನು ಮುಂದುವರಿಸಿ ಯಶಸ್ಸನ್ನು ಸಾಧಿಸಿದರು.

ಈ ಜಗತ್ತಿನಲ್ಲಿ ಅಭಿವೃದ್ಧಿ ಸಾಧಿಸಬೇಕೆಂದರೆ ಕೇವಲ ಬುದ್ಧಿವಂತಿಕೆಯಷ್ಟೇ ಇದ್ದರೆ ಸಾಲದು. ಅದರ ಜೊತೆಗೆ ಶ್ರಮವಹಿಸುವವರೇ ಜೀವನದಲ್ಲಿ ಏನನ್ನಾದರೂ ಸಾಧಿಸಬಲ್ಲವರಾಗಿರುತ್ತಾರೆ.

ಕೊನೆಯದಾಗಿ, ನಾವು ಯಶಸ್ಸು ಸಾಧಿಸಿರುತ್ತೇವೆ. ಆದರೆ ಲೋಕದ ದೃಷ್ಟಿಯಲ್ಲಿ ಅದು ಯಶಸ್ಸು ಎನಿಸಿಕೊಳ್ಳುವುದಿಲ್ಲ. ಉದಾಹರಣೆಗೆ ಒಬ್ಬ ಓದಿನಲ್ಲಿ ಅಷ್ಟು ಬುದ್ಧಿವಂತನಿರುವದಿಲ್ಲವೆಂದುಕೊಳ್ಳೋಣ, ಆದರೆ ಚಿತ್ರಕಲೆಯಲ್ಲಿ ಅವನಿಗೆ ಒಳ್ಳೆಯ ಪರಿಣಿತಿ ಇರುತ್ತದೆ. ಅಂತಹವನು ಡಿಗ್ರಿ ಪರೀಕ್ಷೆಯಲ್ಲಿ ಫೇಲಾದ ಮಾತ್ರಕ್ಕೆ ಜೀವನದಲ್ಲಿ ವಿಫಲಗೊಂಡನೆಂದು ಕೊಳ್ಳುವುದು ಸಮಂಜಸವಲ್ಲ. ತನಗೆ ಪರಿಣಿತಿ ಇರುವ ಚಿತ್ರ ಕಲೆಯಲ್ಲೇ ಮತ್ತಷ್ಟು ಕೃಷಿ ಮಾಡಿ ಅದ್ಭುತವನ್ನು ಸಾಧಿಸಬಹುದು. ಇಂಜಿನಿಯರ್ ಕಲೆಕ್ಟರ್‌ಗಳಿಗಿಂತಲೂ ಹೆಚ್ಚು ಸಂಪಾದಿಸುವ ಕಲಾವಿದರನೇಕರು ನಮ್ಮ ನಡುವೆ ಇರುವುದನ್ನು ಕಾಣಬಹುದಾಗಿದೆ.

## ಈರ್ಷ್ಯೆ

ಇತರರ ಅಭಿವೃದ್ಧಿ, ಯಶಸ್ಸನ್ನು ಕಂಡಾಗ ನಮ್ಮಲ್ಲಿ ಬಹುಪಾಲು ಜನರ ಮನಸ್ಸಿನಲ್ಲಿ ಅದೊಂದು ರೀತಿಯ ಕಸಿವಿಸಿ, ತಳಮಳ, ರೊಚ್ಚಿನ ಭಾವನೆ ಹುಟ್ಟಿಕೊಳ್ಳುತ್ತದೆ. ಈ ಭಾವನೆಯ ಹೆಸರು 'ಈರ್ಷ್ಯೆ.'

ನಾವು ಸಾಧಿಸಲಾಗದುದನ್ನು ಇತರರು ಸಾಧಿಸಿದರೆ ಈರ್ಷ್ಯೆ ಹುಟ್ಟಿಕೊಳ್ಳುತ್ತದೆ. (ಇದಕ್ಕೆ ಅಪವಾದವಿಲ್ಲವೆಂದಲ್ಲ.) ಈ ಈರ್ಷ್ಯಾಭಾವನೆಯಿಂದಾಗಿ ಏನನ್ನೂ ಸಾಧಿಸಲಾಗುವುದಿಲ್ಲ. ಇದಕ್ಕೋಸ್ಕರ ವೆಚ್ಚಮಾಡುವ ಸಮಯ, ಶಕ್ತಿಯನ್ನು 'ವಾಸ್ತವ ಪ್ರಜ್ಞೆ'ಯನ್ನು ಅಭಿವೃದ್ಧಿಪಡಿಸಿಕೊಳ್ಳಲು ವಿನಿಯೋಗಿಸಿದರೆ ಉನ್ನತಿಯನ್ನು ಸಾಧಿಸಬಹುದು.

## ಕಡ್ಡಿಯನ್ನು ಗುಡ್ಡ ಮಾಡುವ ಪ್ರವೃತ್ತಿ

ಕೆಲವರಿರುತ್ತಾರೆ. ಅವರನ್ನು ಬೇರೆಯವರು ಸ್ವಲ್ಪವೇ ಟೀಕಿಸಿದರೂ, ಬೈದರೂ ಸಹಿಸಲಾರರು. ತಾವು ಕೈ ಹಾಕಿದ ಕೆಲಸ ವಿಫಲಗೊಂಡರೆ, ತಲೆ ಮೇಲೆ ಕೈ ಹೊತ್ತು ಕುಳಿತುಕೊಳ್ಳುತ್ತಾರೆ. ಇನ್ನೊಬ್ಬರು ತಮಗೇನಾನರೂ ಅಂದರೆಂದರೆ, 'ಅಯ್ಯೋ, ನನಗೆ ಹೀಗಂದರಲ್ಲ...' ಎಂದು ಕೊರಗುತ್ತಾರೆ.

ಇಂತಹ ಪ್ರವೃತ್ತಿ ತುಂಬಾ ಹಾನಿಕಾರಕ. ಯಾರೋ ಒಬ್ಬಿಬ್ಬರು ಬೈದ ಮಾತ್ರಕ್ಕೆ ಜೀವನ ವ್ಯರ್ಥವಾಗಿಬಿಡುತ್ತದೆಯೆ? ಇಲ್ಲವಲ್ಲ. ಕಡ್ಡಿಯಷ್ಟಿರುವುದನ್ನು ನಾವೇ ಕೈಯಾರೆ ಗುಡ್ಡದಷ್ಟು ಮಾಡಿಕೊಂಡು ತೊಳಲಾಡುತ್ತೇವೆ. ಎಷ್ಟುಬೇಗ ಇಂತಹ ಮಾನಸಿಕ ಪ್ರವೃತ್ತಿ ನಮ್ಮಿಂದ ದೂರಾಗುತ್ತದೋ ಅಷ್ಟು ಒಳ್ಳೆಯದು. ಜೀವನದಲ್ಲಿ ಎದುರಾಗುವ ನಿಂದೆ, ಟೀಕೆ, ಬೈಗುಳಗಳನ್ನು ಹಗುರವಾಗಿ ತೆಗೆದುಕೊಳ್ಳುವುದನ್ನು ರೂಢಿ ಮಾಡಿಕೊಳ್ಳಬೇಕು.

## ದ್ವೇಷ

ದ್ವೇಷವೆನ್ನುವ ಭಾವನೆ ನಮ್ಮೆಲ್ಲರ ಮನಸ್ಸಿನಲ್ಲಿ ಎಂದಾದರೊಮ್ಮೆ ಯಾರಾದರೊಬ್ಬರ ಮೇಲೆ ಹುಟ್ಟಿಯೇ ಇರುತ್ತದೆ. ನಮಗೆ ಯಾರ ಮೇಲಾದರೂ ದ್ವೇಷ ಉಂಟಾದಾಗ ಅಂತಹವರನ್ನು ಶಾರೀರಿಕವಾಗಿಯಾಗಲಿ, ಮಾನಸಿಕವಾಗಿಯಾಗಲಿ ಹಿಂಸಿಸಬೇಕೆನಿಸುತ್ತದೆ. ಈ ದ್ವೇಷದ ಭಾವನೆಯನ್ನು ಸರಿಯಾಗಿ ನಿಯಂತ್ರಿಸಿಕೊಳ್ಳಲಾಗದಿದ್ದರೆ, ನಷ್ಟ ನಮಗೇ ಎನ್ನುವುದು ನೆನಪಿರಲಿ.

ನಾವು ದ್ವೇಷಿಸುವ ವ್ಯಕ್ತಿ ನಮಗೆ ಹಾನಿಯುಂಟು ಮಾಡಿರಬಹುದು. ಆದರೆ ಅಂತಹ ವ್ಯಕ್ತಿಯನ್ನು ದ್ವೇಷಿಸುವುದರ ಹೊರತು ಇನ್ನೇನೂ ಮಾಡಲೂ ನಮ್ಮಿಂದಾಗದು. ಇದರಿಂದಾಗಿ ನಾವು ದ್ವೇಷಿಸುವ ವ್ಯಕ್ತಿಗಿಂತಲೂ ನಮಗೇ ಹೆಚ್ಚಿನ ಹಾನಿಯುಂಟಾಗುತ್ತದೆ. ಏಕೆಂದರೆ– ಅದು ನಮ್ಮ ಸಮಯವನ್ನು ತಿಂದುಬಿಡುತ್ತದೆ. ಅದರಿಂದ ನಿಮ್ಮ ಎದುರಾಳಿಗೆ ಯಾವ ರೀತಿಯ ನಷ್ಟವೂ ಇರುವುದಿಲ್ಲ.

ನಾವು ದ್ವೇಷಿಸುವ ವ್ಯಕ್ತಿಗಳನ್ನು ಮೂರು ವಿಭಾಗಗಳಲ್ಲಿ ವಿಂಗಡಿಸಬಹುದು:

೧) ಬಂಧುಗಳು, ೨) ಮಿತ್ರರು, ೩) ಅಪರಿಚಿತರು.

## ತಂದೆ ತಾಯಿಗಳ ಬಗ್ಗೆ ದ್ವೇಷ

ಬಂಧುಗಳಲ್ಲಿ ಮುಖ್ಯವಾಗಿ ಸೇರಿಸಬೇಕಾದವರೆಂದರೆ ತಂದೆ ತಾಯಿಗಳು. ತಂದೆ–ತಾಯಿಗಳಿಂದ ಬೈಸಿಕೊಳ್ಳದ ಮಕ್ಕಳಿರಲಿಕ್ಕಿಲ್ಲ. ಸಾಮಾನ್ಯವಾಗಿ ಮಕ್ಕಳ ದೂರುಗಳೇನೆಂದರೆ, ತಮ್ಮ ತಂದೆ ತಾಯಿಗಳು ತೀರಾ ಸ್ಟ್ರಿಕ್ಟ್, ಸ್ವಲ್ಪವೂ ಮೋಜು ಮಾಡಲು ಬಿಡುವುದಿಲ್ಲ ಎಂಬುದು. ತಂದೆ–ತಾಯಿಗಳಾದವರಿಗೆ ತಮ್ಮ ಮಕ್ಕಳು ಚೆನ್ನಾಗಿ ಓದಬೇಕು, ಬುದ್ಧಿವಂತರೆನಿಸಿಕೊಳ್ಳಬೇಕು ಎನ್ನುವ ಇಚ್ಛೆ ಇರುತ್ತದೆ. ತಮ್ಮ ಮಕ್ಕಳ ಶ್ರೇಯಸ್ಸನ್ನು ಬಯಸಿಯೇ ಅವರು ಮಕ್ಕಳ ಮೇಲೆ ಕಟ್ಟಳೆ ವಿಧಿಸುತ್ತಿರುತ್ತಾರೆ. ಈ ಕಟ್ಟಳೆಗಳು ಮಕ್ಕಳಾದವರ ಮನಸ್ಸಿಗೆ ಕಿರಿಕಿರಿ ಉಂಟು ಮಾಡುತ್ತವೆ. ಈ ಕಟ್ಟಳೆಗಳು ಮಿತಿಮೀರಿದವೆನಿಸಿದಾಗ ತಂದೆ ತಾಯಿಗಳ ಮೇಲೆ ಸಿಟ್ಟು, ದ್ವೇಷದ ಭಾವನೆ ಮೂಡುತ್ತದೆ. ವಾಸ್ತವಕ್ಕೆ ಮಕ್ಕಳು ತಮ್ಮ ತಂದೆ ತಾಯಿಯರನ್ನು ದ್ವೇಷಿಸುತ್ತಿರುತ್ತಿರುವುದಿಲ್ಲ– ಅವರು ತಮ್ಮೊಂದಿಗೆ ವ್ಯವಹರಿಸುವ ರೀತಿಯನ್ನು ಮಾತ್ರ ದ್ವೇಷಿಸುತ್ತಿರುತ್ತಾರೆ. ಅದಕ್ಕಾಗಿಯೇ ಮಕ್ಕಳು ಮಾನಸಿಕವಾಗಿ ತಂದೆ–ತಾಯಂದಿರ ವಿರುದ್ಧ ದಂಗೆ ಏಳುವುದುಂಟು. ಒಂದು ವಿಷಯ ಕಟ್ಟಳೆಯ ನೆಪದಲ್ಲಿ ತಂದೆ–ತಾಯಂದಿರು ಮಕ್ಕಳ ಪಾಲಿಗೆ ಜೈಲರ್‌ಗಳಂತಾಗಬಾರದು. ಅದೇ ರೀತಿ

ಮಕ್ಕಳಾದವರಿಗೂ ಉಚ್ಛ್ರಂಖಲ ನಡತೆಯೂ ಒಳ್ಳೆಯದಲ್ಲ, ಇದರಿಂದಾಗಿ .ತಂದೆ–ತಾಯಂದಿರ, ಮಕ್ಕಳ ನಡುವೆ ಮಾನಸಿಕವಾಗಿ ಕಂದಕ ಏರ್ಪಡಬಹುದು. ಇದನ್ನು ನಿವಾರಿಸಿಕೊಳ್ಳಬೇಕೆಂದರೆ ಪರಸ್ಪರರ ನಡುವೆ ಬಿಚ್ಚು ಮನಸ್ಸಿನ ವ್ಯವಹಾರವಿರುವುದು ಅಗತ್ಯ.

## ಮಿತ್ರರ ಬಗ್ಗೆ ದ್ವೇಷದ ಭಾವನೆ

ನಾವು ಯಾರಾದರೊಬ್ಬ ವ್ಯಕ್ತಿಯನ್ನು ದ್ವೇಷಿಸುವ ಸಂದರ್ಭ ಏಕೆ ಬರುತ್ತದೆ? ಬಹುಶಃ ಅವನು ನಮ್ಮ ಬಗ್ಗೆ ಕೆಟ್ಟದಾಗಿ ಎಲ್ಲರಿಗೂ ಹೇಳಿರುತ್ತಾನೆ. ಇಲ್ಲವೆಂದರೆ ಅವನು ನಮ್ಮೊಂದಿಗೆ ವ್ಯವಹರಿಸುವ ರೀತಿ ನಮಗೆ ಹಿಡಿಸಿರುವುದಿಲ್ಲ. ಅಥವಾ ನಾವು ಮತ್ತು ಆತ ಯಾವುದಾದರೊಂದು ವಿಷಯದ ಬಗ್ಗೆ ಜಗಳವಾಡಿರಬಹುದು. ಇಲ್ಲವೆಂದರೆ ಅವನು ನಮ್ಮದೇ ಕಾರ್ಯಕ್ಷೇತ್ರದಲ್ಲಿ ನಮಗಿಂತಲೂ ಮೇಲ್ಮಟ್ಟದಲ್ಲಿರಬಹುದು. ಎಲ್ಲಕ್ಕಿಂತಲೂ ಮುಂಚೆ ನಮ್ಮ ದ್ವೇಷಕ್ಕೆ ಕಾರಣವೇನೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು.

ತಪ್ಪು ನಮ್ಮದಾಗಿರಬಹುದು. ತಪ್ಪು ಅವನದೇ ಆಗಿರಬಹುದು. ತಪ್ಪು ನಮ್ಮಿಬ್ಬರದೂ ಆಗಿರಬಹುದು. ಇಲ್ಲವೆಂದರೆ ಯಾರದೂ ಆಗಿಲ್ಲದಿರಬಹುದು. ಯಾವುದು ಏನೇ ಆಗಿರಲಿ, ಈ ತಪ್ಪು ಕಲ್ಪನೆಯನ್ನು ದೂರ ಮಾಡುವತ್ತ ಮೊದಲನೆ ಹೆಜ್ಜೆ ನಾವು ಹಾಕಬೇಕು. ಇಬ್ಬರಲ್ಲಿ ತಪ್ಪು ಯಾರದೆಂಬುದನ್ನು ನಿರ್ಧರಿಸಿಕೊಳ್ಳಬೇಕು. ತಪ್ಪು ನಮ್ಮದಾಗಿದ್ದರೆ, ಒಪ್ಪಿಕೊಳ್ಳುವಲ್ಲಿ ಸಂಕೋಚಬೇಡ. ಬಿಚ್ಚು ಮನಸ್ಸಿನ ವರ್ತನೆ ತಪ್ಪು ಕಲ್ಪನೆಯನ್ನು ದೂರ ಮಾಡಬಲ್ಲದು.

ನಾವು ನಮ್ಮ ಮಿತ್ರನಾದವನನ್ನು ಅವನ ಗುಣ–ದೋಷಗಳೊಂದಿಗೆ ಸ್ವೀಕರಿಸಬೇಕು. ಅದೇ ನಿಜವಾದ ಮಿತ್ರತ್ವದ

> **ನಿಮ್ಮ ಬೇಸರವೆನ್ನುವುದು ಎದುರಿನ ವ್ಯಕ್ತಿಯ ಮನಸ್ಸಿನ ಮೇಲೆ ವಿಷದಂತೆ ಕೆಲಸ ಮಾಡುತ್ತದೆ. ಬೇಸರದಿಂದ ಮನುಸ್ಸು ಮುರಿದು ಹೋಗುತ್ತದೆ. ಹೀಗಾದರೆ ಮಾನವ ಸಂಬಂಧಗಳು ಹೇಗೆ ಬೆಳೆದಾವು, ಬದುಕಿಯಾವು?**

ಅರ್ಥ. ಯಾರಾದರೊಬ್ಬನೊಂದಿಗೆ ಸ್ನೇಹ ಸಲ್ಲದೆಂದು ನಮಗನಿಸಿದರೆ ಒಳ್ಳೆಯವರಾಗಿ ಬೇರ್ಪಡಬೇಕೇ ಹೊರತು ಶತ್ರುಗಳಾಗಿ ದೂರಸರಿಯುವುದರಲ್ಲಿ ಅರ್ಥವಿಲ್ಲ.

ಕೊನೆಯದಾಗಿ– ನಮ್ಮ ವ್ಯಕ್ತಿತ್ವವನ್ನು, ನಮ್ಮನ್ನು ನಾವು ಯಾವೊಂದು ಅಪರಾಧಿಭಾವನೆಯಿಲ್ಲದೆ ಪ್ರೇಮಿಸಬೇಕು. ಅದು ಆತ್ಮ ಸ್ಥೈರ್ಯವನ್ನು ಹೆಚ್ಚಿಸಿ, ನಮ್ಮ ವ್ಯಕ್ತಿತ್ವವನ್ನು ವಿಕಾಸಗೊಳಿಸುತ್ತದೆ. ತನ್ನನ್ನು ತಾನು ಪ್ರೇಮಿಸಿಕೊಳ್ಳಲಾಗದವನು ಮೂರ್ಖ. ಅಂತಹವನನ್ನು ನೋಡಿ ಮರುಕಪಡಬೇಕು. ಆದರೆ, ಅಗತ್ಯಕ್ಕಿಂತಲೂ ತನ್ನನ್ನು ತಾನು ಹಿರಿಮೆಯವನೆಂದುಕೊಳ್ಳುವವನು ತೀರಾ ಮೂರ್ಖ. ಅಂತಹವನ ಬಗ್ಗೆ ಮರುಕ ಅನಗತ್ಯ.

## ಅಪರಿಚಿತರ ಬಗ್ಗೆ ವೈರದ ಭಾವನೆ

ನಾವು ಚಿತ್ರ ಮಂದಿರದಲ್ಲಿ ಟಿಕೆಟ್ಟಿಗೋಸ್ಕರ ಸರತಿಯ ಸಾಲಿನಲ್ಲಿ ನಿಂತಿರುತ್ತೇವೆ. ಬಿಸಿಲಿನಲ್ಲಿ ತಾಸಾನುತಾಸು ನಿಂತು ತಲೆ ಬಿಸಿಯೇರಿರುತ್ತದೆ. ಆಗ ಯಾವನೋ ಒಬ್ಬ ನಡುವೆ ನುಗ್ಗಿ ಟಿಕೆಟ್ ತೆಗೆಸಿಕೊಂಡು ಬಿಡುತ್ತಾನೆ. ಆ ವ್ಯಕ್ತಿಯ ಮೇಲೆ ನಮಗೆ ಕೆಂಡಾಮಂಡಲ ಕೋಪ ಉಕ್ಕುತ್ತದೆ. ಅವನನ್ನು ಚಚ್ಚಿ ಹಾಕಿ ಬಿಡೋಣ ಎನಿಸುತ್ತದೆ. ನಮ್ಮ ಹಕ್ಕಿನ ಮೇಲೆ ಅತಿಕ್ರಮ ಪ್ರವೇಶ ಮಾಡಿದ ಆ ವ್ಯಕ್ತಿಯ ಮೇಲೆ ಪ್ರತೀಕಾರದ ಭಾವನೆ ಮೂಡುತ್ತದೆ. ಸ್ವಲ್ಪ ಸಮಯದ ನಂತರ ಆ ಭಾವನೆ ಮಾಯವಾಗುತ್ತದೆ. ಅದು ಬೇರೆ ವಿಷಯ. ಆ ವ್ಯಕ್ತಿ ನಮಗೆ ಅಪರಿಚಿತನಾಗಿರುತ್ತಾನೆ. ಅವನ ಮೇಲಿನ ನಮ್ಮ ದ್ವೇಷದ ಭಾವನೆ ಅದು ಕ್ಷಣಿಕವಾಗಿದ್ದರೂ ಅವನ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳುವಂತೆ ಪ್ರಚೋದಿಸುತ್ತದೆ.

ಒಂದೊಂದು ಸಲ ನಾವು ಯಾರಾದರೊಬ್ಬ ವ್ಯಕ್ತಿಯನ್ನು ಕಂಡಾಗ, ಅವನ ಮೇಲೆ ವಿನಾಕಾರಣ ಸಿಟ್ಟು ಬರುತ್ತಿರುತ್ತದೆ. ಆ ವ್ಯಕ್ತಿ ನಮಗೆ ಪರಿಚಿತನಾಗಿರುವುದಿಲ್ಲ. ನಮಗೆ ಯಾವ ರೀತಿಯ ಕೆಡುಕನ್ನು ಮಾಡಿರುವುದಿಲ್ಲ. ಆದರೂ ಅಂತಹವನ ಮುಖ ಕಂಡರೆ ಮೈಯೆಲ್ಲ ಚಟಚಟ ಎನ್ನುತ್ತದೆ. ಇಂತಹ ಭಾವನೆಗೆ ಕಾರಣವೇನೆಂಬುದು ಗೊತ್ತಾಗುವುದಿಲ್ಲ. ಬಹುಶಃ

ಅಂತಹ ವ್ಯಕ್ತಿಯ ಮುಖಚಹರೆಯನ್ನು ಸ್ವಲ್ಪಮಟ್ಟಿಗಾದರೂ ಹೋಲುವ ವ್ಯಕ್ತಿ ಇಲ್ಲವೆ ವ್ಯಕ್ತಿಗಳಿಂದ ಹಿಂದೆಂದೋ ನಮಗೆ ಅಪಕಾರವಾಗಿದ್ದಿರಬಹುದು. ನಮಗರಿವಿಲ್ಲದಂತೆ ನಮ್ಮ ಸುಪ್ತ ಮನಸ್ಸು ಅವರ ಬಗ್ಗೆ ದ್ವೇಷ ಬೆಳೆಸಿಕೊಂಡಿರಬಹುದು. ಅದಕ್ಕೇ ಅಂತಹ ಚಹರೆಯ ವ್ಯಕ್ತಿಯ ಬಗ್ಗೆ ವಿನಾಕಾರಣ ನಮ್ಮ ಮನಸ್ಸಿನಲ್ಲಿ ದ್ವೇಷದ ಭಾವನೆ ಮೂಡುತ್ತಿರಬಹುದು.

## ಪರಿಪೂರ್ಣ ಪ್ರೇಮ

ಹಾಗೆಂದರೇನು?

ಡಿಕ್ಷನರಿಯ ಅರ್ಥದಂತೆ; ಒಬ್ಬರನ್ನು ಪ್ರೇಮಿಸುವವನು ಅವರ ಮೇಲೆ ಆತ್ಮೀಯತೆ, ಅನುರಾಗವನ್ನು ವ್ಯಕ್ತಪಡಿಸುತ್ತಾನೆ. ಅವರನ್ನು ನಂಬುತ್ತಾನೆ. ಸಮರ್ಥಿಸುತ್ತಾನೆ. ಅವರಿಂದ ಒಳಿತನ್ನು ಬಯಸುತ್ತಾನೆ. ಅವರ ಯಶಸ್ಸನ್ನು ಕೋರುತ್ತಾನೆ. ಅವರ ಬಗ್ಗೆ ಅಸೂಯೆ ಇರುವುದಿಲ್ಲ. ಆಪತ್ತಿನಲ್ಲಿ ಅವರ ಕೈ ಹಿಡಿಯುತ್ತಾನೆ. ತಪ್ಪುಗಳನ್ನು ಎಣಿಸುವುದಿಲ್ಲ. ಎಣಿಸಿದರೂ ವ್ಯಂಗ್ಯವಾಗಿ ಮಾತಾಡುವುದಿಲ್ಲ. ಆ ತಪ್ಪು ತಿದ್ದಿಕೊಳ್ಳಲು ಸಲಹೆ ನೀಡುತ್ತಾನೆ.

ವಾಸ್ತವದಲ್ಲಿ ಪರಿಪೂರ್ಣ ಪ್ರೇಮವೆನ್ನುವುದನ್ನು ಯಾರೂ ಯಾರಿಗೂ ನೀಡಲಾರರು. ಹಾಗೆಂದು ಇತರರು ನಮ್ಮನ್ನು ಪ್ರೇಮಿಸುವುದಿಲ್ಲವೆಂದು ಅರ್ಥವಲ್ಲ. ಮೇಲೆ ಹೇಳಿದ ಎಲ್ಲ ಲಕ್ಷಣಗಳನ್ನೂ ನಾವು ಇತರರಲ್ಲಿ ಆಶಿಸಲಾಗದು. ಹಾಗೆಯೇ ಇತರರೂ ನಮ್ಮಿಂದ ಬಯಸಲಿಕ್ಕಿಲ್ಲ.

## ತಿರಸ್ಕಾರವನ್ನು ಎದುರಿಸುವುದು

ಇನ್ನೊಬ್ಬರಿಂದ ತಿರಸ್ಕಾರಕ್ಕೀಡಾಗುವುದು ನೋವುಂಟು ಮಾಡುವ ವಿಷಯ. ನಮ್ಮ ವ್ಯಕ್ತಿತ್ವವನ್ನು ಇನ್ನೊಬ್ಬರು ಗುರುತಿಸದಿದ್ದರೆ, ಆ ವ್ಯಕ್ತಿ ನಮ್ಮನ್ನು ತಿರಸ್ಕರಿಸಬಹುದು. ಬೇರೊಂದು ದೃಷ್ಟಿಕೋನದಿಂದ ವಿಚಾರ ಮಾಡಿ ನೋಡಿದಾಗ ನಾವು ನಮ್ಮನ್ನು ತಿರಸ್ಕರಿಸುವ ವ್ಯಕ್ತಿಗಿಂತಲೂ ಉನ್ನತ ವ್ಯಕ್ತಿತ್ವವನ್ನು ಹೊಂದಿರಬಹುದು. ನಮ್ಮ ವ್ಯಕ್ತಿತ್ವವನ್ನು ಅರ್ಥ ಮಾಡಿಕೊಳ್ಳುವ ಬುದ್ಧಿವಂತಿಕೆ ಅವನಿಗಿಲ್ಲದಿರಬಹುದು.

ಈ ಜಗತ್ತಿನಲ್ಲಿ ನಮ್ಮ ವ್ಯಕ್ತಿತ್ವ ನಮ್ಮದು. ನಾವು ಇತರರಿಗೆ ಭಿನ್ನ. ಇತರರು ನಮ್ಮನ್ನು ಅರ್ಥ ಮಾಡಿಕೊಳ್ಳದಿದ್ದರೆ ಅದು ಅವರ ಪಾಡು. ಬೇರೆಯವರಿಗೋಸ್ಕರ ನಮ್ಮ ವ್ಯಕ್ತಿತ್ವವನ್ನು ತಿದ್ದಿಕೊಳ್ಳಬೇಕಾದ ಅಗತ್ಯವಿಲ್ಲ. (ನಮ್ಮ ವ್ಯಕ್ತಿತ್ವದಲ್ಲಿ ಅವಲಕ್ಷಣಗಳಿದ್ದರೆ ಅವುಗಳನ್ನು ಸರಿಪಡಿಸಿಕೊಳ್ಳಬೇಕು.)

ನಾವು ಸ್ನೇಹಿತರನ್ನು ಆಯ್ದುಕೊಳ್ಳುವಾಗ ಸಮಾನ ಅಭಿರುಚಿಯವರನ್ನು ಆರಿಸಿಕೊಳ್ಳುವುದು ಉತ್ತಮ.

## ತಂದೆ-ತಾಯಿಗಳಿಂದ ತಿರಸ್ಕಾರಕ್ಕೀಡಾಗುವುದು

ತಂದೆ-ತಾಯಂದಿರು ತಮ್ಮ ಸಂತಾನವನ್ನು ತಿರಸ್ಕರಿಸಲು ಹಲವಾರು ಕಾರಣಗಳಿರುತ್ತವೆ. ಇಲ್ಲಿ 'ತಿರಸ್ಕರಿಸುವುದು' ಎಂದರೆ ಪ್ರೇಮ-ಆಪ್ಯಾಯತೆ ಕೊಡದಿರುವುದು, ನಿರ್ಲಕ್ಷಿಸುವುದು, ಬಿರುಸಿನಿಂದ ವರ್ತಿಸುವುದು ಇತ್ಯಾದಿ.

ತಿರಸ್ಕಾರಕ್ಕೀಡಾದ ಮಕ್ಕಳಿಗೂ, ಅವರ ತಂದೆತಾಯಂದಿರ ನಡುವೆ ಒಂದು ರೀತಿಯ 'ವ್ಯಕ್ತಿತ್ವದ ಸಂಘರ್ಷ' ಇರುತ್ತದೆ. ಸಾಮಾನ್ಯವಾಗಿ ತಂದೆ ತಾಯಂದಿರು ತಮ್ಮ ಲಕ್ಷಣಗಳನ್ನು ತಮ್ಮ ಮಕ್ಕಳಲ್ಲಿ ನೋಡಿಕೊಳ್ಳುತ್ತಿರುತ್ತಾರೆ. ಅವು ಒಳ್ಳೆಯ ಲಕ್ಷಣಗಳಾಗಿದ್ದರೆ ತಾಪತ್ರಯವಿಲ್ಲ. ಕೆಟ್ಟ ಲಕ್ಷಣಗಳಾದರೇನೇ ಎಡವಟ್ಟಾಗುವುದು.

ತಂದೆ-ತಾಯಂದಿರು ತಮ್ಮ ಸಮಸ್ಯೆಗಳನ್ನು ದೂರ ಮಾಡಿಕೊಳ್ಳಲು ಮಕ್ಕಳನ್ನು ಬೈಯುತ್ತಿರುತ್ತಾರೆ. ತಮ್ಮಲ್ಲಿ ಹುದುಗಿರುವ ಬೇಸರ, ರೇಜಿಗೆಯನ್ನು ಹೊರಹಾಕಲು ಮಕ್ಕಳನ್ನು ಸಾಧನವಾಗಿ ಬಳಸಿಕೊಳ್ಳುತ್ತಾರೆ. ಇಂತಹವರು ಪದೇ ಪದೇ ತಮ್ಮ ಮಕ್ಕಳನ್ನು ಇತರರೊಂದಿಗೆ ಹೋಲಿಸುತ್ತ 'ಅವರಂತೆ ನೀನ್ಯಾಕಿಲ್ಲ?' ಎಂದು ಟೀಕಿಸುತ್ತಿರುತ್ತಾರೆ. ಇದರಿಂದ ಮಕ್ಕಳ ಮನಸ್ಸಿನ ಮೇಲಾಗುವ ದುಷ್ಪಭಾವದ ಪರಿಣಾಮದ ಅರಿವು ಅವರಿಗಿರುವುದಿಲ್ಲ. ಅದರಂತೆ ತಮ್ಮ ಮಕ್ಕಳಿಗೂ ಒಂದು ಪ್ರತ್ಯೇಕ ವ್ಯಕ್ತಿತ್ವವಿರುತ್ತದೆನ್ನುವುದನ್ನು ಅವರ ಮನಸ್ಸು ಅಂಗೀಕರಿಸಿರುವುದಿಲ್ಲ.

ತಂದೆ-ತಾಯಂದಿರು ತಮ್ಮ ಮಕ್ಕಳನ್ನು ತಿರಸ್ಕರಿಸಲು ಮತ್ತೊಂದು ಕಾರಣವೆಂದರೆ ಅವರ ತಂದೆ ತಾಯಂದಿರು ಕೂಡ ಅವರ ಬಾಲ್ಯದಲ್ಲಿ ಇದೇ ರೀತಿ ವರ್ತಿಸಿರುವುದು. ಅದರಿಂದಾಗಿ ಅವರಲ್ಲಿ ಮನೆ ಮಾಡಿಕೊಂಡು ಬಂದ 'ಫ್ರಸ್ಟೇಶನ್'ನ್ನು ಅವರು ಮಕ್ಕಳ ಮೇಲೆ ತೋರ್ಪಡಿಸುತ್ತಿರುತ್ತಾರೆ.

ತಂದೆ–ತಾಯಿಗಳಾದವರು ಇಲ್ಲಿ ನೆನಪಿಟ್ಟುಕೊಳ್ಳಬೇಕಾದುದೇನೆಂದರೆ, ತಮ್ಮ ಮಕ್ಕಳಿಗೂ ಒಂದು ಪ್ರತ್ಯೇಕ ವ್ಯಕ್ತಿತ್ವವಿರುತ್ತದೆ. ತಮ್ಮಂತೆಯೇ ತಮ್ಮ ಮಕ್ಕಳೂ ಆಗಬೇಕೆಂದು ಬಯಸುವುದು, ಆಗದಿದ್ದಲ್ಲಿ ತಿರಸ್ಕರಿಸುವುದು ಇದೆಲ್ಲ ದಡ್ಡತನ. ತಮ್ಮ ಮಕ್ಕಳು ತಮ್ಮಂತಾಗದಿದ್ದ ಮಾತ್ರಕ್ಕೆ, ಮಕ್ಕಳಾದವರು ತಮಗೆ ಗೌರವ ನೀಡುತ್ತಿಲ್ಲವೆಂದು ಭಾವಿಸುವುದೂ ಮೂರ್ಖತನವಾಗುತ್ತದೆ.

## ಪ್ರೇಮದಿಂದ ಪ್ರೇಮ

ನ್ಯೂಟನ್ನನ ಚಲನೆಯ ಮೂರನೇ ನಿಯಮ ನೆನಪಿರಬೇಕು. 'ಕ್ರಿಯೆಗೆ ವಿರುದ್ಧವಾದ, ಸಮನಾದ ಪ್ರತಿಕ್ರಿಯೆ ಇರುತ್ತದೆ.'

ನಾವು ಯಾರಿಗಾದರೂ ಹೊಡೆದಾಗ, ಇಲ್ಲವೆ ಹಾನಿಯುಂಟು ಮಾಡಿದಾಗ, ಆ ವ್ಯಕ್ತಿಗೆ ಕೋಪ ಬರುತ್ತದೆ. ಆ ಭರದಲ್ಲಿ ಆತ ನಮ್ಮನ್ನು ತಿರುಗಿ ಹೊಡೆಯಲೂಬಹುದು. ಇಲ್ಲವೆ ದ್ವೇಷಿಸಬಹುದು. ಅದೇ ರೀತಿ ನಾವು ಯಾರನ್ನಾದರೂ ಪ್ರೇಮಿಸಿದಾಗ ಇಲ್ಲವೆ ಒಳಿತು ಮಾಡಿದಾಗ ಅಂತಹ ವ್ಯಕ್ತಿಯ ಮನಸ್ಸಿನಲ್ಲಿ ನಮ್ಮ ಬಗ್ಗೆ ಸದ್ಭಾವನೆ, ಪ್ರೇಮ ಮೂಡುತ್ತದೆ.

ಯಾವುದು ಒಳ್ಳೆಯದು? ಅಸಹನೆ, ಕೋಪ ಪ್ರದರ್ಶಿಸಿ, ತಿರುಗಿ ಅವನ್ನೇ ಪಡೆಯುವುದು ಮೇಲೋ? ಅಥವಾ ಪ್ರೇಮಿಸಿ, ಪ್ರೇಮವನ್ನು ಪಡೆಯುವುದು ಮೇಲೋ?

ಪ್ರೇಮ ನೀಡಿ ಪ್ರೇಮ ಪಡೆಯುವುದು ಮೇಲೆನಿಸುತ್ತಿದೆಯೆ? ಗುಡ್! ಪ್ರೇಮಿಸುವುದೆಂದರೆ, ಯುವಕ ಯುವತಿಯನ್ನು ಇಲ್ಲವೆ ಯುವತಿ ಯುವಕನನ್ನು ಪ್ರೇಮಿಸುವುದೊಂದೇ ಅಲ್ಲ. ತಂದೆ–ತಾಯಂದಿರನ್ನು, ಅಕ್ಕ–ತಂಗಿ, ಅಣ್ಣತಮ್ಮ ಬಂಧು ಮಿತ್ರರು, ನೆರೆ–ಹೊರೆ ಮುದ್ದಿನ ಪ್ರಾಣಿ, ಪರಿಸರ ಯಾವುದನ್ನೂ ಪ್ರೇಮಿಸಬಹುದು. ಪ್ರೇಮಿಸುವುದರ ಅನುಭವ

**ನೋವು–ಕೊರಗುಗಳ ಕೋಶದಿಂದ ನೀವು ಹೊರಬಂದೊಡನೆಯೇ 'ಅಭಿವೃದ್ಧಿ'ಯ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಆ ಕೋಶದಿಂದ ಅದೆಷ್ಟು ಬೇಗ ಹೊರಬೀಳುತ್ತಿರೋ ಅಷ್ಟು ಒಳ್ಳೆಯದು.**

ಆನಂದವನ್ನು ನೀಡುತ್ತದೆ. ಅದೇ ರೀತಿ ಇನ್ನೊಬ್ಬರು ನಮ್ಮನ್ನು ಪ್ರೇಮಿಸುತ್ತಾರೆನ್ನುವುದೂ ಆನಂದವನ್ನು ನೀಡುವ ಅನುಭವವೇ. ಇತರರನ್ನು ಪ್ರಕೃತಿಯನ್ನು ನಮ್ಮನ್ನು ನಾವು ಪ್ರೇಮಿಸುತ್ತ ಪ್ರೇಮಮಯ ಬದುಕನ್ನು ಸಾಗಿಸೋಣ.

## ಅಪರಾಧಿ ಭಾವನೆ – ಭಯ

ಅಪರಾಧಿ ಭಾವನೆ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸಾಮಾನ್ಯವಾಗಿ ಇರುತ್ತದೆ. ಈ ಭಾವನೆ ಎರಡು ರೀತಿಯದಾಗಿರುತ್ತದೆ:

ಒಂದು, ತಪ್ಪು ಮಾಡಿರುವೆನೆಂದು ಗೊತ್ತಾದಾಗ ಉಂಟಾಗುವುದು.

ಮತ್ತೊಂದು, ಅನಾವಶ್ಯಕವಾಗಿ ಸೃಷ್ಟಿಸಿಕೊಂಡದ್ದು.

ಮನುಷ್ಯನಲ್ಲಿ 'ಅಪರಾಧಿ ಭಾವನೆ' ಉಂಟಾಗುವುದು ಯಾವಾಗ? ತಾನು ಮಾಡಿದ ಕೆಲಸ ತಪ್ಪು ಎನ್ನುವುದು ಅವನ ಮನಸ್ಸಿಗೆ ಗೊತ್ತಿರುವಾಗ. ಉದಾಹರಣೆಗೆ ವಿದ್ಯಾರ್ಥಿಯೊಬ್ಬ ತರಗತಿಯಲ್ಲಿ ಎಲ್ಲರಿಗಿಂತಲೂ ಹೆಚ್ಚು ಅಂಕ ಪಡೆದು ಮೊದಲ ದರ್ಜೆಯಲ್ಲಿ ಉತ್ತೀರ್ಣನಾಗಿರುತ್ತಾನೆ. ಎಲ್ಲರೂ ಅವನನ್ನು ಅಭಿನಂದಿಸುತ್ತಿರುತ್ತಾರೆ. ಆ ವಿದ್ಯಾರ್ಥಿ ಹೊರನೋಟಕ್ಕೆ ಆನಂದದಿಂದಿರುವಂತೆ ಕಂಡು ಬಂದರೂ ಒಳಗೆ ಒಂದು ಸ್ವರ ಅವನನ್ನು ಕೇಳುತ್ತಿರುತ್ತದೆ. "ನೀನು ಮೊದಲದರ್ಜೆಯಲ್ಲಿ ಉತ್ತೀರ್ಣನಾದುದರಲ್ಲಿ ನಿನ್ನ ಸ್ವಂತ ಪ್ರತಿಭೆ ಏನೂ ಇಲ್ಲ. ನೀನು ನಕಲು ಮಾಡಿ ಪಾಸಾಗಿದ್ದೀಯೆ. ಅಲ್ಲವೆ?"

ಹಿಂದೆಯೇ ಅವನಿಗೆ ಮತ್ತೊಂದು ಸ್ವರವೂ ಕೇಳಿಸಬಹುದು. "ನಕಲು ಮಾಡುವುದರಲ್ಲಿ ತಪ್ಪೇನಿದೆ? ಎಲ್ಲರೂ ನಕಲು ಮಾಡುತ್ತಾರೆ."

ಮೊದಲನೆಯ ಸ್ವರ ಆ ವಿದ್ಯಾರ್ಥಿಯ ಅಂತರಾತ್ಮದ ತಪ್ಪರಿಮೆಯಿಂದಾಗಿ ತೇಲಿ ಬಂದದ್ದು. ಎರಡನೆಯದು, ಆ ತಪ್ಪರಿಮೆಯನ್ನು ಅಲ್ಲಗಳೆದು ತಪ್ಪನ್ನೆ ಸಮರ್ಥಿಸುವ ಸ್ವರ. ಮೊದಲನೆಯ ಸ್ವರಕ್ಕೆ ಕಿವಿಗೊಟ್ಟರೆ ಆ ವಿದ್ಯಾರ್ಥಿ ಮುಂದೆ ತಿದ್ದಿಕೊಂಡು ಒಳ್ಳೆಯ ನಾಗರಿಕನಾಗಬಹುದು. ಹಾಗಲ್ಲದೆ ಎರಡನೆಯ ಸ್ವರಕ್ಕೆ ಕಿವಿಗೊಟ್ಟರೆ ಮುಂದೆ ತಾನು ಮಾಡುವ

ಪ್ರತಿಯೊಂದು ಕೆಟ್ಟ ಕೆಲಸಕ್ಕೂ ಯಾವುದಾದರೊಂದು ಕುಂಟು ನೆಪ ಹುಡುಕಿಕೊಳ್ಳುವ ಪ್ರವೃತ್ತಿ ಬೆಳೆಯುತ್ತದೆ. ಲಂಚಕೋರರೂ ಇದೇ ವರ್ಗದೊಳಗೆ ಬರುತ್ತಾರೆ. 'ಇಡೀ ದೇಶದಲ್ಲಿ ಭ್ರಷ್ಟಾಚಾರ ತುಂಬಿ ಹೋಗಿದೆ. ನಾನೊಬ್ಬ ಲಂಚ ತೆಗೆದುಕೊಳ್ಳದಿದ್ದರೆ ದೇಶವೇನೂ ಉದ್ಧಾರವಾಗಿಬಿಡುವುದಿಲ್ಲ' ಎನ್ನುವ ವಿತಂಡವಾದದಿಂದ ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಾರೆ. ಆದರೆ ಅವರ ಅಂತರಾತ್ಮದಲ್ಲಿ ಅಡಗಿಕೊಂಡಿರುವ ತಪ್ಪರಿಮೆ ಅವರನ್ನು ಸುಮ್ಮನೇ ಬಿಟ್ಟಿರುವುದಿಲ್ಲ. ಸದಾ ಕಾಡುತ್ತಿರುತ್ತದೆ. ಸದಾ ಅವರ ಕತ್ತು ಹಿಚುಕಲು ಪ್ರಯತ್ನಿಸುತ್ತ ಮಾನಸಿಕವಾಗಿ ಮತ್ತಷ್ಟು ಪತನಗೊಳ್ಳುತ್ತಿರುತ್ತಾರೆ. ವ್ಯಕ್ತಿತ್ವಹೀನರಾಗಿ ಬದುಕು ಸಾಗಿಸುತ್ತಾರೆ.

ಕಳ್ಳರಾಗಲಿ ಕೊಲೆಗಾರರಾಗಲಿ ಅಪರಾಧ ಮಾಡಿದ ನಂತರ, ಆ ಸ್ಥಳದಲ್ಲಿ ಏನಾದರೊಂದು 'ಸುಳಿವು' ಬಿಟ್ಟಿರುತ್ತಾರೆ. ಮನಃಶಾಸ್ತ್ರಜ್ಞರ ಸಿದ್ಧಾಂತದ ಪ್ರಕಾರ ಅವರು ಆ ರೀತಿ 'ಸುಳಿವು' ಬಿಡಲು ಕಾರಣ ಅವರ ಸುಪ್ತ ಮನಸ್ಸಿನಲ್ಲಿ ಅಡಗಿಕೊಂಡಿರುವ ಅಪರಾಧಿ ಭಾವನೆ. ಕಳ್ಳರು ಕೊಲೆಗಾರರಾದವರಿಗೆ ತಾವು ಮಾಡುವುದು ತಪ್ಪೆಂದು ಗೊತ್ತಿರುತ್ತದೆ. ಆ ತಪ್ಪರಿಮೆ ಅವರನ್ನು ಒಂದಲ್ಲ ಒಂದು ರೀತಿಯಲ್ಲಿ ಸಿಕ್ಕಿಬೀಳುವಂತೆ ಮಾಡುತ್ತದೆ.

ಇನ್ನು, ಕೆಲವರಿಗೆ ಅನಾವಶ್ಯಕವಾದ ಅಪರಾಧಿ ಭಾವನೆ ಕಾಡುತ್ತಿರುತ್ತದೆ. ಅದನ್ನು ಅವರು ಅನಾವಶ್ಯಕವಾಗಿ ಸೃಷ್ಟಿಸಿಕೊಂಡಿರುತ್ತಾರೆ. ಉದಾಹರಣೆಗೆ ಒಬ್ಬ ತನ್ನ ಪಕ್ಕದ ಮನೆಯ ಹುಡುಗಿಯನ್ನು ಎದುರು ಮನೆಯ ಹುಡುಗನೊಂದಿಗೆ ಚಿತ್ರ ಮಂದಿರದಲ್ಲಿ ನೋಡುತ್ತಾನೆ. ಆ ಹುಡುಗನ ನಡತೆ ಸರಿಯಾದುದಲ್ಲವೆಂಬುದು ಇವನಿಗೆ ಗೊತ್ತಿರುತ್ತದೆ. ಅದಕ್ಕೇ ಆ ಹುಡುಗಿಯ ತಂದೆಗೆ ಸೂಕ್ಷ್ಮವಾಗಿ ಸೂಚನೆ ಕೊಡುತ್ತಾನೆ. ಆ ಹುಡುಗಿಯ ತಂದೆ ತನ್ನ ಮಗಳನ್ನು ಬೈಯುತ್ತಾನೆ. ಅವಳು ಆತ್ಮಹತ್ಯೆ ಮಾಡಿಕೊಂಡು ಬಿಡುತ್ತಾಳೆ. ಇಲ್ಲಿ ಆ ಹುಡುಗಿಯ ಆತ್ಮ ಹತ್ಯೆಗೆ ಯಾರು ಕಾರಣ? ಅವಳ ತಂದೆಗೆ ಹೇಳಿದ ಆ ವ್ಯಕ್ತಿಯೆ? ಅಲ್ಲ. ಅವನು ಹೇಗಾಗುತ್ತಾನೆ! ಸ್ವಾಭಾವಿಕವಾಗಿ ಒಬ್ಬರು ಕಣ್ಣೆದುರಿಗೆ ಹಾಳಾಗುತ್ತಿರುವುದನ್ನು ತಡೆಗಟ್ಟಬೇಕೆಂದುಕೊಂಡದ್ದು ತಪ್ಪು ಹೇಗಾಗುತ್ತದೆ! 'ನಾನು ಹೇಳದಿದ್ದರೆ ಆಕೆ ಉಳಿಯುತ್ತಿದ್ದಳೇನೋ' ಎಂದು ಆ ವ್ಯಕ್ತಿ ಕೊರಗುವುದು ಅನಾವಶ್ಯಕ. ಕಾಲಚಕ್ರದಲ್ಲಿ ಏನೇನೋ ಘಟನೆಗಳು ನಡೆಯುತ್ತಿರುತ್ತವೆ. ಕೆಲವಕ್ಕೆ ಯಾರೂ ಕಾರಣರಾಗಿರುವುದಿಲ್ಲ.

ಇಂತಹ ಅನಗತ್ಯ ತಪ್ಪರಿಮೆಯನ್ನು ತೊಡೆದುಕೊಳ್ಳಲು ಪ್ರಯತ್ನಿಸಬೇಕು.

### ಮನುಷ್ಯನಿಗಿರುವ ಘೋರವಾದ ಭಯ – ಸಾವು

ಜೀವನದಲ್ಲಿ ಹೆಚ್ಚಿನ ಕಷ್ಟವೆಂದರೆ ಸಾವು ಬರುವುದು. ಅದನ್ನು ಮೀರಿದ ಕಷ್ಟ ಇಲ್ಲ. ಜೀವನದಲ್ಲಿ ಅನೇಕ ಕಷ್ಟಗಳು ಬರಬಹುದು. ಅವುಗಳಲ್ಲಿ ಕೆಲವು ದುರ್ಭರವಾದವುಗಳೂ ಆಗಿರಬಹುದು. ಕೆಲವೊಂದು ವೇಳೆ ಅಂತಹ ಕಷ್ಟಗಳಿಂದ ಪಾರಾಗಲು ಆತ್ಮಹತ್ಯೆಯೊಂದೇ ದಾರಿ ಎನಿಸಿರಲೂಬಹುದು. (ದುರ್ಬಲ ಮನಸ್ಸಿನವರು ಆತ್ಮಹತ್ಯೆ ಮಾಡಿಕೊಳ್ಳಲೂ ಬಹುದು.)

ಆದರೆ ವಿಚಾರಿಸಿನೋಡಿ. ಜೀವದಿಂದಿದ್ದರೆ ಮುಂದೆ ಜೀವನದಲ್ಲಿ ಒಳ್ಳೆಯ ತಿರುವು ಬರಬಹುದು. ಸದಾಕಾಲ ಒಳಿತು ಆಗದಿರುವಂತೆ ಸದಾಕಾಲ ಕೆಡುಕೂ ಆಗುವುದಿಲ್ಲ. ಪ್ರತಿಯೊಬ್ಬರಿಗೂ ಅವರದೇ ಆದ 'ಕಾಲ' ಇರುತ್ತದೆ.

ಸಾವು ಪ್ರತಿಯೊಬ್ಬನಿಗೂ ಅನಿವಾರ್ಯ. ಅದನ್ನು ತಪ್ಪಿಸುವಂತಿಲ್ಲ. ಅದು ಬಂದಾಗ ಬರಲಿ. ಆದರೆ ಜೀವನದಲ್ಲಿನ ಕಷ್ಟನಷ್ಟಗಳಿಗೆ ಕುಗ್ಗಿ–ಸಾವನ್ನು ಆಹ್ವಾನಿಸಬೇಕೆಂದುಕೊಳ್ಳುವುದು ವಿವೇಕವಂತರ ಲಕ್ಷಣವಲ್ಲ. ನಾವು ಭಯಗೊಂಡಂತೆಲ್ಲ ಸಾವು ನಮ್ಮನ್ನು ಹೆದರಿಸತೊಡಗುತ್ತದೆ. ಸಾವಿನ ಬಗೆಗಿರುವ ಭಯವನ್ನು ತೊಡೆದು ಹಾಕಿ, ಜೀವಿಸುವುದನ್ನು ಕಲಿಯೋಣ.

### ಒತ್ತಡ

ಮನುಷ್ಯನಾದವನಿಗೆ ಹಲವಾರು ಒತ್ತಡಗಳಿರುತ್ತವೆ. ಹದಿವಯಸ್ಸಿನ ಮಕ್ಕಳಿಂದ ಅವರ ತಂದೆ–ತಾಯಂದಿರು ಬಹಳಷ್ಟನ್ನು ನಿರೀಕ್ಷಿಸುತ್ತಾರೆ. ಶಾಲೆಯಲ್ಲಿ ತಮ್ಮ ಮಕ್ಕಳು ಅತ್ಯುತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಬೇಕೆಂದೂ ಮನೆಗೆಲಸಗಳಲ್ಲಿ ಸಹಾಯ ಮಾಡಬೇಕೆಂದೂ ಸಾಧ್ಯವಾದರೆ ಸಂಗೀತ, ನೃತ್ಯ ಈಜು ಇತ್ಯಾದಿಗಳನ್ನು ಕಲಿಯಬೇಕೆಂದೂ ಆಶಿಸುತ್ತಾರೆ.

ತಂದೆ–ತಾಯಂದಿರ ಬಂಧು–ಬಳಗದವರ ಇಂತಹ ಕೋರಿಕೆಗಳಷ್ಟೇ ಅಲ್ಲದೆ, ಪ್ರತಿಯೊಬ್ಬರಿಗೂ ಅವರವೇ ಆದ ಕೆಲವು ಇಚ್ಛೆಗಳೂ ಇರುತ್ತವೆ. ಅವುಗಳನ್ನು ಅವರು ಪೂರೈಸಿಕೊಳ್ಳುವ ವಿಧಾನದಲ್ಲಿ ಒತ್ತಡ ಹೆಚ್ಚುತ್ತದೆ. ಇಂತಹ ಸಂದರ್ಭದಲ್ಲಿಯೇ ಬುದ್ಧಿ ಉಪಯೋಗಿಸಿ ಒತ್ತಡಗಳನ್ನು ನಿವಾರಿಸಿಕೊಳ್ಳಬೇಕು.

ಮನುಷ್ಯನಿಗೆ 'ಹೊಸ ಶಾಲೆಯಲ್ಲಿ ಸೇರುವುದು' ಎನ್ನುವಂತಹ ಚಿಕ್ಕ ವಿಷಯದಿಂದ ಹಿಡಿದು, ಅವನು ಅತ್ಯಂತ ಆತ್ಮೀಯವಾಗಿ ಪ್ರೇಮಿಸುವ ವ್ಯಕ್ತಿ ದುರದೃಷ್ಟವಶಾತ್ ಸಾಯುವುದರಂತಹ ದೊಡ್ಡ ಘಟನೆಗಳವರೆಗೆ ಎಲ್ಲವೂ ಒತ್ತಡವನ್ನು ಹೆಚ್ಚಿಸುತ್ತವೆ. ಇವುಗಳಲ್ಲಿ ಕೆಲವು ಅಗತ್ಯದ ಒತ್ತಡಗಳಾಗಿದ್ದರೆ, ಇನ್ನು ಕೆಲವು ಅನಗತ್ಯ ಒತ್ತಡಗಳಾಗಿರುತ್ತವೆ. ಅಂತಹವುಗಳು ಯಾವವೆಂಬುದನ್ನು ಗುರುತಿಸಬೇಕಾದ ಹೊಣೆ ನಮ್ಮದೇ ಆಗಿರುತ್ತದೆ.

ಅಗತ್ಯವಾದ ಒತ್ತಡ ಮನುಷ್ಯನಿಗೆ ಬೇಕು. ಈ ಒತ್ತಡದಿಂದಾಗಿಯೇ ನಾವು ಶಾಲೆಗೆ ಹೋಗಬಲ್ಲವರಾಗಿದ್ದೇವೆ, ಓದಬಲ್ಲವರಾಗಿದ್ದೇವೆ, ಆಫೀಸಿಗೆ ಹೋಗಬಲ್ಲವರಾಗಿದ್ದೇವೆ. ಇಂತಹ ಒತ್ತಡ ಸೋಮಾರಿತನವನ್ನು ದೂರ ಮಾಡಿ ಕರ್ತವ್ಯವನ್ನು ಬೋಧಿಸುತ್ತದೆ. ಒತ್ತಡವಿರದಿದ್ದರೆ ಮನುಷ್ಯ ಯಾವ ಕೆಲಸವನ್ನೂ ಮಾಡಲಾರ.

ಇನ್ನು ಅನಗತ್ಯ ಒತ್ತಡದ ಬಗ್ಗೆ. ಅನಗತ್ಯ ಒತ್ತಡದಿಂದ ಮನುಷ್ಯ ಸುಖವಾಗಿರಲಾರ. ಅದರಿಂದಾಗಿ ಇಡೀ ಪ್ರಪಂಚದ ಭಾರವೇ ನಮ್ಮ ತಲೆಯ ಮೇಲಿರುವಂತೆ ಭಾಸವಾಗುತ್ತದೆ. ಸರಿಯಾಗಿ ಯೋಜನೆ ಹಾಕಿಕೊಳ್ಳದೆ ಹಲವಾರು ಕೆಲಸಗಳನ್ನು ಒಮ್ಮೆಲೇ ಹಮ್ಮಿಕೊಂಡು, ಎಲ್ಲವನ್ನೂ ಒಟ್ಟೊಟ್ಟಿಗೇ ಮುಗಿಸಬೇಕೆಂದುಕೊಳ್ಳುವವರಿಗೆ ಒತ್ತಡ ಉಂಟಾಗುತ್ತದೆ. ಇದು ಅನಗತ್ಯ ಒತ್ತಡ. ಇಂತಹ ಒತ್ತಡ ದೂರ ಮಾಡಿಕೊಳ್ಳಬೇಕೆಂಬ ಬಯಕೆ ನಮ್ಮನ್ನು ಮಾದಕ ವಸ್ತುಗಳು, ಆಲ್ಕೋಹಾಲಿಗೆ

**ಜೀವನವೆನ್ನುವುದು ನೂರು ಮೀಟರ್‌ಗಳ ಹರ್ಡಲ್ಸ್‌ನಂತಹುದು. ಸ್ವಲ್ಪ ದೂರ ಓಡಿದ ಕೂಡಲೆ ಒಂದು ಅಡ್ಡ ತಡೆ; ಅದನ್ನು ಹಾರಿ ಹೋದರೆ ಮತ್ತೊಂದು.... ಮಗದೊಂದು...**

ಶರಣಾಗುವಂತೆ ಮಾಡಬಹುದು. ಕ್ರಮಬದ್ಧ ಯೋಜನೆ ಶಿಸ್ತಿನ ವರ್ತನೆ, ಪರಿಪೂರ್ಣ ಕೆಲಸದ ರೀತಿಯಿಂದ ಇಂತಹ ಒತ್ತಡವನ್ನು ನಿವಾರಿಸಿಕೊಳ್ಳಬಹುದು.

## ನಿರ್ಧಾರದ ಒತ್ತಡ

ವಿದ್ಯಾರ್ಥಿಗಳಾದವರು ಎಸ್.ಎಸ್.ಎಲ್.ಸಿ. ಪಾಸಾದ ನಂತರ ಸೈನ್ಸ್ ಮಾಡಬೇಕೋ ಆರ್ಟ್ಸ್ ಮಾಡಬೇಕೋ ಅಥವಾ ಕಾಮರ್ಸ್ ಮಾಡುವುದು ಸರಿಯೋ? ಎಂದು ಯೋಚಿಸುತ್ತಾರೆ. ಯಾವ ಕಾಲೇಜಿನಲ್ಲಿ ಸೇರಬೇಕು, ಮುಂದೆ ತಮ್ಮ ಗುರಿ ಏನು ಇವೆಲ್ಲ ಮುಖ್ಯವಾದ ನಿರ್ಧಾರಗಳು. ಇಂತಹ ನಿರ್ಧಾರ ತಾಳುವುದೂ ಮನುಷ್ಯನಾದವನಲ್ಲಿ ಒತ್ತಡವನ್ನು ಮೂಡಿಸುತ್ತದೆ.

ಅದೇ ರೀತಿ, ಮುಂದೆ ವ್ಯಾಪಾರ ಮಾಡುವುದೋ ಸರಕಾರಿ ನೌಕರಿ ಸೇರುವುದೋ ಇಲ್ಲವೆ ಏನಾದರೊಂದು ಉದ್ದಿಮೆ ಸ್ಥಾಪಿಸುವುದೋ– ಇವೆಲ್ಲ ಕೂಡ ಪ್ರಮುಖ ನಿರ್ಧಾರಗಳೇ ಇವು ಕೂಡ ಒತ್ತಡವನ್ನುಂಟು ಮಾಡುತ್ತವೆ.

ನಮ್ಮ ಜೀವನದ ಗುರಿ, ಆ ಗುರಿ ಸಾಧಿಸುವಲ್ಲಿ ನಮ್ಮ ಪ್ರಯತ್ನ, ನಮ್ಮ ತಾಕತ್ತಿನ ಅಂದಾಜು ಇವುಗಳ ಬಗ್ಗೆ ಸ್ಪಷ್ಟ ಕಲ್ಪನೆ ಏರ್ಪಡಿಸಿಕೊಂಡರೆ ಒತ್ತಡ ತಾನಾಗಿಯೇ ದೂರವಾಗುತ್ತದೆ.

## ಅತಿಯಾದ ಟಿವಿ ವೀಕ್ಷಣೆ

ದೂರದರ್ಶನ, ಚಲನಚಿತ್ರಗಳು ಮನುಷ್ಯನಿಗೆ ಮಾನಸಿಕವಾಗಿ ಏನಾದರೂ ಹಾನಿ ಉಂಟು ಮಾಡುತ್ತವೆಯೆ?

ಯಾರೇ ಆಗಲಿ, ಟಿ.ವಿ.ಯನ್ನು ವಾರಕ್ಕೆ ಹತ್ತು ಗಂಟೆಗಿಂತಲೂ ಹೆಚ್ಚು ಕಾಲ ನೋಡುತ್ತಿರುವರೆಂದುಕೊಳ್ಳೋಣ. ಅಂತಹವರು ಬಹುಶಃ 'ಟಿ.ವಿ. ನೋಡುವುದು' ಎನ್ನುವ ರೂಢಿಯನ್ನು ಯಾವುದಾದರೊಂದು ಸಮಸ್ಯೆಯಿಂದ ದೂರ ಓಡಿಹೋಗುವ ಮಾರ್ಗವೆಂಬುದಾಗಿ ಆರಿಸಿಕೊಂಡಿದ್ದಾರೆನ್ನಬಹುದು.

ಆಶ್ಚರ್ಯವೇ?! 'ನನಗೇನೂ ಸಮಸ್ಯೆಗಳಿಲ್ಲವಲ್ಲ. ಕೇವಲ ಪುರಸೊತ್ತಿನ ವೇಳೆಯಲ್ಲಷ್ಟೇ ನೋಡುತ್ತಿದ್ದೇನೆ' ಎಂದು

ವಾದಿಸಬಹುದು. ಇಲ್ಲ, ಅಂತಹವರು ಕೇವಲ ಟ.ವಿ.ಯನ್ನು ನೋಡುವುದಕ್ಕೋಸ್ಕರವೇ ಪುರಸೊತ್ತನ್ನು ಕಲ್ಪಿಸಿಕೊಳ್ಳುತ್ತಿದ್ದಾರೆ ಅಷ್ಟೇ.

ಟ.ವಿ.ಯನ್ನು ಪೂರ್ತಿಯಾಗಿ ನೋಡಕೂಡದೆಂದು ಇದರ ಅರ್ಥವಲ್ಲ. ಒಂದು ಮಿತಿಯವರೆಗೆ ಟ.ವಿ. ನೋಡುವುದು ಜ್ಞಾನವನ್ನು ನೀಡುತ್ತದೆ. (ವಾರ್ತೆ, ಕ್ವಿಜ್, ಕಾರ್ಯಕ್ರಮ, ಉತ್ತಮ ನಾಟಕ... ಇತ್ಯಾದಿ) ಟ.ವಿ. ವೀಕ್ಷಣೆ ನಮ್ಮ ದೈನಂದಿನ ಕಾರ್ಯಕ್ರಮಗಳಿಗೆ ಅಡ್ಡಿ ಉಂಟು ಮಾಡುವಂತಿರಬಾರದು. ಸದಾ ಟ.ವಿ. ನೋಡುವುದರ ಬದಲು ಒಂದಿಷ್ಟು ಸಮಯ ಪುಸ್ತಕ ಓದಲು ವಿನಿಯೋಗಿಸುವುದು ಮಾನಸಿಕ ವಿಕಾಸಕ್ಕೆ ಸಹಾಯ ಮಾಡಬಲ್ಲದು. ಟ.ವಿ.ಯಲ್ಲಿ ಬರುವ ಶತ ದರಿದ್ರ ಕಾರ್ಯಕ್ರಮಗಳಿಗಿಂತಲೂ ಒಂದು ಒಳ್ಳೆಯ ಪುಸ್ತಕ ಹೆಚ್ಚಿನ ಆನಂದವನ್ನು ಒದಗಿಸಬಲ್ಲದು.

## ಅತಿಯಾಗಿ ತಿನ್ನುವುದು

ಬಹಳಷ್ಟು ಜನ ತಮ್ಮ ಮಾನಸಿಕ ಲೋಪಗಳನ್ನು ತುಂಬಿಕೊಳ್ಳಲು ಹೆಚ್ಚು ಹೆಚ್ಚಾಗಿ ತಿನ್ನುತ್ತಾರೆಂದರೆ ವಿಚಿತ್ರವೆನಿಸಬಹುದು. ಆದರೆ ಇದರಲ್ಲಿ ಸತ್ಯವಿದೆ. ಎಚ್ಚರಿಕೆಯಿಂದ ಗಮನಿಸಿನೋಡಿದಲ್ಲಿ ಮಾನಸಿಕವಾಗಿ ಏಕಾಂಗಿಯಾಗಿರುವವರು, ಇತರ ಯಾವ ಹವ್ಯಾಸಗಳೂ ಇಲ್ಲದಿರುವವರು ಸದಾ ಏನಾದರೊಂದನ್ನು ಮೆಲ್ಲುತ್ತಿರುವುದನ್ನು ಕಾಣಬಹುದಾಗಿದೆ.

## ದುರಭ್ಯಾಸಗಳಿಂದ ದೂರವಾಗುವುದು

ಕುಡಿತ, ಸಿಗರೇಟ್.... ಇತ್ಯಾದಿಗಳೆಲ್ಲ ದುರಭ್ಯಾಸಗಳು.

ಸಿಗರೇಟ್ ಚಟದಿಂದ ದುಡ್ಡು ಹಾಳಾಗುವುದರೊಂದಿಗೆ ನಮ್ಮ ಶರೀರದ ಆರೋಗ್ಯವೂ ಹದಗೆಡುತ್ತದೆ. ಪರಿಸರವೂ ಮಲಿನಗೊಳ್ಳುತ್ತದೆ. ಅಪಾರ ಹಾನಿಕಾರಕವಾದ ಈ ಚಟ ನಮಗೆ ಅಗತ್ಯವಿದೆಯೆ?– ಯೋಚಿಸಿನೋಡಿ.

ಇನ್ನು ಕುಡಿತದಂತಹ ಚಟಕ್ಕೆ ಬಂದರೆ ನಾವು ಮಾಡುವ ಪ್ರತಿಯೊಂದು ದುಶ್ಚಟಕ್ಕೂ ಪರೋಕ್ಷವಾಗಿ, ಪ್ರತ್ಯಕ್ಷವಾಗಿ ನೋವನುಭವಿಸುವವರೆಂದರೆ ನಾವು ಮತ್ತು ನಮ್ಮ ಕುಟುಂಬ. ನಮಗೆ ಸಂಕಟ ನೀಡುವ ಚಟದ ಉಸಾಬರಿ ನಮಗೇಕೆ? ಕುಡುಕನಾದವನಿಗೆ ಸಮಾಜದಲ್ಲಿ ಮನ್ನಣೆ ಇರುತ್ತದೆಯೆ? ಅಂತಹವನು ತನ್ನ ದುಡ್ಡು– ಆರೋಗ್ಯ ಕಳೆದುಕೊಳ್ಳುವುದರೊಂದಿಗೆ 'ಕುಡುಕ ಮುಂಡೇಗಂಡ' ಎನ್ನುವ ಹೀನಾಯಕ್ಕೂ ಒಳಗಾಗಬೇಕು. ಇದೆಲ್ಲ ಪಾಡು ಯಾವ ಪುರುಷಾರ್ಥಕ್ಕೆ?!

''ಈ ಜೀವನ ನನ್ನದು. ನಾನು ಸ್ವೇಚ್ಛೆಯಿಂದ ಬದುಕಬೇಕೆಂದುಕೊಳ್ಳುತ್ತಿದ್ದೇನೆ. ನನ್ನ ಜೀವನದಲ್ಲಿ ದುಶ್ಚಟವೊಂದು ಪ್ರವೇಶಿಸಿ, ನನ್ನ ಬದುಕನ್ನು ನರಕ ಪ್ರಾಯವಾಗಿ ಮಾಡುವುದೆಂದರೇನು?'' ಎಂದು ನಿಮಗನ್ನಿಸುತ್ತದೆಯೆ? ಹಾಗನ್ನಿಸುತ್ತಿದ್ದಲ್ಲಿ ಯಾವೊಂದು ದುಶ್ಚಟಕ್ಕೂ ನಿಮ್ಮ ಬಳಿ ಸುಳಿಯುವ ಧೈರ್ಯವಾಗದು.

## ಸಮಯದ ಸದುಪಯೋಗ

ನಿರ್ಧಾರಿತ ಸಮಯದಲ್ಲಿ ಒಂದು ಸಲಕ್ಕೆ ಒಂದು ಕೆಲಸ ಮಾಡಬೇಕು ಎನ್ನುವ ಅಗತ್ಯವಿಲ್ಲದಿದ್ದರೆ, ನಾವು ಕೆಲಸವನ್ನೇ ಮಾಡಲಾರೆವು. ಒಂದು ರೀತಿಯ ಒತ್ತಡವಿದ್ದರೆ ಮನುಷ್ಯ ಮತ್ತಷ್ಟು ವೇಗವಾಗಿ, ಚುರುಕಾಗಿ ಕೆಲಸ ಮಾಡಬಲ್ಲವನಾಗುತ್ತಾನೆ. ಕೆಲಸ ಹೆಚ್ಚಾದರೆ ಗೊಂದಲಮಯವಾಗಿರುತ್ತದೆಂದೂ, ಗುಣಮಟ್ಟವು ಇಳಿದುಬಿಡುತ್ತದೆಂದೂ ಅಂದುಕೊಳ್ಳುವುದು ತುಂಬಾ ತಪ್ಪು ಅಭಿಪ್ರಾಯ.

'ಸಮಯದ ಸದುಪಯೋಗ'ವನ್ನು ಮಾಡಿಕೊಂಡರೆ ಎಲ್ಲವೂ ಸುಲಭ. ಒಲವು–ಗೆಲುವುಗಳೆರಡೂ ಒದಗಿಬರುತ್ತವಲ್ಲದೆ ಯಶಸ್ಸಿನತ್ತಲಿನ ನಮ್ಮ ನಡಿಗೆ ತಡೆಗಳೇ ಇರುವುದಿಲ್ಲ. 'ಟೈಲರ್ಸ್ ಸೈಂಟಿಫಿಕ್ ಮೆನೇಜ್‌ಮೆಂಟ್ ಆಫ್ ಟೈಮ್' ಎಂಬೊಂದು ಪುಸ್ತಕವಿದೆ. ಚಾರ್ಟರ್ಡ್ ಅಕೌಂಟೆನ್ಸಿ ಓದುವವರಿಗೆ ಪಠ್ಯದಲ್ಲಿ ಇದರ ಕೆಲ ಅಂಶಗಳು ಇರುವುದುಂಟು. ಭಾರತೀಯ ಭಾಷೆಗಳಲ್ಲಿ ಈ ಟೈಮ್ ಮೆನೇಜ್‌ಮೆಂಟ್ ಬಗ್ಗೆ ಪುಸ್ತಕಗಳು ಬಂದಿಲ್ಲವೆನಿಸುತ್ತದೆ.

'ಟೈಮ್ ಮೆನೇಜ್‌ಮೆಂಟ್' ಅಥವಾ 'ಸಮಯದ ಸದುಪಯೋಗ' ಅಷ್ಟು ಕಷ್ಟದ್ದೇನಲ್ಲ. ಪ್ರತಿಯೊಬ್ಬನೂ ತನ್ನ ಸಮಯವನ್ನು ನಿರ್ವಹಿಸುತ್ತಲೇ ಇರುತ್ತಾನೆ. ಕೆಲವರು ಸಮರ್ಥ ರೀತಿಯಲ್ಲಿ ನಿರ್ವಹಿಸಿದರೆ ಇನ್ನು ಕೆಲವರಿಗೆ ಸಮಯವನ್ನು ಈ ರೀತಿ ಹಂಚಿ, ನಿರ್ವಹಿಸಬಹುದೆನ್ನುವ ವಿಷಯವೇ ಗೊತ್ತಿರುವುದಿಲ್ಲ.

ಟೈಲರ್ ತನ್ನ 'ಸೈಂಟಿಫಿಕ್ ಮೆನೇಜ್‌ಮೆಂಟ್ ಆಫ್ ಟೈಮ್ ಆ್ಯಂಡ್ ಮೋಷನ್ಸ್ ಸ್ಟಡಿ' ಬಗ್ಗೆ ವಿವರಿಸುತ್ತ,

ಸಮಯವನ್ನು ವಿವಿಧ ಚರ್ಯೆಗಳನ್ನಾಗಿ ವಿಭಜಿಸಬೇಕೆನ್ನುತ್ತಾನೆ. ಇದು ಮನುಷ್ಯನ ಬಳಲಿಕೆಯನ್ನು ಬಹಳಷ್ಟು ವಿಧಗಳಲ್ಲಿ ಕಡಿಮೆ ಮಾಡುತ್ತದೆ. ಕುಲುಮೆಯ ಬಳಿಗೆ ಕಬ್ಬಿಣದ ತುಂಡನ್ನು ತಂದು, ಕಾಯಿಸಿ, ಒಂದು ಸುತ್ತಿಗೆ ತಂದು ಆ ತುಂಡನ್ನು ಸರಿಯಾದ ಆಕಾರಕ್ಕೆ ಹೊಡೆಯುವುದಕ್ಕಿಂತಲೂ ಕಬ್ಬಿಣದ ತುಂಡನ್ನೂ ಸುತ್ತಿಗೆಯನ್ನೂ ಒಂದೇ ಸಲಕ್ಕೆ ತಂದುಕೊಳ್ಳುವುದೆನ್ನುವುದು ಕಾರ್ಮಿಕ ಎರಡು ಸಲ ಕುಲುಮೆಯಿಂದ ಉಗ್ರಾಣಕ್ಕೆ ಹೋಗುವ ಚರ್ಯೆಯನ್ನು ಕಡಿಮೆಗೊಳಿಸುತ್ತದೆ ಎನ್ನುತ್ತಾನೆ ಟೈಲರ್. ನೂರಾರು-ಸಾವಿರಾರು ಜನ ಕಾರ್ಮಿಕರು ಕೆಲಸ ಮಾಡುವ ಫ್ಯಾಕ್ಟರಿಯಲ್ಲಿ ನಿರ್ದಿಷ್ಟವಾದ ಚರ್ಯೆಗಳನ್ನು ಜಾರಿಗೊಳಿಸುವುದರ ಮೂಲಕ ಬಹಳಷ್ಟು ಗಂಟೆಗಳನ್ನು ಉಳಿತಾಯ ಮಾಡಬಹುದೆಂದು ಈ ಅಭ್ಯಾಸ ಸಾಬೀತು ಮಾಡಿದೆ.

ದೈನಂದಿನ ಜೀವನಕ್ಕೆ ಬಂದರೆ, ಎದ್ದೊಡನೆಯೇ ಬ್ರಶ್ ಮಾಡಿಕೊಂಡು ಕಾಫಿ ಕುಡಿದು ಗೀಜರ್ ಹಾಕಿ ನೀರು ಬಿಸಿಯಾಗುವುದಕ್ಕೋಸ್ಕರ ಕಾಯುವ ಜನವೇ ಜಾಸ್ತಿ. ಎದ್ದೊಡನೆಯೇ ಗೀಜರ್ ಹಾಕಿದರೆ ಈ ಐದು ನಿಮಿಷಗಳು ವ್ಯರ್ಥವಾಗುವುದಿಲ್ಲವಲ್ಲ.

ಟೈಲರ್ ಮನೆಯಲ್ಲಿ ಅಡಿಗೆ ಮಾಡುವ ವಿಷಯದಲ್ಲೂ ಹೆಂಗಸರಿಗೆ ಅನುಕೂಲವಾಗುವ ರೀತಿಯಲ್ಲಿ ಸಮಯದ ನಿರ್ವಹಣೆಯ ಸೂತ್ರಗಳನ್ನು ಸೂಚಿಸಿದ್ದಾನೆ.

ನೋಡಲು ತುಂಬಾ ಸರಳವಾಗಿ ಕಂಡು ಬರುವ ಇಂಥ ವಿಷಯಗಳನ್ನು ನಮ್ಮ ಬದುಕಿನ ಪ್ರತಿಯೊಂದು ವಿಧಾನದಲ್ಲಿಯೂ ಸರಿಯಾಗಿ ಅಳವಡಿಸಿಕೊಂಡರೆ ನಮ್ಮ ಡಿಕ್ಷನರಿಯೊಳಗಿಂದ 'ಸಮಯ ಇಲ್ಲ' ಎನ್ನುವ ಪದ ತೊಲಗಿ ಹೋಗುತ್ತದೆ. ಅದಕ್ಕೇ ನನಗೆ ಯಾರಾದರೂ "ನಾನು ತುಂಬಾ ಬಿಜಿ" ಎಂದು ಹೇಳುವುದನ್ನು ಕೇಳಿದಾಗಲೆಲ್ಲ ನಗು ಬರುತ್ತದೆ.

ನಿಮ್ಮಲ್ಲಿ ಯಾರಾದರೂ ಯಾವಾಗಲಾದರೂ "ನಾನು ತುಂಬಾ ಬಿಜಿ" ಎಂದಂದುಕೊಳ್ಳುವ ಮುಂದಾಗಲಿ, ಯಾರೊಂದಿಗಾದರೂ ಈ ರೀತಿ ಹೇಳುವ ಮೊದಲಾಗಲಿ ಈ ಕೆಳಗಿನ ವಿಷಯಗಳನ್ನು ಪರಿಶೀಲಿಸಿಕೊಳ್ಳಿ:

೧) ನೀವು ಏತಕ್ಕಾಗಿ 'ಬಿಜಿ'ಯಾಗಿದ್ದೀರಿ?

೨) ಈ 'ಬಿಜಿ' ಇರುವಿಕೆ ನಿಮಗೆ ಯಾವ ರೀತಿಯಲ್ಲಾದರೂ ಲಾಭದಾಯಕವಾಗಿದೆಯೆ?

೩) ಈ ರೀತಿ 'ಬಿಜಿ'ಯಾಗಿರುವುದರಿಂದ, ಮತ್ತೊಂದು ಯಾವುದಾದರೂ ಮುಖ್ಯವಾದ ಕೆಲಸವನ್ನು ಮಾಡುವುದನ್ನು ಬಿಡುತ್ತಿರುವಿರಾ?

೪) ನೀವು ನಿಜವಾಗಿಯೂ 'ಬಿಜಿ'ಯಾಗಿರುವುದು ನಿಮಗೆ ಮಾನಸಿಕವಾಗಿ ತೃಪ್ತಿ ನೀಡುತ್ತಿದೆಯೆ?

೫) ಇದೇ ತೃಪ್ತಿಯನ್ನು, ನೀವು 'ಬಿಜಿ'ಯಾಗಿರದಿದ್ದರೂ ಬೇರೆ ರೀತಿ ಹೊಂದಬಲ್ಲಿರೆ?

ಸಮಯದ ಸದುಪಯೋಗ ಅಥವಾ ಸಮರ್ಥವಾದ ನಿರ್ವಹಣೆಯ ಕುರಿತು ಸರಿಯಾದ ತಿಳುವಳಿಕೆಯಿದ್ದರೆ, ವೇಳೆಯನ್ನು ಯಾವ ರೀತಿಯಲ್ಲಿ ನಿಯಂತ್ರಣದಲ್ಲಿಟ್ಟುಕೊಳ್ಳಬಹುದು ಎಂಬುದಕ್ಕೆ ಒಂದು ಉದಾಹರಣೆಯನ್ನಿಲ್ಲಿ ನೀಡಬಯಸುತ್ತೇನೆ.

ಜೀವನದ ಗುರಿ ಕೇವಲ ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದಲ್ಲ. ನಮಗಿರುವ ಅನೇಕಾನೇಕ ಗುರಿಗಳಲ್ಲಿ ಈ 'ಪರೀಕ್ಷೆಯಲ್ಲಿ ಉತ್ತೀರ್ಣನಾಗುವಿಕೆ'ಯೂ ಒಂದು. ದಿನಾಲು ಹತ್ತು ಗಂಟೆಗೆ ಮಲಗುವ ವಿದ್ಯಾರ್ಥಿಯೊಬ್ಬ ಹತ್ತೂಕಾಲು ಗಂಟೆಗೆ ಮಲಗುವುದನ್ನು ರೂಢಿಸಿಕೊಂಡರೆ ಆರು ತಿಂಗಳುಗಳಲ್ಲಿ ೪೫ ಗಂಟೆಗಳ ಸಮಯವನ್ನು ಉಳಿತಾಯ ಮಾಡಬಹುದು. ಅಂದರೆ, ಪರೀಕ್ಷೆಗೆ ಮುನ್ನ ತಿಂಗಳು ಕಾಲ ತಿಣುಕಾಡಬೇಕಾಗುವ ಕಷ್ಟವನ್ನು ಉಳಿದ ಆರು ತಿಂಗಳಿಗೆ ಹಂಚಿಕೊಂಡುಬಿಟ್ಟಂತೆ. ಇದು ಸುಲಭದ ವಿಧಾನ, ಸಾಧಿಸಲು ಸಾಧ್ಯವಾಗುವ ಸರಳ ಕ್ರಮವೂ ಹೌದು ಎಂದು ನಿಮಗನಿಸುತ್ತಿದೆಯಲ್ಲವೆ?

ಇಂಥ ಚಿಕ್ಕಪುಟ್ಟ ಅಂಶಗಳತ್ತ ನಮ್ಮ ಲಕ್ಷ್ಯವನ್ನು ಕೇಂದ್ರೀಕರಿಸಿ ಎಲ್ಲೆಲ್ಲಿ ನಮ್ಮನ್ನು ನಾವು ತಿದ್ದಿಕೊಳ್ಳಲು ಸಾಧ್ಯವಿದೆಯೋ ಅಲ್ಲಲ್ಲ ನಾವು ಸುಧಾರಿಸಿಕೊಂಡರೆ 'ಯಶಸ್ಸಿನತ್ತ ಪಯಣ'ವೇನೂ ಕಡುಕಷ್ಟವಲ್ಲ. ●



# ಮೂತ್ರಪಿಂಡ ಕಸಿ: ಏನು? ಏಕೆ?




• ಡಾ. ಶಿವಾನಂದ ಕುಬಸದ
ಸಹಾಯಕ ಶಸ್ತ್ರಚಿಕಿತ್ಸಕ,
ವೈದ್ಯಕೀಯ ವಿದ್ಯಾಲಯ ಆಸ್ಪತ್ರೆ,
ಬಳ್ಳಾರಿ-೫೮೩ ೧೦೪

# ಮೂತ್ರಪಿಂಡ ಕಸಿ; ಏಕೆ? ಹೇಗೆ?

ನಿಶ್ಶಕ್ತಿ, ದಣಿವಾಗುವುದು, ಚಿಕ್ಕಪುಟ್ಟ ಕೆಲಸಗಳಿಗೂ ಆಯಾಸವಾಗುವುದು.
ರಾತ್ರಿಯೆಲ್ಲ ಮೂತ್ರ ವಿಸರ್ಜನೆ ಮಾಡಿ ಹಗಲು ಅವೇಳೆಯಲ್ಲಿ ನಿದ್ರಿಸುವುದು.
ಕುಗ್ಗಿದ ಬುದ್ಧಿಶಕ್ತಿ, ಗಲಿಬಿಲಿ, ರಕ್ತಹೀನತೆ.
ಹಳದಿ ಅಥವಾ ಕಂದು ಬಣ್ಣಕ್ಕೆ ತಿರುಗಿದ, ಸುಕ್ಕುಗಟ್ಟಿದ, ಒಣಗಿದ ಚರ್ಮ.
ತಗ್ಗಿದ ಕೂದಲಿನ ಕಾಂತಿ, ಎದ್ರಾಬಿರ್ರಿಯಾದ ತೆಳ್ಳನೆಯ ಕೂದಲು.
ಬಿಕ್ಕು, ಉಬ್ಬಳಿಕೆ, ಹಸಿವಾಗದಿರುವುದು.
ಕುಗ್ಗಿದ ಲೈಂಗಿಕ ಶಕ್ತಿ, ಮುಟ್ಟು ನಿಲ್ಲುವುದು.
ಕೈ ಕಾಲುಗಳಲ್ಲಿ ಉರಿತ, ಬಾವು. ಕಂದು ಬಣ್ಣಕ್ಕೆ ತಿರುಗಿದ ಒಣ ನಾಲಿಗೆ.

ಇವು ವೈದ್ಯಕೀಯ ಪುಸ್ತಕಗಳಲ್ಲಿ ಸಿಗುವ ಎಲ್ಲಾ ರೋಗಲಕ್ಷಣಗಳ ಸಮಗ್ರಪಟ್ಟಿಯಂತೆ ತೋರಿದರೂ ದೇಹದ ಎರಡು ಮಹತ್ತರ ಅಂಗಗಳಾದ ಮೂತ್ರಪಿಂಡಗಳು ಅಂತಿಮ ಹಂತದ ರೋಗಕ್ಕೊಳಗಾದಾಗ ರೋಗಿ ಅನುಭವಿಸುವ ಕಷ್ಟಗಳ ಸರಮಾಲೆಯ ಒಂದು ಭಾಗ ಮಾತ್ರ. ಸಣ್ಣಗೆ ಪ್ರಾರಂಭವಾಗುವ ಈ ರೋಗ ತನ್ನ ಪರಾಕಾಷ್ಠೆಯಲ್ಲಿ ಹಲವು ಹನ್ನೆರಡು ಕಿರಿಕಿರಿಗಳನ್ನು ಕೊಡುತ್ತ ಕೊನೆಗೊಮ್ಮೆ ರೋಗಿಯ ಜ್ಞಾನ ತಪ್ಪಿಸಿ ಸಾವಿಗೆ ಕಾರಣವಾಗುತ್ತದೆ.

ಕೇವಲ ೪೦ ವರ್ಷಗಳ ಮೊದಲು ಈ ರೋಗಿಗಳಿಗೆ ಆಹಾರದಲ್ಲಿ ಒಂದಿಷ್ಟು ಬದಲಾವಣೆ ಮಾಡಿ, ನೀರು, ಲವಣಗಳ ಸೇವನೆಯನ್ನು ಬಯಸಿದ ರೀತಿಯಲ್ಲಿ ನಿಯಂತ್ರಿಸಿ, ಮಿಕ್ಕಿದಾಗ ಆತ ಸಾಯುವುದನ್ನು ತೆಪ್ಪಗೆ ನೋಡುತ್ತ ಕೂಡುವುದರ ಹೊರತು ಬೇರೆ ಉಪಾಯವೇ ಇರಲಿಲ್ಲ. ಅನಂತರ ಸಂಶೋಧಿಸಲ್ಪಟ್ಟ ಡಯಾಲಿಸಿಸ್‌ನಿಂದಾಗಿ ರೋಗಿಗಳ ಬಾಳು ಸಹನೀಯವಾಯಿತಾದರೂ ಸ್ವತಂತ್ರವಾಗಿರಲಿಲ್ಲ. ಇಂಥ ಕತ್ತಲಲ್ಲೆ ತಡಕಾಡುತ್ತಿರುವಾಗ ಛಲಬಿಡದ ವೈದ್ಯವಿಜ್ಞಾನಿಗಳ ಅವಿರತ ಶ್ರಮದಿಂದ, ಪ್ರಯೋಗ ಶೀಲತೆಯಿಂದ, ಕಾರ್ಮೋಡಗಳ ಮಧ್ಯೆ ಮಿಂಚೊಂದು ಕೋರೈಸಿ ಕತ್ತಲನ್ನು ಸೀಳಿ ದಾರಿ ಕಂಡಂತೆ, ಆವಿಷ್ಕಾರಗೊಂಡಿತು "ಮೂತ್ರ ಪಿಂಡ ಕಸಿ" ಎಂಬ ಶಸ್ತ್ರಚಿಕಿತ್ಸಾ ವಿಧಾನ. ಇದರಿಂದ ಮೂತ್ರಪಿಂಡರೋಗಿಗಳಿಗೆ ಆಯುರ್ದಾನ! ಮತ್ತೆ ತಿರುಗಿ ನೋಡುವ ಅವಶ್ಯಕತೆಯೆ ಬೀಳಲಿಲ್ಲ. ನಂತರದ ದಿನಗಳಲ್ಲಿ ಇನ್ನಷ್ಟು ಶೋಧನೆಗಳು; ಇದ್ದುದನ್ನು ಉತ್ಕೃಷ್ಟಗೊಳಿಸುವುದು ನಡೆದೇ ಇದೆ, ನಿರಂತರವಾಗಿ.

ಅಂತಿಮ ಹಂತದ ಮೂತ್ರಪಿಂಡ ರೋಗ (End Stage Renal Disease) ತಿರುಗಿ ಗುಣವಾಗದ ಮೂತ್ರ ಪಿಂಡನಾಳ ನಿಷ್ಕ್ರಿಯತೆಯನ್ನು ವಿಶಾಲ ಅರ್ಥದಲ್ಲಿ ಅಂತಿಮ ಹಂತದ ಮೂತ್ರಪಿಂಡ ರೋಗ ಎಂದು ಕರೆಯಲಾಗುತ್ತದೆ. ಅನೇಕ ರೋಗಗಳು ಇದಕ್ಕೆ ಪೂರ್ವಭಾವಿಯಾಗಿ ಕಾಡುತ್ತವೆ. ವೈದ್ಯಕೀಯವಾಗಿ ಕ್ರಾನಿಕ್ ರೀನಲ್ ಫೇಲ್ಯೂರ್ (Chromic Renal Failure) ಎಂದು ಕರೆಸಿಕೊಳ್ಳುವ ಈ ಸ್ಥಿತಿಗೆ ಮುಖ್ಯ ಕಾರಣಗಳೆಂದರೆ ಕ್ರಾನಿಕ್ ಪೈಲೊನೆಫ್ರೈಟಿಸ್, ಕ್ರಾನಿಕ್ ಗ್ಲೊಮೆರುಲೊ ನೆಫ್ರೈಟಿಸ್, ಕ್ರಾನಿಕ್ ಆಬ್‌ಸ್ಟ್ರಕ್ಟಿವ್ ರೀನಲ್ ಡಿಸೀಜ್, ಪಾಲಿಸಿಸ್ಟಿಕ್ ಕಿಡ್ನಿ, ಅನಾಲ್ಜೆಸಿಕ್ ನೆಫ್ರೊಪಥಿ, ಮಧುಮೇಹ, ಅತಿ

ರಕ್ತದೊತ್ತಡ ಇತ್ಯಾದಿಗಳು. ಈ ರೋಗಗಳ ಅಂತಿಮ ಪರಿಣಾಮವೆಂದರೆ ಎರಡೂ ಮೂತ್ರಪಿಂಡಗಳೂ ನಿಧಾನವಾಗಿ ತಮ್ಮ ಕಾರ್ಯವನ್ನು ಕುಂಠಿತಗೊಳಿಸಿ ಕೊನೆಗೆ ಸಂಪೂರ್ಣ ಸ್ಥಗಿತಗೊಳ್ಳುತ್ತವೆ. ಇದರ ಪರಿಣಾಮವಾಗಿ ರಕ್ತದಲ್ಲಿ ಚಯಾಪಚಯ (Metabolism)ದ ಉತ್ಪತ್ತಿಗಳಾದ ಪಪಾರಿಯ, ಕ್ರಿಯಾಟಿನಿನ್, ಆಮ್ಲಗಳು ಹೆಚ್ಚುತ್ತಾ ಹೋಗಿ ಇನ್ನಿತರ ಅಂಗಗಳಾದ ಪಚನಾಂಗ ವ್ಯೂಹ, ನರಮಂಡಲ, ಸ್ನಾಯುಗಳು ಮುಂತಾದವುಗಳ ಕಾರ್ಯಗಳಲ್ಲೂ ವ್ಯತ್ಯಯವನ್ನುಂಟುಮಾಡುತ್ತವೆ. ಸರಿಯಾದ ಉಪ ಚಾರ ಸಿಗದಿದ್ದರೆ ಸಾವು ನಿಶ್ಚಿತ.

ಈ ಸಂದರ್ಭಗಳಲ್ಲಿ ಮೂತ್ರಪಿಂಡಗಳು ತಮ್ಮ ಕಾರ್ಯವನ್ನು ಪುನಃ ಪ್ರಾರಂಭಿಸುವ ಸಾಧ್ಯತೆಗಳೇ ಇಲ್ಲದಿರುವುದರಿಂದ ಕೃತ್ರಿಮವಾಗಿ ತ್ಯಾಜ್ಯ ಪದಾರ್ಥಗಳನ್ನು ರಕ್ತದಿಂದ ಶೋಧಿಸಿ ತೆಗೆಯಬೇಕಾಗುತ್ತದೆ ಇಲ್ಲವೆ ಕಿಡ್ನಿ ಕಸಿ ಅನಿವಾರ್ಯವಾಗುತ್ತದೆ.

ಅಕ್ಯೂಟ್ ರೀನಲ್ ಫೇಲ್ಯುರ್ (Acute Renal Failure) ಎಂಬ ಇನ್ನೊಂದು ಮೂತ್ರಪಿಂಡ ನಿಷ್ಕ್ರಿಯತೆಯ ಧಿಡೀರನೆ ರಕ್ತದೊತ್ತಡ ಇಳಿಯುವ ಸಂದರ್ಭಗಳಿಂದ (ವಾಂತಿಭೇದಿ, ಹೆರಿಗೆಯ ರಕ್ತಸ್ರಾವ, ಶಸ್ತ್ರ ಚಿಕಿತ್ಸೆಯಲ್ಲಿ ರಕ್ತಸ್ರಾವ ಇತ್ಯಾದಿ) ಡಯಾಬಿಟಿಕ್ ಕಿಟೊ ಅಸಿಡೋಸಿಸ್‌ದಿಂದ, ಎರಡೂ ಮೂತ್ರನಾಳಗಳು ಯಾವುದೇ ಕಾರಣದಿಂದ ಕಟ್ಟಿಕೊಂಡಾಗ ಕಾಣುವ ಒಂದು ತಾತ್ಕಾಲಿಕ ಅಡೆತಡೆ. ಕ್ರಮೇಣ ಮೂತ್ರಪಿಂಡಗಳಲ್ಲಿ ನೆಫ್ರಾನ್‌ಗಳು ಬೆಳವಣಿಗೆ ಹೊಂದಿ ಕೆಲಸ ಮತ್ತೆ ಪ್ರಾರಂಭವಾಗುತ್ತದೆ. ಅಲ್ಲಿಯವರೆಗೆ ಡಯಾಲಿಸಿಸ್ ಮಾಡಿದರೆ ಸಾಕು.

## ಇತಿಹಾಸ

ಮೂತ್ರಪಿಂಡ ಕಸಿ ಇತ್ತೀಚೆಗೆ ಹಲವು ವಿವಾದಾತ್ಮಕ ಕಾರಣಗಳಿಗಾಗಿ ಸುದ್ದಿ ಮಾಡಿದ್ದರೂ ಅದು ನಿಜವಾದ ಅರ್ಥದಲ್ಲಿ ಸುದ್ದಿ ಮಾಡಿದ್ದು ಕಿಸ್ತಶಕ ೧೯೦೨ರಲ್ಲಿ ಎಮ್‌ರಿಕ್ ಯುಲ್‌ಮನ್ ಎಂಬಾತ ಮೊದಲ ಪ್ರಾಯೋಗಿಕ ಕಿಡ್ನಿ ಕಸಿ ಮಾಡಿದಾಗ ಮತ್ತು ಕ್ರಿಸ್ತಶಕ ೧೯೦೬ರಲ್ಲಿ ಜಬೋಲೇ ಎಂಬಾತ ಮೊದಲ ಮಾನವ ಕಿಡ್ನಿ ಕಸಿಮಾಡಿದಾಗ. ಮಾನವ ಸ್ವಭಾವತಃ ಹೊಸಜ್ಞಾನವನ್ನು ಪಡೆಯಲು ತವಕಿಸುವ ಪ್ರವೃತ್ತಿಯನ್ನು, ನಿಸರ್ಗದ ಸೃಷ್ಟಿಗೆ ಪ್ರತಿಸೃಷ್ಟಿಯನ್ನು ಮಾಡುವ ವಿಶ್ವಾಮಿತ್ರ ಛಲವನ್ನು, ನಿಸರ್ಗದ ಆಹ್ವಾನಗಳನ್ನು ಅಡೆತಡೆಗಳನ್ನು ತುಂಬು ಹೃದಯದಿಂದ ಸ್ವೀಕರಿಸುತ್ತ ಅವುಗಳನ್ನೆದುರಿಸುವ ತಾಕತ್ತನ್ನು ಸಂಪಾದಿಸಿಕೊಂಡವ. ಅನೇಕ ಬಾರಿ ಸೋತರೂ ಗೆದ್ದದ್ದೇ ಜಾಸ್ತಿ. ಅಂಥ ಫಲಪ್ರದ ಪ್ರಯತ್ನಗಳಲ್ಲಿ ಅಂಗಕಸಿಯೂ ಒಂದು.

ಅಂಗಕಸಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಗಣೇಶನನ್ನು ಗಜಮುಖನನ್ನಾಗಿಸಿದ ಮಹೇಶ್ವರನನ್ನು ಭಾರತದ ಮೊದಲ ಅಂಗಕಸಿ ತಜ್ಞನೆನ್ನಬಹುದು. ಕೇವಲ ಕಥೆಯೆನಿಸಿದರೂ ಆ ಕಲ್ಪನೆ ಮಾನವನ ಮಹತ್ತರ ಆಸೆಗಳ, ವೈಜ್ಞಾನಿಕ ಸಾಧ್ಯತೆಗಳ ಪ್ರತೀಕ. ಐತಿಹಾಸಿಕವಾಗಿ ಕಿಸ್ತಪೂರ್ವ ೧೫೦೦ ರಷ್ಟು ಹಿಂದೆಯೇ ಚರ್ಮ ಕಸಿ ಮಾಡಿದ ಉಲ್ಲೇಖಗಳಿವೆ. ಕಿಸ್ತಪೂರ್ವ ೭೦೦ರಲ್ಲಿ ರಚಿತವಾದ ಸುಶ್ರುತ ಸಂಹಿತೆಯಲ್ಲಿ ಪೃಷ್ಠಭಾಗದ ಚರ್ಮದಿಂದ ಮೂಗು, ಕಿವಿಗಳನ್ನು ಪುನಾರಚಿಸುವ ಪದ್ಧತಿಗಳನ್ನು ವಿವರಿಸಲಾಗಿದೆ. (ಪ್ಲಾಸ್ಟಿಕ್ ಸರ್ಜರಿ ಆಮದು ಗೊಂಡದ್ದೆಂದು ನಾವು ಭಾವಿಸುತ್ತೇವೆ!) ಕಣ್ಣಿನ ಪಾರದರ್ಶಕ ಪರದೆ ಹಾಗೂ ಮೂಳೆ ಕಸಿಯನ್ನು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಅಭಿವೃದ್ಧಿಪಡಿಸಲಾಯಿತು. ಆದರೂ "ಇಡಿಯಾದ ಅಂಗಕಸಿ"ಯನ್ನು ಸಾಕಾರಗೊಳಿಸಲು ಕ್ರಿಸ್ತಶಕ ೧೯೧೦ ರವರೆಗೂ




ಮೂತ್ರಜನಕಾಂಗ ವ್ಯೂಹ (ಇತರ ಅಂಗಗಳೊಂದಿಗೆ)

ಕಾಯಬೇಕಾಯಿತು. ಅಲೆಕ್ಸಿಸ್ ಕ್ಯಾರೆಲ್ ಎಂಬ ಫ್ರೆಂಚ್ ವೈದ್ಯ ರಕ್ತನಾಳಗಳ ಜೋಡಣೆಯ ಬಗೆಗಿನ ತನ್ನ ಪ್ರಯೋಗಗಳನ್ನು ೧೯೦೪ ರಿಂದ ೧೯೧೦ರವರೆಗೆ ಕೈಗೊಂಡು, ನಾಳ ಜೋಡಣೆಯ ಹೊಸ ವಿಧಾನವನ್ನು ರೂಪಿಸಿ ಕ್ರಿಸ್ತಶಕ ೧೯೧೦ರಲ್ಲಿ ಹೃದಯ, ಪುಪ್ಫುಸ, ಮೂತ್ರಪಿಂಡಗಳ ಕಸಿಯನ್ನು ಪ್ರಾಣಿಗಳಲ್ಲಿ ಯಶಸ್ವಿಯಾಗಿ ನಿರ್ವಹಿಸಿದ. ಆದಕ್ಕಾಗಿ ಕ್ರಿಸ್ತಶಕ ೧೯೧೨ರಲ್ಲಿ ನೋಬೆಲ್ ಪ್ರಶಸ್ತಿಯನ್ನೂ ಪಡೆದ! ಆದರೆ ಸಂಗ್ರಾಮ ಮುಗಿಯಲಿಲ್ಲ. ಪ್ರತಿಯೊಬ್ಬ ಮನುಷ್ಯನ ಉಳಿಯುವಿಕೆಗೆ, ರೋಗ ಪ್ರತಿಬಂಧಕ್ಕೆ ಅವಶ್ಯವಾದ ರಕ್ಷಣಾ ವ್ಯವಸ್ಥೆ (Immnnity) ಕಸಿ ಮಾಡಲ್ಪಟ್ಟ "ತನ್ನದಲ್ಲದ" ಈ ಅಂಗಗಳ ವಿರುದ್ಧ ಯುದ್ಧವನ್ನೇ ಸಾರಿ ಕೆಲವೇ ದಿನಗಳಲ್ಲಿ ಅದನ್ನೂ ಕೊಂದೂ ಬಿಡುತ್ತಿತ್ತು. ಕ್ರಿಸ್ತಶಕ ೧೯೪೦ ರಿಂದ

೧೯೫೦ರವರೆಗಿನ ಅವಧಿಯಲ್ಲಿ ಹಲವಾರು ಪ್ರಯೋಗಗಳನ್ನು ಕೈಕೊಂಡ ಮೆಡಾವರ್ ಎಂಬ ವಿಜ್ಞಾನಿಯು ಹಲವಾರು ಔಷಧಿಗಳಿಂದ ಕಸಿಮಾಡಿದ ಅಂಗಗಳು ಪಡೆದಾತನ ದೇಹದಿಂದ ತಿರಸ್ಕರಿಸಲ್ಪಡದಂತೆ ಮಾಡುವುದು ಸಾಧ್ಯವೆಂದು ತೋರಿಸಿದ. ರಕ್ಷಣಾ ವ್ಯವಸ್ಥೆಯನ್ನು ಪ್ರತಿಬಂಧಿಸುವ ಇಲ್ಲವೆ ಕುಗ್ಗಿಸುವ ಈ ಔಷಧಿ (Immuno Suppressants)ಗಳ ಸಂಶೋಧನೆ ಕ್ರಿಸ್ತಶಕ ೧೯೬೦ರಲ್ಲಿ ಫಲಕಾರಿಯಾಗಿ ಅಲ್ಲಿಂದೀಚೆಗೆ ಅಂಗಕಸಿ, ಅದರಲ್ಲೂ ಪ್ರಮುಖವಾಗಿ ಮೂತ್ರಪಿಂಡ ಕಸಿ, ಅನಾಯಾಸವಾದ, ಸರಳ ಶಸ್ತ್ರಚಿಕಿತ್ಸೆಯಾಗಿ ಪರಿಣಮಿಸಿತು. ಕ್ರಿಸ್ತಶಕ ೧೯೭೦ರಲ್ಲಿ ಬಳಕೆಗೆ ಬಂದ ಸೈಕ್ಲೋಸ್ಪೋರಿನ್ ಅಂತೂ ಕ್ರಾಂತಿಯನ್ನೇ ಮಾಡಿತು. ಹಲವು ದಿನಗಳ ಕಲ್ಪನೆ ನಿಜವಾಯಿತು! ಶಸ್ತ್ರಚಿಕಿತ್ಸೆಯಲ್ಲಿನ ಇತ್ತೀಚಿನ ಯಾವ ಆವಿಷ್ಕಾರವೂ ಸಾರ್ವಜನಿಕರ ಆಸಕ್ತಿಯನ್ನು ಇಷ್ಟೊಂದು ಪ್ರಮಾಣದಲ್ಲಿ ಕೆರಳಿಸಿದ್ದಿರಲಿಲ್ಲ. ಇತ್ತೀಚಿನ ಇಪ್ಪತ್ತು ವರ್ಷಗಳಲ್ಲಿ ಶೋಧಗೊಂಡ ಇನ್ನಿತರ ಔಷಧಿಗಳು, ಅಂಗಗಳು ಕೆಡದಂತೆ ಕಾಯ್ದಿಡುವ ವಿಧಾನಗಳು, ಶಸ್ತ್ರಚಿಕಿತ್ಸಾ ಅನುಭವಗಳು, ತಾಂತ್ರಿಕ ಸೌಲಭ್ಯಗಳು ಮೂತ್ರಪಿಂಡ ಕಸಿಯನ್ನು ಇನ್ನಷ್ಟು ಜನಪ್ರಿಯಗೊಳಿಸಿದವು.

## ಮೂತ್ರಪಿಂಡ ಕಸಿ

ಉಳಿದೆಲ್ಲ ಅಂಗಗಳಿಗಿಂತಲೂ ಮೂತ್ರಪಿಂಡ ಕಸಿ ಜನಪ್ರಿಯವಾದದ್ದು ಅದರಲ್ಲಿನ ಹಲವಾರು ವೈಶಿಷ್ಟತೆಗಳಿಂದ.

ಯಕೃತ್ತು, ಹೃದಯ, ಮೇದೋಜೀರಕಗ್ರಂಥಿ ಇತ್ಯಾದಿ ಅಂಗಗಳು ಒಂಟಿ ಅಂಗಗಳಾ




ಮೂತ್ರಪಿಂಡದ ಸೀಳುನೋಟ

ಗಿದ್ದು ಅವುಗಳನ್ನು ಪಡೆಯಲು ಜೀವಂತ ಮಾನವರನ್ನು ಬಳಸುವುದು ಅಸಾಧ್ಯ. ಆಕಸ್ಮಾತ್ ಸಾಯಲಿರುವ ಅಥವಾ ಸಾವು ನಿರ್ಧಾರವಾದ ಮಾನವನಿಂದ ಪಡೆಯುವುದಿದ್ದರೂ ಸರಿಯಾದ ಕ್ಷಣದಲ್ಲಿ ಅದನ್ನು ದಾನಿಯಿಂದ ಬೇರ್ಪಡಿಸಿ ರೋಗಿಗೆ ಜೋಡಿಸುವುದು ಕಷ್ಟಕರವಾದುದು. ಯಾಕೆಂದರೆ ಕಸಿಗೆ ಪೂರ್ವಭಾವಿಯಾಗಿ ಅನೇಕ ಪರೀಕ್ಷೆಗಳು ಪ್ರಯೋಗಗಳ ಅವಶ್ಯಕತೆ ಇರುವುದಲ್ಲದೆ ಕಸಿಗೆ ಅವಶ್ಯವಾದ ಪರಿಕರಗಳು ಎಲ್ಲಾ ವೇಳೆಯಲ್ಲೂ ಎಲ್ಲಾ ಸ್ಥಳಗಳಲ್ಲೂ ಸಿಗುವುದು ಅಸಾಧ್ಯ. ಆದರೆ ಮೂತ್ರಪಿಂಡಗಳು ಜೋಡಿ ಅಂಗಗಳಾಗಿದ್ದು ಆರೋಗ್ಯವಂತ ಮನುಷ್ಯರಿಂದ ಒಂದನ್ನು ತೆಗೆದರೂ ಇನ್ನೊಂದು ಮೂತ್ರಪಿಂಡ ಗಾತ್ರದಲ್ಲಿ ದೊಡ್ಡದಾಗಿ ಎರಡರ ಕೆಲಸವನ್ನೂ ಮಾಡಲು ಶಕ್ತವಾಗುತ್ತದೆ. ಅಲ್ಲದೆ ಅದನ್ನು ರೋಗಿಗೆ ಜೋಡಿಸುವ ಶಸ್ತ್ರಕ್ರಿಯೆಯೂ ಸುಲಭ.

ಅಂತಿಮ ಹಂತದ ಮೂತ್ರಪಿಂಡ ರೋಗಿಗಳ ಭವಿಷ್ಯದ ಆಶಾಕಿರಣಗಳೆಂದರೆ ಡಯಾಲಿಸಿಸ್ ಮತ್ತು ಮೂತ್ರಪಿಂಡ ಕಸಿಮಾತ್ರ. ಡಯಾಲಿಸಿಸ್ ಮಾಡಿ ರೋಗಿಯ ದೇಹದಲ್ಲಿನ ಕಲ್ಮಶಗಳನ್ನು ತೆಗೆದು ಹಾಕಿ "ರಕ್ತ ಶುದ್ಧೀಕರಣ" ಮಾಡುವುದು ಸಾಧ್ಯವಿದ್ದರೂ ಅದು ರೋಗಿಯ ಸ್ವಾತಂತ್ರ್ಯವನ್ನು ಕಸಿದುಕೊಂಡು ಬಿಡುತ್ತದೆ. ಜಾಮೀನಿನ ಮೇಲೆ ಬಿಟ್ಟ ಅಪರಾಧಿಯಂತೆ ರೋಗಿಯ ಸ್ಥಿತಿ. ಕಾಲಕಾಲಕ್ಕೆ ರೋಗಿ ಆಸ್ಪತ್ರೆಗೆ ಬರುವುದು ಅನಿವಾರ್ಯವಾಗುತ್ತದೆ. ಡಯಾಲಿಸಿಸ್ ಯಂತ್ರ ಆತನ ಸಾರ್ವಕಾಲಿಕ ಸಹವರ್ತಿಯಾಗಿ, ಅವನ ರೋಗದ ಭಯಾನಕತೆಯನ್ನು, ಅದಿಲ್ಲದೇ ಇವ ಬದುಕಲಾರ ಎಂಬ ಅಪ್ರಿಯ ಸತ್ಯವನ್ನು ಆಗಾಗ್ಗೆ ನೆನಪಿಸುವ ನಕ್ಷತ್ರಿಕನೂ ಆಗುವ ವಿಪರ್ಯಾಸ ಎದುರಾಗುತ್ತದೆ. ಅಂಥ ಯಂತ್ರಗಳು ತಮ್ಮದ್ದೇ ಆದ ಪ್ರತಿಕೂಲ ಪರಿಣಾಮಗಳನ್ನು ತರುವ ಸಾಧ್ಯತೆಗಳು ಇಲ್ಲದಿಲ್ಲ. ಅಲ್ಲದೇ ಎಲ್ಲಾ ಮೂತ್ರಪಿಂಡ ರೋಗಿಗಳಿಗೆ ಡಯಾಲಿಸಿಸ್ ಯಂತ್ರ ಒದಗಿಸುವುದು ಆರ್ಥಿಕವಾಗಿ, ವ್ಯಾವಹಾರಿಕವಾಗಿ ಸಾಧ್ಯವೂ ಅಲ್ಲ, ಸಾಧುವೂ ಅಲ್ಲ. ಇದಲ್ಲದೆ ಗುಣವಾಗದ ಮೂತ್ರಪಿಂಡ ರೋಗಗಳಾದ ಕ್ರಾನಿಕ್ ಗ್ಲೋಮೆರುಲೊನೆಫ್ರೈಟಿಸ್, ನೆಫ್ರೋಸ್ಕ್ಲೀರೋಸಿಸ್ ಪಾಲಿಸಿಸ್ಟಿಕ್ ಕಿಡ್ನಿ ಇತ್ಯಾದಿ ರೋಗಗಳು ಸಾಮಾನ್ಯವಾಗಿ ೧೬ ರಿಂದ ೪೦ ವರ್ಷ ವಯಸ್ಸಿನವರಲ್ಲಿ ಕಾಣಿಸುತ್ತಿದ್ದು ಮೂತ್ರಪಿಂಡ ಕಸಿ ಅಂಥವರಿಗೆ ಆರೋಗ್ಯವಂತ ಬದುಕು ನೀಡುವ ಹಾಗೂ ಅಕಾಲಿಕ ಮರಣಗಳನ್ನು ತಪ್ಪಿಸುವ ಮಾರ್ಗವಾಗಿದೆ.

ಆದರೂ ಎರಡು ಮಹತ್ವದ ಸಂಗತಿಗಳು ಮೂತ್ರಪಿಂಡ ಕಸಿಯನ್ನು ವ್ಯಾಪಕವಾಗಿ ಕೈಗೊಳ್ಳುವುದಕ್ಕೆ ಅಡೆತಡೆಗಳಾಗಿವೆ.

ಮೊದಲನೆಯದಾಗಿ ಸ್ವೀಕೃತನ ದೇಹದ ರಕ್ಷಣಾ ಕ್ರಿಯೆಯಿಂದಾಗಿ ಕಸಿ ಮಾಡುವ ಅಂಗ ತಿರಸ್ಕೃತಗೊಳ್ಳುವುದು. 'ತನ್ನನ್ನು' ಹಾಗೂ 'ತನ್ನದಲ್ಲದು'ದನ್ನು ಗುರುತಿಸುವಿಕೆಯೆಂಬುದು ಪ್ರತಿಯೊಂದು ಜೀವಿಗೂ ಪ್ರಕೃತಿ ದಯಪಾಲಿಸಿದ ಒಂದು ಉತ್ತಮ ಅಸ್ತ್ರ. ಈ ಕ್ರಿಯೆಯ ಇರುವಿಕೆಯಿಂದಾಗಿಯೇ ದೇಹದೊಳಗೆ ಪ್ರವೇಶಿಸಿದ ರೋಗಾಣುಗಳು ಕೊಲ್ಲಲ್ಪಡುತ್ತವೆ. ಹೊಂದದ ರಕ್ತ ವಿಷವಾಗುತ್ತದೆ. ಕಸಿಮಾಡಿದ ಕಿಡ್ನಿ ತನ್ನದಲ್ಲವೆಂದು ಗುರುತಿಸಿದ ಶರೀರ, ಅದರ ವಿರುದ್ಧ ಮಹಾಸಮರವನ್ನೇ ಸಾರಿ ಅದನ್ನು ಕೊಂದುಬಿಡುತ್ತದೆ. ತಿರಸ್ಕರಿಸುವ ಈ ಕ್ರಿಯೆಯನ್ನು ತಡೆಯಲು ಇರುವ ಸಾಧನಗಳೆಂದರೆ, ರೋಗಿಯ ಶರೀರದ ಆಂತರಿಕ ಪರಿಸರಕ್ಕೆ ಅತ್ಯಂತ ಹೊಂದಿಕೆಯಾಗುವ ಮೂತ್ರಪಿಂಡವನ್ನು ಜೋಡಿಸುವುದು ಮತ್ತು ಸ್ವೀಕೃತನ ರಕ್ಷಣಾ ಬಲವನ್ನು ತಗ್ಗಿಸುವ ಔಷಧಿಗಳನ್ನು ನೀಡುವುದು. ಎ.ಬಿ.ಓ. ರಕ್ತ ಗುಂಪು ಹೊಂದಾಣಿಕೆ ಮತ್ತು ಋಣ ಶ್ವೇತ ರಕ್ತಗೋಲಕ ಪ್ರತಿಹೊಂದಾಣಿಕೆ ಎಂಬ ಎರಡು ಸಂಗತಿಗಳು ಅತ್ಯಂತ ಅವಶ್ಯಕ. ಈ ಪರೀಕ್ಷೆಗಳಿಂದ ಹೊಂದಾಣಿಕೆ ಅಸಾಧ್ಯ

ಎಂದು ಗೊತ್ತಾದರೆ ಕಸಿಯನ್ನು ಮಾಡಲಾಗುವುದಿಲ್ಲ. ಇವೆರಡೂ ಸಾಧ್ಯವೆಂದು ಗೊತ್ತಾದಾಗ, ರೋಗಿಯ ಹಾಗೂ ದಾನಿಯ ಇನ್ನಿತರ ಪರೀಕ್ಷೆಗಳನ್ನು ಮುಂದುವರಿಸಲಾಗುತ್ತದೆ. ಕಸಿಮಾಡಿದ ನಂತರ ರಕ್ಷಣಾ ಬಲವನ್ನು ತಗ್ಗಿಸುವ ಔಷಧಿಗಳನ್ನು ನೀಡಬೇಕಾಗುತ್ತದೆ.

ಎರಡನೆಯದಾಗಿ ಬೇಡಿಕೆ ಹಾಗೂ ಲಭ್ಯತೆಗಳ ನಡುವಿನ ಅಂತರ. ಯಾವುದೇ ನಿರ್ದಿಷ್ಟ ಸಮಯದಲ್ಲೂ ಬೇಡಿಕೆ ಲಭ್ಯತೆಗಿಂತ ಹೆಚ್ಚಾಗಿಯೇ ಇದೆ. ಕಸಿಗಾಗಿ ಕಾದಿರುವ ಅನೇಕ ರೋಗಿಗಳಿಗೆ ಮೂತ್ರಪಿಂಡ ಕೊನೆಗೂ ಸಿಗದಂಥ ಪರಿಸ್ಥಿತಿಯೂ ಇಲ್ಲದಿಲ್ಲ, ಇದಕ್ಕೆ ಸಾಮಾಜಿಕ, ಆರ್ಥಿಕ, ಸೌಲಭ್ಯಗಳಿಲ್ಲದಿರುವುದು ಅಲ್ಲದೆ ಕಾನೂನಿನ ತೊಡಕೂ ಕಾರಣವಾಗಿದೆ. ಅದಕ್ಕಾಗಿ ಸಾಮಾಜಿಕ ತಿಳುವಳಿಕೆ, ಜನಜಾಗ್ರತಿ, ಜೀವಚ್ಛವಗಳಿಂದ ಮೂತ್ರಪಿಂಡ ಪಡೆಯುವುದು ಮುಂತಾದವುಗಳ ಅವಶ್ಯಕತೆ ಇದೆ.

## ಕಸಿ ಯಾರಿಗೆ?

ಯಾವುದೇ ಕಾರಣಕ್ಕಾಗಿ ಎರಡೂ ಮೂತ್ರಪಿಂಡಗಳ ಕಾರ್ಯ ಶಾಶ್ವತವಾಗಿ ಸ್ಥಗಿತಗೊಂಡ ಯಾವುದೇ ರೋಗಿಗೂ ಮೂತ್ರಪಿಂಡ ಕಸಿ ಅಗತ್ಯ. ಆದರೆ ಕಸಿ ಮಾಡುವ ಮೊದಲು ರೋಗಿಯ ಸ್ಥಿತಿಗೂ ಕಸಿಯ ಸಾಧಕ ಬಾಧಕಗಳಿಗೂ ಗಮನವೀಯುವುದು ಅವಶ್ಯವಾಗಿರುತ್ತದೆ. ಅತ್ಯಂತ ಆದರ್ಶ ಗ್ರಾಹಕನೆಂದರೆ ಉಳಿದೆಲ್ಲ ರೀತಿಯಿಂದಲೂ ಆರೋಗ್ಯವಂತನಾದ, ಬರೀ ಮೂತ್ರಪಿಂಡ ರೋಗಮಾತ್ರ ಇರುವ ದೃಢ ಯುವಕ (ಯುವತಿ)! ಆದರೆ ರೋಗ ಮತ್ತು ರೋಗಿಯ ಸ್ಥಿತಿಯನ್ನು ಗಮನಿಸುವಾಗ ಪರಿಣಾಮಗಳು ಒಂದಿಷ್ಟು ಕಡಿಮೆದರ್ಜೆಯದಾಗಬಹುದಾದರೂ ಆದರ್ಶದ ಸಡಿಲಿಕೆ ಅವಶ್ಯವಾಗುತ್ತದೆ. ಯಾಕೆಂದರೆ ಹಲವು ಹೊಂದಾಣಿಕೆಗಳ ಸಂಗಮವೇ ಜೀವನ!

ಮೂತ್ರಪಿಂಡ ಕಸಿ ಅತಿ ಅವಶ್ಯಕವೆನಿಸುವ ರೋಗಗಳೆಂದರೆ ಕ್ರಾನಿಕ್ ಗ್ಲೊಮೆರುಲೊ ನೆಫ್ರೈಟಿಸ್ (ಶೇಕಡಾ ೫೪) ಕ್ರಾನಿಕ್ ಪೈಲೊ ನೆಫ್ರೈಟಿಸ್ (ಶೇಕಡಾ ೧೨) ಪಾಲಿಸಿಸ್ಟಿಕ್ ಕಿಡ್ನಿ (ಶೇಕಡಾ ೫) ಮ್ಯಾಲಿಗ್ನಂಟ್ ನೆಫ್ರೊಸ್ಕ್ಲಿರೋಸಿಸ್ (ಶೇಕಡಾ ೬) ಇತರ ರೋಗಗಳು ಹಾಗೂ ಅನುವಂಶಿಕ ಕಾರಣಗಳು (ಶೇಕಡಾ ೨೩).

ಸೋಂಕು ರೋಗದ ಇರುವಿಕೆ, ಗುಣವಾಗದ ಏಡಿಗಂತಿ ಇದ್ದ ರೋಗಿಗಳಿಗೆ ಕಿಡ್ನಿ ಕಸಿ ಸುತರಾಂ ಸಲ್ಲ. ಯಾಕೆಂದರೆ ನಂತರ ಕೊಡುವ ಔಷಧಿಗಳಿಂದ ರೋಗದ ಉಲ್ಬಣತೆ ಹಾಗೂ ಏಡಿಂಗಂತಿಯ ಹಿಡಿತಮೀರಿದ ಬೆಳವಣಿಗೆ ಮರಣಾಂತಿಕವಾಗಿ "ಶಸ್ತ ಚಿಕಿತ್ಸೆ ಫಲಪ್ರದ; ಆದರೆ ರೋಗಿ ಮರಣಿಸಿದ" ಎಂಬ ವಿಪರ್ಯಾಸಕ್ಕೆ ಎಡೆಮಾಡುತ್ತವೆ! ಸರಿಯಾದ ಪ್ರಮಾಣ ಹಾಗೂ ಸಮಯದಲ್ಲಿ ಔಷಧಿಗಳನ್ನು ತೆಗೆದುಕೊಳ್ಳದಿರುವ ರೋಗಿಗಳು ಕಸಿಗೆ ಸೂಕ್ತರಲ್ಲ, ಯಾಕೆಂದರೆ ಒಮ್ಮೆ ಕಸಿ ಎಂದರೆ ಜೀವನ ಪರ್ಯಂತ ಔಷಧಿ ಸೇವನೆ ಎಂದರ್ಥ.

ವೃದ್ಧರು (೬೫ ವರ್ಷಕ್ಕೂ ಮೇಲ್ಪಟ್ಟವರು), ಉಲ್ಬಣಗೊಂಡ ಹೃದಯ ರೋಗಿಗಳು, ರಕ್ತನಾಳ ರೋಗಿಗಳು ಹಾಗೆ ನೋಡಿದರೆ ಕಸಿಗೆ ಅಯೋಗ್ಯರೆನಿಸಿದರೂ ಮೂತ್ರಪಿಂಡಗಳು ಸುಲಭವಾಗಿ ದೊರೆಯುವಂತಿದ್ದರೆ, ಸೌಲಭ್ಯಗಳು ಇದ್ದರೆ, ಕಸಿ ಮಾಡುವುದೇ ಒಳಿತು. ಇವರ ಹೃದಯರೋಗಗಳನ್ನು ನಿಯಂತ್ರಣದಲ್ಲಿರಿಸಿ ಬಾಳುವ ಒಂದೆರಡು ವರ್ಷಗಳನ್ನಾದರೂ ಡಯಾಲಿಸಿಸ್‌ನ ಪಾರತಂತ್ರ್ಯದಿಂದ ಮುಕ್ತಗೊಳಿಸಿ ಅವರಿಗೆ ನೆಮ್ಮದಿಯ ಸ್ವತಂತ್ರ ಜೀವನ ನೀಡಬಹುದು.

## ದಾನಿಗಳು ಯಾರು?

ಮೂತ್ರಪಿಂಡ ದಾನಿಗಳನ್ನು ಪ್ರಮುಖವಾಗಿ ಎರಡು ಪ್ರಕಾರಗಳಲ್ಲಿ ಗುರುತಿಸಲಾಗುತ್ತದೆ. ಮೊದಲನೆಯದಾಗಿ, ಮಿದುಳಿನ ಗಡ್ಡೆ, ಅಪಘಾತ ಉತ್ಯಾದಿಗಳಿಂದ ಮಿದುಳು ನಿಷ್ಕ್ರಿಯವಾಗಿದ್ದು, ಮಿದುಳಿನ ಸಾವನ್ನು ಘೋಷಿಸಲಾದ, ತಿರುಗಿ ಜೀವಂತವಾಗುವುದು ಅಸಾಧ್ಯವಾದ (Coma) ಜೀವಚ್ಛವಗಳಿಂದ ಎರಡೂ ಮೂತ್ರಪಿಂಡಗಳನ್ನು ಪಡೆದು ಇಬ್ಬರಿಗೆ ಆಯುರ್ದಾನ ನೀಡುವುದು. ಇದು ಅತ್ಯಂತ ಸೂಕ್ತ ಎಂದು ಮೇಲ್ನೋಟಕ್ಕೆ ತೋರಿದರೂ ವಾಸ್ತವವಾಗಿ ಜಾರಿಗೆ ತರುವುದು ಅತ್ಯಂತ ಕಠಿಣ. ಭಾರತದಂಥ ಭಾವನಾತ್ಮಕ ಜನರಿಂದ ಕೂಡಿದ, ತಾಂತ್ರಿಕವಾಗಿ ಹಿಂದುಳಿದ ದೇಶದಲ್ಲಂತೂ ಇನ್ನೂ ಕಷ್ಟ. ಸಕಲ ಸೌಲಭ್ಯಗಳಿಂದ ಕೂಡಿದ ಆಸ್ಪತ್ರೆಗಳಿಲ್ಲದಿರುವುದು, ಅಪಘಾತದ ಸ್ಥಳದಲ್ಲಿ ಮಿದುಳಿನ ಸಾವು ಸಂಭವಿಸಿದ ರೋಗಿಗಳನ್ನು ಸರಿಯಾಗಿ ಆರೈಕೆ ಮಾಡಲು ತರಬೇತಾದ ಜನ ಇಲ್ಲದಿರುವುದು, ಶೀಘ್ರ ಸಾರಿಗೆ- ಸಂಪರ್ಕಗಳ ಅಲಭ್ಯ ಇವೆಲ್ಲ ತೊಡಕುಗಳಿಂದಾಗಿ ಭಾರತದಲ್ಲಿ ಸದ್ಯಕ್ಕಂತೂ ಇದು ಅಪ್ರಾಯೋಗಿಕ ಅಪ್ರಯೋಜಕ ವಿಧಾನ.

ಇವೆಲ್ಲ ಇದ್ದರೂ ಮಿದುಳಿನ ಸಾವನ್ನು ನಿರ್ಧರಿಸುವುದಕ್ಕೆ ಕಸಿಗೆ ಸಂಬಂಧಪಡದ ಇಬ್ಬರು ನರರೋಗ ತಜ್ಞರ ಅಭಿಪ್ರಾಯ ಅಗತ್ಯ. ಆದರೆ ಆ ಅಭಿಪ್ರಾಯ ಮಾನವ ದೌರ್ಬಲ್ಯಗಳಿಂದ, ವಿವಾದಗಳಿಂದ ಹೊರತಾಗಿರುವುದು ವಿರಳ. ಮಿದುಳಿನ ಸಾವನ್ನು ನಿರ್ಧರಿಸಲು ಅಗಲಗೊಂಡ, ಬೆಳಕಿಗೆ ಪ್ರತಿಕ್ರಿಯಿಸದ ಕಣ್ಣಿನ ಪಾಪೆ, ಶರೀರದ ಇನ್ನಿತರ ಪ್ರತಿಕ್ರಿಯೆಗಳಿಲ್ಲದೆ ಇರುವುದು, ಉಸಿರಾಟದ ಯಂತ್ರದಿಂದ ರೋಗಿಯನ್ನು ಪ್ರತ್ಯೇಕಿಸಿದಾಗ ಉಸಿರಾಟವಿಲ್ಲದೆ ಇರುವುದು, ಮಿದುಳಿನ ವಿದ್ಯುತ್ ಕ್ರಿಯಾಸೂಚಿ (EEG) ಇಲ್ಲದಂತಾಗುವುದು ಮುಂತಾದವುಗಳನ್ನು ಪರಿಗಣಿಸಲಾಗುತ್ತದೆ. ಹನ್ನೆರಡು ಗಂಟೆಗಳ ಅವಧಿಯಲ್ಲಿ ಎರಡು ಬಾರಿ ಈ ರೀತಿ ಪರೀಕ್ಷಿಸಿ ಸಾವನ್ನು ಘೋಷಿಸಲಾಗುತ್ತದೆ. ಇದಾದ ಮೇಲೆ ಸಂಬಂಧಿಕರಿಂದ ಲಿಖಿತ ಅನುಮತಿ ಪಡೆದು, ರಕ್ತಪರೀಕ್ಷೆ ಇತ್ಯಾದಿಗಳನ್ನು ಪೂರೈಸಿ ಮೂತ್ರಪಿಂಡಗಳನ್ನು ತೆಗೆದುಕೊಳ್ಳಲಾಗುತ್ತದೆ. ಇದೇ ಅವಧಿಯಲ್ಲಿ ಸರಿ ಹೊಂದುವ ಮೂತ್ರಪಿಂಡರೋಗಿಯನ್ನು ಸಂಪರ್ಕಿಸಿ ಶಸ್ತ್ರಕ್ರಿಯೆಗೆ ಸಿದ್ಧಗೊಳಿಸಲಾಗುತ್ತದೆ. ಆದರೂ ಸಧ್ಯಕ್ಕೆ ಭಾರತದಲ್ಲಿ ಈ ರೀತಿಯ ಕಸಿ ವ್ಯಾಪಕವಾಗಿಲ್ಲ.

ಎರಡನೆಯದಾಗಿ ಜೀವಂತ, ನಿರೋಗಿ, ಪ್ರಾಯದ ವ್ಯಕ್ತಿಗಳಿಂದ ಮೂತ್ರ ಪಿಂಡ ಪಡೆಯುವುದು. ಇದು ಸಧ್ಯಕ್ಕೆ ಭಾರತದಲ್ಲಿ ಅತ್ಯಂತ ವ್ಯಾಪಕವಾಗಿ ಬಳಕೆಯಲ್ಲಿರುವ ವಿಧಾನ. ಮೂತ್ರಪಿಂಡ ದಾನ ನೀಡಲು ಅತ್ಯಂತ ಆದರ್ಶ ವ್ಯಕ್ತಿಯೆಂದರೆ ರೋಗಿಯ ಅವಳಿ ಮಾತ್ರ. (ಲವನಿಗೆ ಕುಶ; ಕುಶನಿಗೆ ಲವ!) ಆದರೆ ಎಲ್ಲಾ ಮೂತ್ರಪಿಂಡ ರೋಗಿಗಳು ಅವಳಿ ಹೊಂದಿರುವಷ್ಟು ಭಾಗ್ಯಶಾಲಿಗಳಾಗಿರುವುದಿಲ್ಲವಾದ್ದರಿಂದ ಬಹಳಷ್ಟು ಬಾರಿ ರಕ್ತ ಸಂಬಂಧಿಗಳಿಂದಲೇ ಪಡೆಯಲಾಗುತ್ತದೆ. ಅಂಗ ಹೊಂದಾಣಿಕೆ ಪರೀಕ್ಷೆಗಳಿಗನುಸಾರವಾಗಿ ಹೆತ್ತವರು, ಒಡಹುಟ್ಟಿದವರು ಹಾಗೂ ಮಕ್ಕಳಿಂದ ಪಡೆದ ಮೂತ್ರಪಿಂಡಗಳು ಹೆಚ್ಚಿನ ಪ್ರಮಾಣದಲ್ಲಿ ಹೊಂದಿಕೆಯಾಗುತ್ತವೆ. ವೈದ್ಯಕೀಯವಾಗಿ ಹಾಗೂ ಕಾನೂನು ರೀತ್ಯ ಗಂಡ-ಹೆಂಡತಿಯರನ್ನು "ರಕ್ತಸಂಬಂಧಿ"ಗಳೆಂದು ಗುರುತಿಸಲಾಗುವುದಿಲ್ಲ. ಯಾಕೆಂದರೆ ಇವರಲ್ಲಿ ಅಂಗಾಂಶ ಹೊಂದಾಣಿಕೆ ಸಾಧ್ಯವಾಗದಿರಬಹುದು ಅಲ್ಲದೆ ಈ ಸಂಬಂಧಗಳು ಪರಿಸ್ಥಿತಿಯ ಒತ್ತಡದಿಂದ ಹಾಗೂ ದುಡ್ಡಿನಾಸೆಗೆ ಆಗುವ ಸಾಧ್ಯತೆಗಳಿಲ್ಲದಿಲ್ಲ (ಈ ಕಡೆ ಕಸಿ; ಆ ಕಡೆ ವಿಚ್ಛೇದನ!) ಆದರೂ ಆರೋಗ್ಯವಂತ, ರಕ್ತ ಹೊಂದಾಣಿಕೆಯಾಗುವ

ಸಂಬಂಧಿಗಳಿಲ್ಲದ ಸಂದರ್ಭಗಳಲ್ಲಿ (ಅಥವಾ ದುಡ್ಡಿದ್ದ ದೊಡ್ಡಪ್ಪಗಳು ತಮ್ಮ ಸಂಬಂಧಿಗಳ ಕಿಡ್ನಿಗಳನ್ನುಳಿಸಿ ಬೇರೆಯವರ ಕಿಡ್ನಿ ಕೊಳ್ಳುವ ಸಂದರ್ಭಗಳಲ್ಲಿ) ರಕ್ತ ಸಂಬಂಧಿಗಳಲ್ಲದವರಿಂದ ಕೂಡ ಮೂತ್ರಪಿಂಡ ಪಡೆಯಲಾಗುತ್ತದೆ.

ಮಕ್ಕಳು,ತೀರಾ ವಯಸ್ಸಾದವರು ಹಾಗೂ ಬುದ್ಧಿ ಮಾಂದ್ಯರಿಂದ ಮೂತ್ರಪಿಂಡ ಪಡೆಯಲಾಗುವುದಿಲ್ಲ.

## ರೋಗಿಯ ಪರೀಕ್ಷೆ ಹಾಗೂ ಶಸ್ತ್ರ ಕ್ರಿಯಾ ಸಿದ್ಧತೆ

ಮೂತ್ರಪಿಂಡ ಕಸಿಗೆ ಒಳಪಡುವ ಮೊದಲು ರೋಗಿಯನ್ನು ಸಮಗ್ರ ಪರೀಕ್ಷೆಗೆ ಒಳಪಡಿಸಿ ಶಸ್ತ್ರಚಿಕಿತ್ಸೆಗೆ ಸಿದ್ಧಗೊಳಿಸಬೇಕಾಗುತ್ತದೆ.

ರೋಗಿಯ ಸಂಪೂರ್ಣ ಶಾರೀರಿಕ ವೈದ್ಯಕೀಯ ಪರೀಕ್ಷೆ, ಸಂಪೂರ್ಣ ರಕ್ತ ಪರೀಕ್ಷೆ, ಮೂತ್ರ ಪೃಥಃಕ್ಕರಣ, ಮೂತ್ರದಲ್ಲಿರಬಹುದಾದ ರೋಗಾಣು ಕೃಷಿ, ರಕ್ತಸಾರದ ಲವಣಾಂಶ ಪರೀಕ್ಷೆ, ಕ್ರಿಯಾಟಿನಿನ್ ಕ್ಲಿಯರನ್ಸ್ ಪರೀಕ್ಷೆ, ಏಡ್ಸ್ ಮತ್ತು ಹೈಪಟೈಟಿಸ್ 'ಬಿ' ಗಳಿಗಾಗಿ



ಮೂತ್ರಪಿಂಡದ ಶಸ್ತ್ರಕ್ರಿಯೆಯ ಸಂದರ್ಭ

ಪರೀಕ್ಷೆ, ಪ್ಯಾರಾಥೈರಾಯ್ಡ್ ಗ್ರಂಥಿಗಳ ಅಧ್ಯಯನ, ಎದೆಯ ಕ್ಷ ಕಿರಣ, ಇ.ಸಿ.ಜಿ., ಮೂತ್ರ ಮಾರ್ಗ ಪರೀಕ್ಷೆ, ಜಠರ ಹುಣ್ಣಿಗಾಗಿ ಪರೀಕ್ಷೆ ಇತ್ಯಾದಿಗಳನ್ನು ಮಾಡುವುದು ಅತ್ಯವಶ್ಯ. ಇದಲ್ಲದೆ ಮಾನಸಿಕ ದೃಢತೆಗಾಗಿ ಕೂಡ ಪರೀಕ್ಷಿಸಲಾಗುತ್ತದೆ.

ಬ್ರಾಂಕಿಮೆಕ್ಟಾಸಿಸ್ ಮತ್ತು ಪುಪ್ಪುಸ ಕ್ಷಯರೋಗಗಳು ಕಂಡು ಬಂದರೆ ಪೂರ್ವಭಾವಿಯಾಗಿ ಶಸ್ತ್ರ ಚಿಕಿತ್ಸೆ ಇಲ್ಲವೆ ಸಮರ್ಪಕ ಔಷಧಿಗಳಿಂದ ಗುಣಪಡಿಸಲಾಗುತ್ತದೆ. ಹಲ್ಲುಗಳ ರೋಗಗಳನ್ನೂ, ಶರೀರದಲ್ಲಿ ಇರಬಹುದಾದ ಇನ್ನಾವುದೇ ರೀತಿಯ ಸೋಂಕುಗಳನ್ನೂ ನಿವಾರಿಸಲಾಗುತ್ತದೆ. ಮೂತ್ರಮಾರ್ಗದಲ್ಲಿ ಅಡೆತಡೆಗಳಿದ್ದರೆ ಶಸ್ತ್ರ ಚಿಕಿತ್ಸೆಯ ಮುಖಾಂತರ ದುರಸ್ತಿ ಮಾಡಲಾಗುತ್ತದೆ. ಜಠರ ಹುಣ್ಣು ಕಂಡುಬಂದರೆ ಅದರ ತೀವ್ರತೆಗನುಸಾರವಾಗಿ ವೈದ್ಯಕೀಯ ಅಥವಾ ಶಸ್ತ್ರಚಿಕಿತ್ಸೆ ಮಾಡಲಾಗುತ್ತದೆ. ಈಗಾಗಲೇ ನಿಷ್ಕ್ರಿಯಗೊಂಡ ಮೂತ್ರಪಿಂಡಗಳನ್ನು ಸಾಮಾನ್ಯವಾಗಿ (ಶೇಕಡಾ ೮೫) ತೆಗೆದು ಹಾಕುವುದಿಲ್ಲ. ಯಾಕೆಂದರೆ ಮೂತ್ರಪಿಂಡಗಳು ಮೂತ್ರ ತಯಾರಿಸುವುದಲ್ಲದೆ ಇನ್ನೂ ಅನೇಕ ಕಾರ್ಯಗಳನ್ನೂ ನಿರ್ವಹಿಸುತ್ತವೆ. (ಬಾಕ್ಸ್ ನೋಡಿ) ಆದರೆ ಮೂತ್ರ ಕಲ್ಲುಗಳು ಮೂತ್ರ ಮಾರ್ಗತಡೆ ಇತ್ಯಾದಿಗಳಿಂದಾಗಿ ಸೋಂಕು ಮರುಕಳಿಸುವ ಸಾಧ್ಯತೆಗಳಿದ್ದಾಗ, ತಹಬಂದಿಗೆ ಬಾರದ ರಕ್ತದೊತ್ತಡ, ಮೂತ್ರಪಿಂಡ ಗಡ್ಡೆಗಳಿದ್ದಾಗ, ರಕ್ತಸ್ರಾವ ಹೊಂದಿದ ದೊಡ್ಡ ಪಾಲಿಸಿಸ್ಟಿಕ್ ಕಿಡ್ನಿಗಳಿದ್ದಾಗ ಪೂರ್ವಭಾವಿಯಾಗಿ ಮೂತ್ರ ಪಿಂಡಗಳನ್ನು ತೆಗೆದುಹಾಕಲಾಗುತ್ತದೆ. (ಶೇಕಡಾ ೧೫)

ಕೆಲವೊಂದು ಕೇಂದ್ರಗಳಲ್ಲಿ ಪೂರ್ವಭಾವಿಯಾಗಿ ದಾನಿಯ ರಕ್ತವನ್ನು ರೋಗಿಗೆ ಹಾಕಲಾಗುತ್ತದೆ, ಇದರಿಂದಾಗಿ ಕಸಿಯ ನಂತರ ಆಗುವ ರಕ್ಷಣಾ ಪ್ರತಿಕ್ರಿಯೆಗಳ ತೀವ್ರತೆ ಕಡಿಮೆ ಇರುವುದಾಗಿ ಕಂಡುಬಂದಿದೆ.

ರೋಗಿಯ ರಕ್ತದಲ್ಲಿರುವ ಯೂರಿಯಾ ಮುಂತಾದ ವಿಷಯುಕ್ತ ಘಟಕಗಳನ್ನು ಕಡಿಮೆಮಾಡಿ, ದೇಹದ ಜಲ-ಲವಣ-ಆಮ್ಲ-ಕ್ಷಾರ ಅಂಶಗಳನ್ನು ಸಾಮಾನ್ಯ ಸ್ಥಿತಿಯಲ್ಲಿಡಲು ಕಸಿಗಿಂತ ಮೊದಲು ಡಯಾಲಿಸಿಸ್ ಮಾಡಲಾಗುತ್ತದೆ.

## ದಾನಿಯ ಪರೀಕ್ಷೆ ಮತ್ತು ತಯಾರಿ

ಈ ಮೊದಲೇ ವಿವರಿಸಿದಂತೆ ರಕ್ತಸಂಬಂಧಿಗಳಿಂದ ಪಡೆದ ಮೂತ್ರಪಿಂಡಗಳು ಕಸಿಗೆ ಅತ್ಯಂತ ಸೂಕ್ತ. ಯಾಕೆಂದರೆ ಕಸಿನಂತರದ ತಿರಸ್ಕರಿಸಲ್ಪಡುವ ಸಾಧ್ಯತೆಗಳು ಕಡಿಮೆಯಾಗಿರುತ್ತವೆ. ಆದರೂ ಹಲವಾರು ಕಾರಣಗಳಿಂದಾಗಿ ರಕ್ತಸಂಬಂಧಿಗಳಲ್ಲದವರಿಂದ ಮೂತ್ರಪಿಂಡ ಪಡೆಯುವ ಪ್ರಕರಣಗಳೇ ಹೆಚ್ಚು.

ಇಂಥ ಸಂದರ್ಭಗಳಲ್ಲಿ ೧೮ ರಿಂದ ೫೫ ವರ್ಷದೊಳಗಿನ ಆರೋಗ್ಯವಂತ ಸ್ತ್ರೀ ಅಥವಾ ಪುರುಷರಿಗೆ ಆದ್ಯತೆ ನೀಡಲಾಗುತ್ತದೆ. ಮೊಟ್ಟಮೊದಲನೆಯದಾಗಿ ರೋಗಿಯ ಹಾಗೂ ದಾನಿಯ ರಕ್ತದ ಗುಂಪಿನ ಹೊಂದಾಣಿಕೆಯನ್ನು ಪರೀಕ್ಷಿಸಲಾಗುತ್ತದೆ. ಹೊಂದಾಣಿಕೆ ಇದ್ದಾಗ ಮಾತ್ರ ಮುಂದಿನ ಪ್ರಕ್ರಿಯೆಗಳು ಪ್ರಾರಂಭ.

ಯಾವುದೇ ವ್ಯಕ್ತಿ ಮೂತ್ರಪಿಂಡ ದಾನಮಾಡಬೇಕೆಂದು ಬಯಸಿದಾಗ ಅವನು ಸಹಜವಾಗಿ ಎರಡು ಆರೋಗ್ಯವಂತ ಮೂತ್ರಪಿಂಡಗಳನ್ನು ಹೊಂದಿರುವುದವಶ್ಯ. ದಾನಿಯ ಸಾಮಾನ್ಯ ಆರೋಗ್ಯ ಪರೀಕ್ಷೆ, ರಕ್ತ ಪರೀಕ್ಷೆ, ಸೋಂಕು ರೋಗಗಳಿಗಾಗಿ ಪರೀಕ್ಷೆ, ಎದೆಯ ಕ್ಷಕಿರಣ, ಮೂತ್ರ ಪಿಂಡಗಳ ಕಾರ್ಯನಿರ್ವಹಣೆಯ ಮಾಹಿತಿಗಾಗಿ ಮಾಡಲಾಗುವ ಇಂಟ್ರಾವೀನಸ್ ಯುರೋಗ್ರಾಮ್ (I.V.U.), ರಕ್ತಸಾರದ ಕ್ರಿಯಾಟಿನಿನ್, ಕ್ಲಿಯರೆನ್ಸ್

ರಕ್ತದಲ್ಲಿಯ ಯೂರಿಯಾ ಪ್ರಮಾಣ, ಕ್ರಿಯಾಟಿನಿನ್ ಕ್ಲಿಯರೆನ್ಸ್ ಮುಂತಾದವುಗಳು ಅತ್ಯವಶ್ಯ. ದಾನಿಯಿಂದ ರೋಗಿಗೆ ಹರಡಬಹುದಾದ ಏಡ್ಸ್, ಹೆಪಟೈಸ್-'ಬಿ'ಗಳಿಗಾಗಿಯೂ ಪರೀಕ್ಷಿಸಲಾಗುತ್ತದೆ. ಇವೆಲ್ಲ ಪರೀಕ್ಷೆಯಲ್ಲೂ ಉತ್ತಮ ಫಲಿತಾಂಶ ಕಂಡುಬಂದಾಗ ಆರ್ಟೆರಿಯೊಗ್ರಫಿ ಮಾಡಲಾಗುತ್ತದೆ. (ಈ ಪರೀಕ್ಷೆಯಿಂದಾಗಿ ಮೂತ್ರ ಪಿಂಡಕ್ಕೆ ಬರುವ ರಕ್ತನಾಳಗಳ ಸಂಖ್ಯೆ ಹಾಗೂ ರಚನೆಯನ್ನು ಗುರುತಿಸಬಹುದು. ಎರಡೂ ಮೂತ್ರಪಿಂಡಗಳು ಸಮಾನವಾಗಿ ಕಾರ್ಯನಿರ್ವಹಿಸುತ್ತಿದ್ದರೆ, ಕಡಿಮೆ ರಕ್ತನಾಳಗಳನ್ನು ಹೊಂದಿದ್ದನ್ನು ತೆಗೆದುಕೊಳ್ಳಲಾಗುತ್ತದೆ. ಯಾಕೆಂದರೆ ರಕ್ತನಾಳ ಜೋಡಣೆ ಸುಲಭವಾಗುತ್ತದೆ.)

ಇದೆಲ್ಲದರ ಮೇಲೆ ದಾನಿಯ ಮಾನಸಿಕ ದೃಢತೆ, ಹಾಗೂ ಆರೋಗ್ಯದ ಬಗ್ಗೆ ಮಾನಸಿಕ ತಜ್ಞರಿಂದ ಪರೀಕ್ಷೆ ಮಾಡಲಾಗುತ್ತದೆ. ಮಾನಸಿಕವಾಗಿ ಅಸ್ವಸ್ಥರಾದವರಿಂದ ಮೂತ್ರಪಿಂಡ ಪಡೆಯುವುದಿಲ್ಲ.

## ಕಸಿ ವಿಧಾನ

ರೋಗಿಯ ಹಾಗೂ ದಾನಿಯ ಎಲ್ಲ ಪರೀಕ್ಷೆಗಳಿಂದ ಇಬ್ಬರೂ ಅರ್ಹರೆಂದು ಕಂಡ ನಂತರವೇ ಮುಂದಿನ ಕ್ರಿಯೆಗಳು ಪ್ರಾರಂಭ. ದಾನಿಯ ಹಾಗೂ ರೋಗಿಯ ಅಂಗಾಂಶಗಳನ್ನು ಒಟ್ಟಿಗೆ ಕೃಷಿ ಮಾಡಿ ದಾನಿಯ ಅಂಗಾಂಶದ 'ವಿರುದ್ಧ ಪ್ರತಿಜೀವಿ (ಆ್ಯಂಟಿಬಾಡಿ) ತಯಾರಾಗಿರದಿದ್ದರೆ ಮಾತ್ರ ಅಂತಿಮ ಹೊಂದಾಣಿಕೆಯನ್ನು ತೀರ್ಮಾನಿಸಲಾಗುತ್ತದೆ. ಅದಾದ ಮೇಲೆಯೇ ದಾನಿಯನ್ನು ಶಸ್ತ್ರಚಿಕಿತ್ಸೆಗೆ ಸಜ್ಜುಗೊಳಿಸಲಾಗುತ್ತದೆ. ದಾನಿಗೆ ಸಂಪೂರ್ಣ ಅರಿವಳಿಕೆ ನೀಡಿ ಪಕ್ಕೆಲುಬಿನ ಕೆಳಗೆ ಮಾಡುವ ಶಸ್ತ್ರಗಾಯದ ಮುಖಾಂತರ (ಚಿತ್ರ ೩) ಮೂತ್ರಪಿಂಡವನ್ನು ಅದರ ರಕ್ತನಾಳಗಳು ಹಾಗೂ ಮೂತ್ರನಾಳದ ಜೊತೆಗೆ ತೆಗೆಯಲಾಗುತ್ತದೆ. ತಕ್ಷಣ ಅದನ್ನು ೪ ಡಿಗ್ರಿ ಸೆಂಟಿಗ್ರೇಡ್ ಶೀತದ ವಿಶೇಷ ದ್ರಾವಣದಲ್ಲಿ ಮುಳುಗಿಸಿ, ಸೋಡಿಯಂ, ಪೊಟ್ಯಾಸಿಯಂ, ಕ್ಯಾಲ್ಸಿಯಂ ಮುಂತಾದ ಲವಣಗಳನ್ನೊಳಗೊಂಡ ೪ ಡಿಗ್ರಿ ಸೆಂಟಿಗ್ರೇಡ್‌ದ ದ್ರಾವಣವನ್ನು ಸೈಕ್ಲರ್ಸ್ ಎಂಬ ವಿಶೇಷ ಉಪಕರಣದ ಸಹಾಯದಿಂದ ಅಪಧಮನಿಯ ಮೂಲಕ ಹಾಯಿಸಲಾಗುತ್ತದೆ. ಈ ದ್ರಾವಣವು ರಕ್ತ ಪರಿಚಲನೆಯಂತೆಯೇ ಮೂತ್ರಪಿಂಡದಲ್ಲಿ ಲೋಮನಾಳಗಳ ಮುಖಾಂತರ ಹಾಯ್ದು ಅಭಿಧಮನಿಯ ಮುಖಾಂತರ ಹೊರಬರುತ್ತದೆ. ಮೂತ್ರಪಿಂಡದ ಜೀವಕೋಶಗಳು ಸ್ವನಾಶ (Autolysis)ಹೊಂದದಿರಲು ಈ ದ್ರಾವಣದ ನಿರಂತರ ಚಲನೆ ಅಗತ್ಯ. ರೋಗಿಗೆ ಮೂತ್ರಪಿಂಡವನ್ನು ಅಳವಡಿಸುವವರೆಗೂ 'ಸೈಕ್ಲರ್'ನ ಚಾಲನೆ ನಿಲ್ಲುವಂತಿಲ್ಲ. ಈ ರೀತಿ ನಿರಂತರ ಉಪಚಾರವನ್ನು ಪಡೆಯುವ ಮೂತ್ರಪಿಂಡ ಯಾವ ಜೀವಕೋಶ ಹಾನಿಯಿಲ್ಲದೆ ೪೮ ರಿಂದ ೭೨ ಗಂಟೆಗಳವರೆಗೆ ಜೀವಂತವಾಗಿರಬಲ್ಲದು. ಈ ಅವಧಿಯಲ್ಲಿ ರೋಗಿಯನ್ನು ಸಿದ್ಧಗೊಳಿಸಲಿಕ್ಕೆ ಅಥವಾ ಮೂತ್ರಪಿಂಡವನ್ನು ರೋಗಿಯಿದ್ದೆಡೆ ಸಾಗಿಸಲು ಸಮಯಾವಕಾಶ ದೊರೆಯುತ್ತದೆ. ಆದರೂ ಸಾಮಾನ್ಯವಾಗಿ ಗ್ರಾಹಕ ಹಾಗೂ ದಾನಿಯ ಶಸ್ತ್ರಚಿಕಿತ್ಸೆ ಸಮಾನಾಂತರವಾಗಿಯೇ ನಡೆಯುತ್ತವೆ. ಯಾಕೆಂದರೆ ದ್ರಾವಣದ ವೆಚ್ಚವನ್ನು ತಗ್ಗಿಸಬಹುದು. ಹೇಗೆ ನೋಡಿದರೂ ಆದೇ ತೆಗೆದ ಅಂಗ ಉತ್ಕೃಷ್ಟವೇ.

ಇದೇ ವೇಳೆಗೆ ಇನ್ನೊಂದು ತಂಡ ಈ ಮೊದಲೆ ಡಯಾಲಿಸಿಸ್ ಮಾಡಿ ಸಜ್ಜುಗೊಳಿಸಿದ ಮೂತ್ರಪಿಂಡ ಪಡೆಯುವ ರೋಗಿಯ ಮೇಲೆ ಶಸ್ತ್ರ ಚಿಕಿತ್ಸೆಯನ್ನು ಪ್ರಾರಂಭಿಸಿರುತ್ತದೆ. ಬೆನ್ನು ಹುರಿಯಲ್ಲಿ ನೀಡುವ ಚುಚ್ಚುಮದ್ದಿನ ಮುಖಾಂತರ ರೋಗಿಯ ಕೆಳ ಅರ್ಧ ಭಾಗವನ್ನು ಅರಿವಳಿಕೆಗೊಳಪಡಿಸಲಾಗುತ್ತದೆ (Spinal Anesthesia)

ಅನಂತರ ಹೊಕ್ಕಳು ಕೆಳಗೆ ಒಂದು ಬದಿಯಲ್ಲಿ ಮಾಡುವ ಶಸ್ತ್ರಗಾಯದ ಮುಖಾಂತರ (ಚಿತ್ರ-೪) ಮೂತ್ರ ಪಿಂಡವನ್ನು ಕಿಬ್ಬೊಟ್ಟೆಯ ಭಾಗದೊಳಗೆ ಅಪಧಮನಿ ಹಾಗೂ ಅಭಿಧಮನಿಗಳನ್ನು ಜೋಡಿಸಿ ಹೊಲಿಯಲಾಗುತ್ತದೆ. ಮೂತ್ರನಾಳವನ್ನು ರೋಗಿಯ ಮೂತ್ರನಾಳಕ್ಕೆ ಅಥವಾ ಮೂತ್ರಕೋಶಕ್ಕೆ ಜೋಡಿಸಲಾಗುತ್ತದೆ. ರಕ್ತನಾಳ ಹಾಗೂ ಮೂತ್ರನಾಳ ಸರಿಯಾಗಿ ಹೊಂದುವುದಕ್ಕೋಸ್ಕರ ದಾನಿಯ ಎಡ ಕಿಡ್ನಿಯನ್ನು ರೋಗಿಯ ಬಲಭಾಗಕ್ಕೂ ಬಲ ಕಿಡ್ನಿಯನ್ನು ಎಡಕ್ಕೂ ಜೋಡಿಸಲಾಗುತ್ತದೆ.

ರಕ್ಷಣಾ ಪ್ರತಿಬಂಧಕ ಔಷಧಿ (Immuno Suppressants)ಗಳಾದ ಸೈಕ್ಲೊಸ್ಪೊರಿನ್, ಅಝುಥೈಯೋಪ್ರಿನ್, ಪ್ರಿಡ್ನಿ ಸಲೋನ್‌ಗಳನ್ನು ಶಸ್ತ್ರಚಿಕಿತ್ಸೆಗಿಂತಲೂ ಮೂರುದಿನ ಮೊದಲು ಪ್ರಾರಂಭಿಸಿ ಕಸಿಯ ನಂತರ ಎರಡು ವಾರಗಳವರೆಗೆ ಮುಂದುವರಿಸಲಾಗುತ್ತದೆ. ಆದರೆ ಸೈಕ್ಲೊಸ್ಪೊರಿನ್ನನ್ನು ಜೀವನ ಪರ್ಯಂತ ತೆಗೆದುಕೊಳ್ಳಬೇಕಾಗುತ್ತದೆ. ಅಂದರೆ ಮಾತ್ರ ಮೂತ್ರಪಿಂಡ ತಿರಸ್ಕೃತಗೊಳ್ಳುವುದನ್ನು ತಪ್ಪಿಸಬಹುದು.

ದಾನಿಗಳನ್ನು ಸಾಮಾನ್ಯವಾಗಿ ೮-೧೦ ದಿನಗಳವರೆಗೆ ಆಸ್ಪತ್ರೆಯಲ್ಲಿಡಲಾಗುತ್ತದೆ. ಮುಂದಿನ ಒಂದು ತಿಂಗಳು ವಿಶ್ರಾಂತಿ ಹಾಗೂ ಇದ್ದ ಒಂದೇ ಮೂತ್ರಪಿಂಡವನ್ನು ಆರೋಗ್ಯವಾಗಿಡಲು ಅವಶ್ಯವಾದ ಸಲಹೆಗಳನ್ನು ನೀಡಲಾಗುತ್ತದೆ. ಕಾಲಕಾಲಕ್ಕೆ ವೈದ್ಯಕೀಯ ಪರೀಕ್ಷೆಯ ಅವಶ್ಯಕತೆಯೂ ಇರುತ್ತದೆ.

ಇನ್ನು ಮೂತ್ರಪಿಂಡ ಕಸಿಗೆ ಅನಾವಶ್ಯಕ ಪ್ರಚಾರ, ಮಹತ್ವ ನೀಡಲಾಗುತ್ತದೆ. ಯಾಕೆಂದರೆ ಅದು ಜನಸಾಮಾನ್ಯರ ಚಿಕಿತ್ಸೆ ಆಗಿರುವುದು ಸಾಧ್ಯವಿಲ್ಲ ಎಂಬ ಟೀಕಾಕಾರರ ಹಲವು ಪ್ರಶ್ನೆಗಳೆಂದರೆ ಇದು ದುಡ್ಡಿದ್ದವರ ಚಿಕಿತ್ಸೆಯೆ? ಅಥವಾ ಅತ್ಯಂತ ಅವಶ್ಯಕತೆ

**ಗಮನಿಸಿ**

- *ಎಷ್ಟೋ ಜನ ನಂಬಿರುವಂತೆ ವೃಷಣಗಳು ಮೂತ್ರಪಿಂಡಗಳಲ್ಲ.*
- *'ಶವಪರೀಕ್ಷೆ' ಮಾಡುವಾಗ ಮೂತ್ರಪಿಂಡಗಳನ್ನು ತೆಗೆದುಕೊಳ್ಳಲಾಗುವುದಿಲ್ಲ. ವ್ಯಕ್ತಿ ಸತ್ತ ಅತ್ಯಲ್ಪ ಕಾಲದಲ್ಲೆ ಎಲ್ಲಾ ಅಂಗಗಳು ನಿರುಪಯುಕ್ತವಾಗುತ್ತದೆ. ಅವು ಬದುಕಿ ಬಳಕೆಗೆ ದೊರೆಯಬೇಕಾದರೆ ಲೇಖನದಲ್ಲಿ ವಿವರಿಸಿದ ಉಪಚಾರ ಅತ್ಯಗತ್ಯ.*
- *ಯಾವುದೊ ಶಸ್ತ್ರಚಿಕಿತ್ಸೆ ಮಾಡುವಾಗ ಅಥವಾ ರಕ್ತದಾನ ಮಾಡುವಾಗ ವ್ಯಕ್ತಿಯಿಂದ ಮೂತ್ರಪಿಂಡ 'ಕದಿಯುವುದು' ಅಸಂಭವ.*
- *ದಾನಿಯ ಮೂತ್ರಪಿಂಡಗಳಲ್ಲಿ ಚೆನ್ನಾಗಿ ಕೆಲಸಮಾಡುವಂಥದನ್ನು ಆತನಿಗಾಗಿ ಬಿಟ್ಟು ಇನ್ನೊಂದನ್ನು ಪಡೆಯಲಾಗುತ್ತದೆ.*
- *ದಾನಿಗಳಿಂದ ಮೂತ್ರಪಿಂಡ ಪಡೆಯುವಾಗ ಸಾಮಾನ್ಯವಾಗಿ ಎಡ ಮೂತ್ರಪಿಂಡಕ್ಕೆ ಆದ್ಯತೆ ನೀಡಲಾಗುತ್ತದೆ. ಯಾಕೆಂದರೆ ಅದರ ಅಭಿಧಮನಿ ಉದ್ದವೂ, ದೃಢವಾಗಿಯೂ ಇರುತ್ತದೆ.*
- *ಭಾರತದಲ್ಲಿ ಮೊದಲ ಮೂತ್ರಪಿಂಡ ಕಸಿಯನ್ನು ಕ್ರಿಸ್ತಶಕ ೧೯೭೧ರಲ್ಲಿ ವೆಲ್ಲೂರಿನಲ್ಲಿ ಮಾಡಲಾಯಿತು.*
- *ಮೂತ್ರಪಿಂಡ ಕಸಿ ಮಾಡಿದ ನಂತರ ಸರಾಸರಿ ಶೇ. ೭೦ ರೋಗಿಗಳು ಮೂರುವರ್ಷ ಹಾಗೂ ಶೇ. ೬೦ ರೋಗಿಗಳು ಐದು ವರ್ಷ ಆರೋಗ್ಯವಂತರಾಗಿ ಬದುಕುತ್ತಾರೆ.*
- *ಕಳ್ಳಸಂತೆಯಲ್ಲಿ ಕಿಡ್ನಿಗಳನ್ನು ಮಾರಲು ಅವೇನು ಚಿನ್ನದ ಬಿಸ್ಕತ್ತುಗಳಲ್ಲ. ಅವನ್ನು ಜೀವಂತವಾಗಿಡಲು, ಸಾಗಿಸಲು ವಿಶೇಷ ದ್ರಾವಣ, ವಿಶೇಷ ಉಪಕರಣ, ತಜ್ಞರ ಅವಶ್ಯಕತೆ ಇದೆ. ಈ ಸೌಲಭ್ಯಗಳು ಭಾರತದಲ್ಲಿ ಸುಲಭವಾಗಿ ಲಭ್ಯವೂ ಅಲ್ಲ!*




ಮೂತ್ರಪಿಂಡ ಕಸಿ

ಇರುವವರದೆ? ಇಲ್ಲವೆ ಸಾಮಾಜಿಕವಾಗಿ ಉಪಯುಕ್ತರಾದ ಜನರಿಗೊ ಅಥವಾ ಕಲಿತವರಿಗಾಗಿಯೊ? ಇದಾವುದೂ ಅಲ್ಲ, ಕಸಿ ಕಲಿತ ವೈದ್ಯರು, ತಂತ್ರಜ್ಞಾನ ಹೊಂದಿದ ಆಸ್ಪತ್ರೆಗಳ ಮರ್ಜಿಯ ಮೇಲೆ, ನಿರ್ದೇಶನದ ಮೇಲೆ ನಡೆಯುತ್ತದೆ ಎನ್ನುವವರೂ ಇಲ್ಲದಿಲ್ಲ. ಸದ್ಯದ ಸ್ಥಿತಿಯಲ್ಲಂತೂ ಹೇರಳ ದುಡ್ಡಿದ್ದವರ ಅಥವಾ ಸ್ವಲ್ಪ ಕಡಿಮೆ ದುಡ್ಡಿದ್ದರೂ ಸಂಬಂಧಿ ದಾನಿಗಳಿರುವವರ ಚಿಕಿತ್ಸೆಯಾಗಿ ಮಾತ್ರ ಇದು ಉಳಿದಿದೆ. ಜನಸಾಮಾನ್ಯರಿಗಾಗಿ ಭವಿಷ್ಯದಲ್ಲಿ ಒಳ್ಳೇ ದಿನಗಳನ್ನು ನಿರೀಕ್ಷಿಸೋಣ!

ಯಾರು ಏನೇ ಅನ್ನಲಿ; ವಿವಾದಗಳು ಎಷ್ಟೇ ಇರಲಿ, ಒಂದು ಸಾಮಾನ್ಯ ಪ್ರಾಯೋಗಿಕ ಕುತೂಹಲದ ಮಟ್ಟದಿಂದ ಅತ್ಯಂತ ಯಶಸ್ವಿ ಶಸ್ತ್ರಚಿಕಿತ್ಸೆಯವರೆಗಿನ 'ಮೂತ್ರಪಿಂಡ ಕಸಿ'ಯ ವಿಕಾಸ ಈ ಶತಮಾನದ ವೈದ್ಯಕೀಯ ಆಶ್ಚರ್ಯಗಳಲ್ಲೊಂದು. ಇದರಿಂದಾಗಿ, ಬರೀ ೩೫ ವರ್ಷಗಳ ಮೊದಲು ಮರಣಾಂತಿಕವಾಗಿದ್ದ ಕಾಯಿಲೆಯೊಂದನ್ನು ಉಪಚಾರ ಸಾಧ್ಯವಿರುವ ಒಂದು ಸಾಮಾನ್ಯ ರೋಗದ ಸ್ಥಾನಕ್ಕೆ ತಂದು ನಿಲ್ಲಿಸಲಾಗಿದೆ. ಈಗ ಜಗತ್ತಿನಲ್ಲಿ ಪ್ರತಿವರ್ಷ ಸರಾಸರಿ ೬೦೦೦ ಮೂತ್ರಪಿಂಡ ಕಸಿಗಳನ್ನು ಮಾಡಲಾಗುತ್ತದೆ. ಅಷ್ಟು ವ್ಯಕ್ತಿಗಳಿಗೆ ಜೀವದಾನ; ಅಷ್ಟು ಸಂಸಾರಗಳಿಗೆ ನೆಮ್ಮದಿ ನೀಡುತ್ತಿರುವುದು ವೈದ್ಯವಿಜ್ಞಾನ!

## ಡಯಾಲಿಸಿಸ್ ಎಂದರೇನು?

ಎರಡೂ ಮೂತ್ರ ಪಿಂಡಗಳು ಯಾವುದೇ ಕಾರಣಕ್ಕಾಗಿ ನಿಷ್ಕ್ರಿಯಗೊಂಡಾಗ ರಕ್ತದಲ್ಲಿ ಯೂರಿಯಾ, ಕ್ರಿಯಾನಿನ್ ಇತ್ಯಾದಿ ವಿಷಯುಕ್ತ ಪದಾರ್ಥಗಳ ಪ್ರಮಾಣ ಹೆಚ್ಚುತ್ತ ಹೋಗುತ್ತದೆ. ಇಂಥ ಪದಾರ್ಥಗಳನ್ನು ಕೃತ್ರಿಮ ವಿಧಾನಗಳಿಂದ ರಕ್ತದಿಂದ ಶೋಧಿಸಿ ರಕ್ತ ಶುದ್ಧೀಕರಣ ಮಾಡುವ ವಿಧಾನಕ್ಕೆ ಡಯಾಲಿಸಿಸ್ ಎಂದು ಕರೆಯಲಾಗುತ್ತದೆ.

ಡಯಾಲಿಸಿಸ್‌ನಲ್ಲಿ 'ಪೆರಿಟೋನಿಯಲ್ ಡಯಾಲಿಸಿಸ್' ಮತ್ತು 'ಹೀಮೋ ಡಯಾಲಿಸಿಸ್' ಎಂಬ ಎರಡೂ ವಿಧಗಳಿವೆ.

ಪೆರಿಟೋನಿಯಲ್ ಡಯಾಲಿಸಿಸ್: ಪೆರಿಟೋನಿಯಮ್ ಎಂಬುದು ಪ್ರತಿಯೊಬ್ಬರ ಉದರದೊಳಗೆ ಎಲ್ಲಾ ಅಂಗಾಂಗಗಳ ಸುತ್ತ ಹಾಗೂ ಉದರ ಗೋಡೆಯ ಒಳಪಕ್ಕ ಇರುವ ಚೀಲದಂಥ ಅತ್ಯಂತ ತೆಳ್ಳನೆಯ ಪೊರೆ. ಡಯಾಲಿಸಿಸ್ ಮಾಡಬೇಕಾದಾಗ ಉದರದ ಗೋಡೆಯ ಮುಖಾಂತರ ಒಂದು ನಳಿಕೆಯನ್ನು ಪೆರಿಟೋನಿಯಮ್‌ದೊಳಗೆ ತೂರಿಸಿ, ಉದರದ ಅತ್ಯಂತ ಕೆಳಭಾಗವಾದ ಮೂತ್ರಕೋಶ ಹಾಗೂ ನೆಟ್ಟಗರುಳಿನ ನಡುವಣ ಪೊಳ್ಳು ಜಾಗದಲ್ಲಿ ಕೊಳವೆಯ ತುದಿ ಇರುವಂತೆ ಸ್ಥಿರಗೊಳಿಸಲಾಗುತ್ತದೆ.

ರೋಗಾಣುಮುಕ್ತವಾದ ೧-೨ ಲೀಟರಿನಷ್ಟು ವಿಶೇಷ ಡಯಾಲಿಸಿಸ್ ದ್ರಾವಣವನ್ನು ಪೆರಿಟೋನಿಯಮ್ ಚೀಲದೊಳಗೆ ಹಾಕಲಾಗುತ್ತದೆ. ಹದಿನೈದು ನಿಮಿಷಗಳ ನಂತರ ಎಲ್ಲಾ ದ್ರಾವಣವನ್ನು ಹೊರತೆಗೆಯಲಾಗುತ್ತದೆ. ಈ ಅವಧಿಯಲ್ಲಿ ಪೆರಿಟೋನಿಯಮ್ ಒಂದು ಸೋಸುವ ಪರದೆಯಂತೆ ಕಾರ್ಯನಿರ್ವಹಿಸಿ ರಕ್ತದಲ್ಲಿರುವ ಕಶ್ಮಲಗಳನ್ನು ದ್ರಾವಣಕ್ಕೆ ವರ್ಗಾಯಿಸುತ್ತದೆ. ಈ ರೀತಿ ಪ್ರತಿ ಗಂಟೆಗೊಂದಾವರ್ತಿ ೪೮ ರಿಂದ ೭೨ ಗಂಟೆಗಳವರೆಗೆ ರಕ್ತದಲ್ಲಿರುವ ಕಶ್ಮಲದ ಪ್ರಮಾಣಗಳಿಗನುಸಾರ ಮಾಡಲಾಗುತ್ತದೆ.

ಹೀಗೆ ಪೆರಿಟೋನಿಯಲ್ ಡಯಾಲಿಸಿಸ್ ಮಾಡಲು ಸುಲಭದ್ದೂ ಅಗ್ಗ ಹಾಗೂ ವಿಶೇಷ ತಂತ್ರಜ್ಞಾನದ ಅವಶ್ಯಕತೆ ಇಲ್ಲದುದೂ ಆಗಿದೆ. ಆದರೆ ಶುದ್ಧೀಕರಣದ ಗುಣಮಟ್ಟ; ಮೇಲಿಂದ ಮೇಲೆ ಸೋಂಕು ತಗಲುವುದು; ನಳಿಕೆ ಕಟ್ಟಿ, ಹಾಕಿದ ದ್ರಾವಣ ಹೊರಗೆ ಬರದಂತಾಗುವುದು; ಉದರದ ಅಂಗಗಳಿಗೆ ಗಾಯಗಳುಂಟಾಗುವ ಸಾಧ್ಯತೆ; ರಕ್ತಸ್ರಾವ ಇತ್ಯಾದಿಗಳನ್ನು ಗಮನಿಸಿ ಈ ಪದ್ಧತಿಯನ್ನು ಈ ಕೆಳಗಿನ ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಳಸಲಾಗುತ್ತದೆ.

ಅಲ್ಪಾವಧಿಯ ಪೆರಿಟೋನಿಯಲ್ ಡಯಾಲಿಸಿಸ್‌ನ್ನು ೧) ಅಕ್ಯುಟ್ ರೀನಲ್ ಫೈಲ್ಯೂರ್ ೨) ಹೀಮೋ ಡಯಾಲಿಸಿಸ್‌ದ ತಯಾರಿ ನಡೆದಾಗ ೩) ಕ್ರಾನಿಕ್ ರೀನಲ್ ಫೈಲ್ಯೂರ್ ಇದ್ದ ರೋಗಿಗೆ ಧಿಡೀರಾಗಿ ರೋಗ ಉಲ್ಬಣಿಸಿದಾಗ ಉಪಯೋಗಿಸಲಾಗುತ್ತದೆ.

ಕ್ರಾನಿಕ್ ಅಂಬುಲೇಟರಿ ಪೆರಿಟೋನಿಯಲ್ ಡಯಾಲಿಸಿಸ್ (CAPD) ಎಂಬುದು ಬಹಳ ದಿನಗಳವರೆಗೆ ಸ್ಥಿರಗೊಳಿಸಿ, ರೋಗಿ ದಿನನಿತ್ಯದ ಚಟುವಟಿಕೆಗಳನ್ನು ನಿಭಾಯಿಸಬಲ್ಲಂಥದು. ಇದನ್ನು ೧) ರಕ್ತ ನಾಳಗಳು ಸರಿಯಾಗಿ ಸಿಗದಿದ್ದಾಗ ೨) ರಕ್ತನಾಳಗಳ ಸ್ಥಳದಲ್ಲಿ ಸೋಂಕು ಇದ್ದಾಗ ೩) ಹೃದಯಕ್ಕೆ ಸಂಬಂಧಿಸಿದ ಕಾಯಿಲೆಗಳಿದ್ದಾಗ ೪) ೭೫ ವರ್ಷಕ್ಕೂ ಮೇಲ್ಪಟ್ಟವರಲ್ಲಿ ೫) ರಕ್ತಸ್ರಾವದ ಸಮಸ್ಯೆಗಳಿದ್ದಾಗ ಮತ್ತು ೬) ಮಕ್ಕಳಲ್ಲಿ ಬಳಸಲಾಗುತ್ತದೆ.

ಹೀಮೋ ಡಯಾಲಿಸಿಸ್: ಮೂತ್ರ ಪಿಂಡ ರೋಗಿಗಳ ಆರೋಗ್ಯವಂತ ಬದುಕಿಗೆ ಅತ್ಯಂತ ಮಹತ್ತರ ಕೊಡುಗೆ ಹೀಮೋ ಡಯಾಲಿಸ್. ಈಗ್ಗೆ ಐವತ್ತು ವರ್ಷಗಳ ಮೊದಲು ಪ್ರಥಮ ಬಾರಿಗೆ ಬಳಕೆಗೆ ಬಂದ ಈ ವಿಧಾನ 'ಕಿಡ್ನಿ ಕಸಿ'ಗಾಗಿ ಕಾಯುವ

ರೋಗಿಗಳಿಗೊಂದು ವರದಾನ. ಈ ವಿಧಾನದಲ್ಲಿ ಸಾಮಾನ್ಯವಾಗಿ ಮಣಿಕಟ್ಟಿನ ಹತ್ತಿರವಿರುವ ಅಪಧಮನಿ ಹಾಗೂ ಅಭಿಧಮನಿಗಳ ನಡುವೆ ಟೆಫ್ಲಾನ್ ಸೈಲ್ಯಾಸ್ಟಿಕ್ ಕೊಳವೆಯ ಮುಖಾಂತರ ಕೃತ್ರಿಮ ಜೋಡಣೆ ಮಾಡಲಾಗುತ್ತದೆ. ಡಯಾಲಿಸಿಸ್ ಮಾಡುವುದಿದ್ದಾಗ ರಕ್ತನಾಳಗಳ ಕೊಳವೆಗಳನ್ನು ಡಯಾಲಿಸಿಸ್ ಯಂತ್ರಕ್ಕೆ ಜೋಡಿಸಲಾಗುತ್ತದೆ. ಅಪಧಮನಿಯಿಂದ ರಕ್ತ ಯಂತ್ರಕ್ಕೆ ಹೋಗಿ ಯಂತ್ರದಲ್ಲಿರುವ ಶುದ್ಧೀಕರಣ ಪದರಗಳಲ್ಲಿ ಹಾಯ್ದು ಅಭಿಧಮನಿಯ ಮುಖಾಂತರ ಶುದ್ಧ ರಕ್ತ ದೇಹಕ್ಕೆ ಮರಳುತ್ತದೆ. ಈ ರೀತಿಯ ಪ್ರಕ್ರಿಯೆಯನ್ನು ಒಬ್ಬ ೭೦ ಕಿ.ಗ್ರಾಂ. ತೂಗುವ ಮನುಷ್ಯನಿಗೆ ಪ್ರತಿಬಾರಿ ೬ ರಿಂದ ೧೦ ಗಂಟೆಯಷ್ಟು ವಾರದಲ್ಲಿ ಮೂರು ಬಾರಿ ಮಾಡಬೇಕಾಗುತ್ತದೆ. ಇದು ಮೂತ್ರಪಿಂಡ ಕಸಿ ಆಗುವವರೆಗೆ ಅಥವಾ ಜೀವನ ಪರ್ಯಂತ ನಡೆಯಬೇಕಾದ ಕ್ರಮ.

ಹೀಮೋ ಡಯಾಲಿಸಿಸ್ ಮಾಡುವದು ಕಷ್ಟಕರ. ಉಚ್ಚ ತಂತ್ರಜ್ಞಾನದ ಅವಶ್ಯಕತೆ, ವಿಶೇಷ ಯಂತ್ರಗಳ ಅನಿವಾರ್ಯತೆ, ವೆಚ್ಚದಾಯಕವಾದರೂ ಗುಣಮಟ್ಟ ಅತ್ಯಂತ ಉತ್ಕೃಷ್ಟವಾಗಿರುತ್ತದೆ ಮತ್ತು ರೋಗಿ ಆಸ್ಪತ್ರೆಗೆ ಬರುವ ಅವಧಿಯೂ ಕಡಿಮೆ.

## ಮೂತ್ರ ಪಿಂಡಗಳ ರಚನೆ ಮತ್ತು ಕಾರ್ಯವಿಧಾನ

ಮೂತ್ರ ಪಿಂಡಗಳು ಮೂತ್ರ ಜನಕಾಂಗ ವ್ಯೂಹದ ಒಂದು ಪ್ರಮುಖ ಅಂಗ. ಪ್ರತಿ ಮೂತ್ರ ಪಿಂಡವೂ ಪ್ರಕೃತಿ ನಿರ್ಮಿಸಿದ ಒಂದು ಅದ್ಭುತ ಸಾಣಿಗೆ ಮತ್ತು ಒಬ್ಬ ಮೇಧಾವಿ ರಸಾಯನ ತಜ್ಞ, ನಿರಂತರವಾಗಿ ರಕ್ತವನ್ನು ಸೋಸಿ, ಶುದ್ಧೀಕರಿಸಿ ಉಪಯುಕ್ತವಾದವುಗಳನ್ನು ವಾಪಸ್ ಕಳಿಸಿ, ನಿರುಪಯುಕ್ತವಾದುದನ್ನು ಮೂತ್ರವನ್ನಾಗಿ ವಿಸರ್ಜಿಸುತ್ತ ದೇಹದ ಲವಣ, ಜಲ, ಕ್ಷಾರಗಳನ್ನು ಕರಾರುವಾಕ್ಕಾಗಿ ನಿಯಂತ್ರಿಸುವ ಕಂಪ್ಯೂಟರ್ ಈ ಮೂತ್ರ ಪಿಂಡ!

ಪ್ರತಿಯೊಬ್ಬ ಮಾನವನಲ್ಲಿಯೂ (ಹೆಣ್ಣು ಹಾಗೂ ಗಂಡು) ಒಂದು ಜೋಡಿ ಮೂತ್ರಪಿಂಡಗಳಿದ್ದು ಪ್ರತಿಯೊಂದು ಸುಮಾರು ೧೫೦ ಗ್ರಾಂ. ತೂಗುತ್ತದೆ. ಅವು ಉದರದ ಮೇಲ್ಭಾಗದಲ್ಲಿ ಬೆನ್ನಿಗೆ ಅಂಟಿಕೊಂಡಂತಿದ್ದು ಕಶೇರುಕದ ಆಚೀಚೆ ಇರುತ್ತವೆ. (ಚಿತ್ರ-೧) ಪ್ರತಿಯೊಂದು ಮೂತ್ರಪಿಂಡವೂ ೧೦-೧೨ ಸೆ.ಮೀ ಉದ್ದ, ೫-೬ ಸೆ.ಮೀ ಅಗಲ ಹಾಗೂ ೪-೫ ಸೆಂ.ಮೀ. ದಪ್ಪವಾಗಿರುತ್ತವೆ. ಪ್ರತಿದಿನ ಹೃದಯದಿಂದ ಅಪಧಮನಿಗಳ ಮುಖಾಂತರ ೧೭೦೦ ಲೀಟರ್‌ಗಳಷ್ಟು ರಕ್ತ ಹರಿದು ಬರುತ್ತದೆ. ಈ



ರಕ್ತ ಗ್ಲೊಮೆರುಲಸ್ ಎಂದು ಕರೆಯಲ್ಪಡುವ ಅಸಂಖ್ಯಾತ ಆಲಿಕೆಯಂಥ ರಚನೆಗಳಲ್ಲಿ ಸುರಿಯಲ್ಪಡುತ್ತದೆ. ಈ ಆಲಿಕೆಗಳು ಪ್ರತಿ ಮೂತ್ರ ಪಿಂಡದಲ್ಲಿಯೂ ಒಂದೊಂದು ಮಿಲಿಯನ್ ಸಂಖ್ಯೆಯಲ್ಲಿರುತ್ತವೆ! (ಚಿತ್ರ-೨) ಈ ಆಲಿಕೆಗಳು ಜರಡಿಯಂತೆ ಕಾರ್ಯನಿರ್ವಹಿಸಿ ರಕ್ತಗೋಲಕಗಳನ್ನು ಬೇರ್ಪಡಿಸಿ ಶುದ್ಧ ಪ್ಲಾಸ್ಮಾವನ್ನು ಸ್ಪ್ರಿಂಗ್ ಆಕಾರದ ಚಿಕ್ಕ ನಳಿಕೆಗಳಿಗೆ ರವಾನಿಸುತ್ತವೆ. ಈ ನಳಿಕೆಗಳ ಸುತ್ತಲೂ ಇರುವ ಅಸಂಖ್ಯಾತ ಲೋಮನಾಳಗಳ ಮುಖಾಂತರ ದೇಹಕ್ಕೆ ಉಪಯೋಗವಿರುವ ಪ್ರೋಟೀನ್, ಲವಣಗಳು, ರಸಾಯನಗಳನ್ನು, ನೀರಿನ ಅಂಶವನ್ನೂ ಬೇರ್ಪಡಿಸಿ ವಾಪಸ್ ಕಳಿಸುತ್ತವೆ. ದೇಹಕ್ಕೆ ಅನವಶ್ಯಕವಾದ ಹಾಗೂ ವಿಷಯುಕ್ತವಾದ ಯೂರಿಯಾ, ಕ್ರಿಯಾಟಿನಿನ್, ಲವಣಗಳು, ಆಮ್ಲ, ಹೆಚ್ಚಿನ ನೀರು ಇತ್ಯಾದಿಗಳು ಮೂತ್ರದ ರೂಪದಲ್ಲಿ ವಿಸರ್ಜಿಸಲ್ಪಡುತ್ತವೆ. ಈ ಮೂತ್ರದ ಪ್ರಮಾಣ ಆರೋಗ್ಯವಂತ, ವಯಸ್ಕ ಮನುಷ್ಯನಲ್ಲಿ ೧೫೦೦ ಮಿ.ಲೀ ನಷ್ಟಿರುತ್ತದೆ. ಆದರೂ ದೈನಿಕ ಮೂತ್ರದ ಪ್ರಮಾಣ ಮತ್ತು ಸಾಂದ್ರತೆ ದಿನನಿತ್ಯದ ದ್ರವ-ಜಲ ಸೇವನೆ, (ಬೀರ್ ಕುಡಿದಾಗ ಮೂತ್ರ ಹೆಚ್ಚು!) ವಾತಾವರಣದ ಉಷ್ಣತೆ (ಚಳಿಗಾಲದಲ್ಲಿ ಹೆಚ್ಚು, ಬೇಸಗೆಯಲ್ಲಿ ಕಡಿಮೆ) ಬೇರೆ ಕಾರಣಗಳಿಗಾಗಿ ನಿರ್ಜಲೀಕರಣಗೊಂಡಾಗ (ವಾಂತಿ-ಭೇದಿ, ಜ್ವರ ಇ.) ಹೆಚ್ಚು ಕಡಿಮೆಯಾಗುತ್ತದೆ. ಆದರೆ ಯಾವುದೇ ಕಾರಣಕ್ಕೂ ೫೦೦-೬೦೦ ಮಿ.ಲೀ. ಗಿಂತ ಕಡಿಮೆಯಾಗುವುದಿಲ್ಲ, ಯಾಕೆಂದರೆ ದೇಹದ ವರ್ಜ್ಯ ಪದಾರ್ಥಗಳನ್ನು ಕರಗಿದ ಸ್ಥಿತಿಯಲ್ಲಿಡಲು ಕನಿಷ್ಟ ಇಷ್ಟು ಪ್ರಮಾಣದ ನೀರಿನಂಶ ಅಗತ್ಯ.

ಹೀಗೆ ತಯಾರಾದ ಮೂತ್ರ ಹನಿಹನಿಯಾಗಿ ಮೂತ್ರ ನಾಳಗಳ ಮುಖಾಂತರ ಹರಿದು ಬಂದು ಮೂತ್ರಾಶಯದಲ್ಲಿ ಸಂಗ್ರಹವಾಗುತ್ತದೆ, ಪ್ರಶಸ್ತ ಸ್ಥಳ ಹಾಗೂ ವೇಳೆಯಲ್ಲಿ ವಿಸರ್ಜನೆಗೊಳ್ಳಲು!

ತಮ್ಮ ನಿರಂತರ, ಕ್ಲಿಷ್ಟ ಚಟುವಟಿಕೆಗಳಿಂದ ದೇಹದ ಆಂತರಿಕ ರಾಸಾಯನಿಕ ಪರಿಸರವನ್ನು ಕಾಪಾಡುವುದಲ್ಲದೆ ಮೂತ್ರಪಿಂಡಗಳು ಇನ್ನಿತರ ಜೈವಿಕ ಕಾರ್ಯಗಳನ್ನೂ ನಿರ್ವಹಿಸುತ್ತವೆ.

ಕೆಂಪು ರಕ್ತಕಣಗಳ ವೃದ್ಧಿಗೆ ಅವಶ್ಯವಾದ ಎರಿಥ್ರೊಪಾಯಿಟಿನ್ ಎಂಬ ಅಂತಃಸ್ರಾವಕವನ್ನು, ಪ್ರೋಸ್ಟಾಗ್ಲಾಂಡಿನ್ ಮತ್ತು ಕೈನಿನ್ ಎಂಬ ಕಿಣ್ವಗಳನ್ನು, ಕ್ಯಾಲ್ಸಿಯಮ್‌ನ ಬಳಕೆಗೆ ಅತ್ಯವಶ್ಯವಾದ ೧-೨೫ ಡೈ ಹೈಡ್ರಾಕ್ಸಿಕೋಲ್ ಕ್ಯಾಲ್ಸಿಫೆರಾಲ್ ಎಂಬ ಜೀವಸತ್ವವನ್ನೂ ಮೂತ್ರ ಪಿಂಡಗಳು ಉತ್ಪಾದಿಸುತ್ತವೆಂದರೆ ಅವುಗಳ ಬಹುಮುಖ ಕಾರ್ಯದ, ಮತ್ತು ಮಹತ್ವದ ಅರಿವಾದೀತು! ಇದಲ್ಲದೆ ಇತರ ಅಂತಃಸ್ರಾವಕಗಳ ಪ್ರಮಾಣ ದೇಹದಲ್ಲಿ ಅಗತ್ಯಕ್ಕಿಂತ ಹೆಚ್ಚಾದಾಗ ಅವುಗಳನ್ನು ಮೂತ್ರದ ಮೂಲಕ ವಿಸರ್ಜಿಸಿ ಆಂತರಿಕ ಪರಿಸರವನ್ನು ಆರೋಗ್ಯಕರವಾಗಿ ಇಡುವಲ್ಲಿಯೂ ಮಹತ್ವದ ಪಾತ್ರವಹಿಸುತ್ತವೆ.

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2. Residency Road, Bangalore-560 025. (Phone: 2213265).

**Managing Editor: K. SHAMARAO**

Registered with the Registrar of Newspaper for India under No. 3633/57.




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ ಅನುವಾದ: ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು

ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.

ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

KASTURI, Kannada Digest Reg No. KRNG - 43, Licence No. L2120 - WPP No. 33 Price - Rs. 6-0